ಮುದ್ರಕರು

ಶ್ರೀ. ಮೋಹರೆ ಹಣಮಂತರಾಯರು,

ಸಂಯುಕ್ತ ಕರ್ನಾಟಕ ಮುದ್ರಣಾಲಯ,

ಹುಬ್ಬಳ್ಳಿ










ಬೆಲೆ : ೫ ರೂಪಾಯಿ

ಪ್ರಕಾಶಕರು :

ಶ್ರೀ. ನಾಡಿಗೇರ ಲಕ್ಷ್ಮಣರಾಯರು,

ಶ್ರೀ ಅರವಿಂದ ಮಂಡಲ, ದೇಶಪಾಂಡೆ ನಗರ,

ಹುಬ್ಬಳ್ಳಿ

# ಪರಿವಿಡಿ

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೪ | ೯ | ಸಮಪಿತ | ಸಮರ್ಪಿತ |
| ೧೨ | ೧೦ | ಉದ್ಬಾಸಿತ | ಉದ್ಭಾಸಿತ |
| ೩೩ | ೧೦ | ಅತಂಸ್ತು | ಅಂತಸ್ತು |
| ೩೭ | ೧ | ಕೇಶ | ಕೇನ |
| ೩೬ | ೪ | ತತ್ತ್ವವು | (ಬಿಟ್ಟು ಓದಿರಿ) |
| ೬೮ | ೧೮ | ಪ್ರಜಾಸ್ಪತಿ | ಪ್ರಜಾಪತಿ |
| ೭೧ | ೨೪ | ಅನಾರೋಗ್ಯವೂ | ಆರೋಗ್ಯವೂ |
| ೯೫ | ೨೧ | ಸುರೂಪವೆಂದೂ ನನಗೆ | ಸುರೂಪವೆಂದೂ ನಿನಗೆ |
| ೧೧೧ | ೨೮ | ಸಂಪನ್ನನಿರಲಿ | ಸಂಪನ್ನವಿರಲಿ |
| ೧೧೪ | ೨೨ | ದಂಧಗಾರಿಕೆಯಲ್ಲ | ದಂಧಗಾರಿಕೆಯೆಲ್ಲ |
| ೧೨೨ | ೧೨ | ಉಕಿ | ಉಕ್ತಿ |
| ೧೨೬ | ೧೮ | ಮಧ್ಯಾಹ್ನದ | ಮಧ್ಯಾಹ್ನದ |
| ೧೪೬ | ೧೭ | ಯೆವೇಗಕ್ಕಾಗಿ | ಯೋಗಕ್ಕಾಗಿ |
| ೧೪೮ | ೨೧ | ಮರ್ಷಿಸು | ವರ್ಷಿಸು |

# ನಮಸ್ಕಾರ

[ ಶ್ರೀ ರವೀಂದ್ರನಾಥ ಠಾಕೂರರು, ೧೯೦೭ ರಲ್ಲಿ ಶ್ರೀ ಅರವಿಂದರು ಭಾರತದ ರಾಜಕೀಯ ನಾಯಕರಾಗಿ ಸೆರೆಮನೆಯಲ್ಲಿದ್ದಾಗ, ಅವರನ್ನು ಕುರಿತು ಬರೆದ ಈ ನೀಳ್-ಗವನವು ಮೊದಲು ೧೯೦೭ರ ಸಪ್ಟೆಂಬರ ೮ಕ್ಕೆ 'ಬಂದೇ ಮಾತರಂ' ಪತ್ರಿಕೆಯಲ್ಲಿ ಅಚ್ಚಾಯಿತು. ಈ ಮೂಲ ಬಂಗಾಲಿ ಪದ್ಯದ ಇಂಗ್ಲಿಷ್ ಅನುವಾದವು "Sri Aurobindo Annual, Calcutta, 1944" ದಲ್ಲಿ ಮೊದಲಿಗೆ ಅಚ್ಚಾಯಿತು. ಮೂಲ ಬಂಗಾಲಿಯಿಂದಲೇ ಮಾಡಿದ ಈ ಕನ್ನಡ ಅನುವಾದವು ಈಗ ಅಚ್ಚಾಗುತ್ತಿದೆ. ವಂಗ ಮತ್ತು ಇಂಗ್ಲಿಷ್ ಆವೃತ್ತಿಗಳೆರಡು ಪಾಂಡಿಚೇರಿಯ 'Salutation to Sri Aurobindo' ಎಂಬ ಚಿಕ್ಕ ಪುಸ್ತಕದಲ್ಲಿ ದೊರೆಯುತ್ತವೆ ]

ಈ ರವೀಂದ್ರನು ನಮಿಪ, ಮಿತ್ರ ಅರವಿಂದ, ಇಂದು !
ದೇಶದಾತ್ಮದ ವಾಣಿ-ಮೂರ್ತಿ ನೀ ದೇಶಬಂಧು !
ನಿನಗಾಗಿ ಇಲ್ಲ ಧನ, ಇಲ್ಲ ಸುಖ, ಇಲ್ಲ ಮಾನಾ
ಬಯಸೆ ನೀ ಯಾವೊಂದು ಕ್ಷುದ್ರ ಕೃಪೆ, ಕ್ಷುದ್ರ ದಾನಾ !
ಆತುರಾಂಜಲಿಯನೊಡ್ಡಿಲ್ಲ ನೀ ಭಿಕ್ಷೆಗಾಗಿ;
ಸರ್ವಬಾಧಾಹೀನ ಪೂರ್ಣತೆಯ ಜನ್ಮಕಾಗಿ
ಎಚ್ಚರಿಹೆ; ಇದಕಾಗಿ ನರ-ದೇವ ತಪದಿ ಮಗ್ನ
ಚಿರ ರಾತ್ರಿದಿನ, ಕವಿಯು ವಜ್ರರವ-ಗಾನಲಗ್ನ;
ಇದಕಾಗಿ ನೊಂದಿಹರು ಎಂಟೆದೆಯ ಬಂಟರೆಲ್ಲಾ
ಸಂಕಟದ ಯಾತ್ರೆಯಲಿ, ಆರಾಮವೆಂಬುದೆಲ್ಲಾ
ಇದರ ಬಳಿ ಲಜ್ಜೆಯಲಿ ನತಶಿರದಿ ನಾಚಿ ಇಹುದು ;
ಮೃತ್ಯು ಭಯ ಮರೆತಿಹುದು; ಪೂರ್ಣಾಧಿಕಾರವಿಹುದು
ನಿನ್ನದೇ ಆ ವಿಧಾತನ ಶ್ರೇಷ್ಠ ದಾನದಲ್ಲಿ !
ಏನಿದು ಅಖಂಡ ವಿಶ್ವಾಸವೀ ದೇಶದಲ್ಲಿ !
ನಿನ್ನೆಳೆತ-ಸೆಳೆತಗಳು ದೇಶಹಿತದಲ್ಲಿ ತೃಪ್ತ;
ತವ ವಾಣಿ ಸತ್ಯಗೌರವ-ದೃಪ್ತ ಸುಪ್ರದೀಪ್ತ !

ತವ ಪ್ರಾರ್ಥನೆಯನಿಂದು ಕೇಳಿದನೆ ಆ ವಿಧಾತಾ ?
ಊದಿದನೆ ತನ್ನ ಆ ಜಯಶಂಖವನ್ನೆ ಆತಾ ?
ನಿನ್ನ ದಕ್ಷಿಣಕರದಿ ದುಃಖ–ದಾರುಣ ದೀಪವಾ
ಕೊಟ್ಟನೆ ಕಠೋರ ಆದರದಿ ನಿನಗನುರೂಪವಾ ?
ಆದರ ಉಜ್ಜ್ವಲ ಪ್ರಭೆಯು ದೇಶದಂಧಃಕಾರದಿ
ಧ್ರುವತಾರೆ! ಉಗ್ಗಡಿಸೆ ತವ ಶುಭದ ಜಯಕಾರದಿ !
ಆಳುವ ಹೇಡಿಗಳೆಲ್ಲಿ ? ಯಾರಿಂದು ಅಂಜುವವರು ?
ಸ್ವಾರ್ಥಿ ಕಾಪುರುಷರಾರ್ ಸತ್ಯವನು ಹಿಂಜುವವರು ?
ನಿನ್ನ ವೇದನೆಯಿಂದ ಹುರಿಗೊಳದ ನರರಿರುವರೇ ?—
ಎಲವೊ ದುರ್ಬಲ ಚಕ್ಷು, ಅಶ್ರು ಇನ್ನೂ ಸುರಿವರೇ ?

ನೋಡು ಭವದಲಿ ಇಳಿದ ರುದ್ರದೂತನ ರೂಪವ !
ಹಿಡಿದಿಹನು ಹಸ್ತದಲಿ ಆ ದೇವತಾ-ದೀಪವ !
ಯಾವ ರಾಜನು ತಾನೆ ಇವನ ದಂಡಿಸಲು ಬಲ್ಲಾ ?
ಬಂಧಿಸಲು ಬಂದ ಶೃಂಖಲೆ ಅಡಿಗೆ ಮಣಿವವಲ್ಲಾ !
ಅಭ್ಯರ್ಥಿಸುವುದು ಕಾರಾಗೃಹವೆ ನಿನ್ನನಿಂದು !
ರುಷ್ಟ ರಾಹುವು ವಿಧಾತನ ಸೂರ್ಯನೆದುರು ಬಂದು
ಛಾಯೆಯೊಲು ನಿಮಿಷದಲಿ ಲುಪ್ತನಾಗುವನು ತಾನೆ !
ಶಾಸ್ತಿಯೇ ನಿನಗೆ ? ಅದು ನಿನ್ನ ಬಳಿ ಸುಳಿದರಾಣೆ !
ಯಾರು ಮಿಥ್ಯಾಪ್ರಾಂತ–ಕಪಟ–ವೇಷ್ಟನದೊಳುಂಟು,
ಹೊರಬರದ ಆ ಶಾಸ್ತಿಭೀತರಿಗೆ ಶಾಸ್ತಿಯುಂಟು !
ಅನ್ಯಾಯಕನ್ಯಾಯವೆಂದು ಕರೆಯುದವ ನರನೇ ?
ಅವನೆ ಅಡಿಗಡಿಗೆ ತಾಳ್ದವ ನಪುಂಸಕನು ಇರನೇ ?
ಸ್ವಾಧೀನ ನಿರ್ಭಯದಿ ಧರ್ಮಸ್ಥಾನದಲಿ ನಿಂತು
ಅನ್ಯಾಯವೆದುರಿಸದ ಆ ನರಗೆ ಶಾಸ್ತಿಯುಂಟು !
ನಮ್ಮ ಮನುಜತ್ವ ವಿಧಿದತ್ತ ನಿತ್ಯಾಧಿಕಾರ -
ಭಯದಿ ಲೋಭದಿ ಯಾರು ಬಳಸರೀ ಸ್ವಾಧಿಕಾರ,
ಇಂಥ ನಿರ್ಲಜ್ಜ ಜನರಿರೆ ನಾಡಿಗೇನು ಫಲವು ?
ದುರ್ಗತಿಯೊಳಭಿಮಾನ ಪಡುವುದೇ ಇವರ ಛಲವು !
ತಾಯ್ನಾಡ ದುರ್ದಶೆಯೆ ಯಾರ ಲಾಭದ ಹೂಟವೋ,
ಯಾರಿಗೆ ಅಕಲ್ಯಾಣವೆಂಬುದೇ ಸವಿಯೂಟವೋ,
ಮಾತೃರಕ್ತವು ಯಾರ ಧನವೊ, ಆ ಭೀರುವಿಲ್ಲಿ
ನಿತ್ಯ ಕಾರಾಗೃಹದಿ ಚಿರ ಶಾಸ್ತಿಭಾರದಲ್ಲಿ
ರಾಜಕಾರಾಗೃಹದ ಹೊರಗೆ ನತಶಿರದಿ ಕುಳಿತು
ಒಂಟಿಯಾಗಿ ಸಮಾಜಬಾಹಿರನು ಹೋಹ ಕೊಳೆತು !

ದುಃಖ ಬಂಧನ ಅಸಮ್ಮಾನ ಪೀಡನ ಮಧ್ಯದಿ
ತವ ಮೂರ್ತಿ ಕಂಡೊಡನೆ ನನ್ನ ಕರ್ಣದಿ ಸದ್ಯದಿ
ಬಾಜಿಪುದು ಆತ್ಮದಾನಂದ-ಸ್ವಚ್ಛಂದ ಗಾನಾ,
ಆ ಮಹಾ ತೀರ್ಥಯಾತ್ರಿಕನ ಸಂಗೀತ ತಾನಾ,
ಚಿರಪ್ರಾಣದಾಶೆಯಾ ಉಲ್ಲಾಸಮಯ ವಿಲಾಸಾ,
ಗಂಭೀರ ಮೃತ್ಯುವಾಣಿಯ ಅಭಯ ಸದಯ ಹಾಸಾ!
ಭರತ ವೀಣಾವಾಣಿ, ಓ ಕವಿಯೆ, ನಿನ್ನ ಮುಖದಿ
ತನ್ನ ದೃಷ್ಟಿಯ ಬೀರಿ ಬೀಣೆ ಮಿಡಿಮಿಡಿಯೆ ಸುಖದಿ,
ತಂತಿ ತಂತಿಗಳಿಂದ ಝಂಕಾರವೇಳುತಿಹುದು;
ಕ್ಷುದ್ರ ಲಜ್ಜಾ-ದುಃಖರಹಿತ ಹಿತ ಬಾಳುತಿಹುದು!
ಇಲ್ಲ ದೈನ್ಯವು ಇಲ್ಲಿ, ಇಲ್ಲ ಸಂತ್ರಾಸವಿಲ್ಲಿ,—
ಕಡಲ ಗರ್ಜನೆ ಕೇಳ್ಳಿನಿಂದು ಬಿರುಗಾಳಿಯಲ್ಲಿ!
ನಿರ್ಝರದ ಉನ್ಮತ್ತ ನರ್ತನದ ಅಂಧವೇಗ
ಪಾಷಾಣ ಪಂಜರವನೊಡೆದು ಸೀಳುತಿದೆ ಬೇಗ!
ಊದಿದೆ ತುತೂರಿಯನು ಆ ವಜ್ರಗರ್ಜಾರವ,
ಮೇಘಪುಂಜದಿ ತಾನೆ ಜಾಗೃತನು ಶ್ರೀಭೈರವ!
ಸುತ್ತಿರೆ ಉದಾತ್ತ ಸಂಗೀತದ ತರಂಗ ಬಂದು,
ಈ ರವೀಂದ್ರನು ನಮಿಪ, ಮಿತ್ರ ಅರವಿಂದ, ಇಂದು!

ಇನ್ನು ನಾ ನಮಿಪೆ ಕ್ರೀಡಾಲೋಲ ಭಗವಂತಗೆ,
ಪ್ರಳಯಾನಲದಿ ನೂತ್ನ ಸೃಷ್ಟಿಯನು ಗೈವಂಥಗೆ,
ಮೃತ್ಯುಗರ್ಭದಿ ಅಹೋ ಪ್ರಾಣವನು ಇಟ್ಟಂಥಗೆ
ವಿಪದಗಳ ಹೃದಯದಲಿ ಸಂಪದವ ಪೊರೆವಂಥಗೆ —!
ಶತ್ರುಗಳ ಮಧ್ಯದಲಿ ಕಂಟಕದ ಕಾಂತಾರದಿ
ರಿಕ್ತ ಹಸ್ತದಿ ನಿಶೆಯ ದಟ್ಟ ಅಂಧಃಕಾರದಿ
ಭಕ್ತರನು ತಾನೆ ನಗೆಮೊಗದಿ ಬೀಳ್ಕೊಡುವಂಥಗೆ
ಇನ್ನು ನಾ ನಮಿಪೆ ಕ್ರೀಡಾಲೋಲ ಭಗವಂತಗೆ!
ಜಗದ ನಾನಾ ಕಂಠ, ಬಹು ಪುರಾಣೇತಿಹಾಸ,—
ವೀರರ ಮಹತ್ಕಾರ್ಯ, ಸಾಹಸದ ಆ ಪ್ರಯಾನ,—
ಇವುಗಳಲಿ ಮೈಗೊಂಡು ಒಡನುಡಿಯುತಿಹನು ಇಂತು
ಜೀವನದ ಚರಮ ಅನುಭವದ ಲಾಭದಲಿ ನಿಂತು:
"ದುಃಖ ಲೇಶವು ಇಲ್ಲ, ಕ್ಷತವಿಲ್ಲ, ಕ್ಷತಿಯಿಲ್ಲವು ·
ಮೃತ್ಯುವಿನ ಭಯವಿಲ್ಲ, ಮಿಥ್ಯ ಗಡ ಭಯವೆಲ್ಲವು;—
ಎಲ್ಲಿಯವನಾ ರಾಜ? ಆ ರಾಜದಂಡ ಮಿಥ್ಯೆ!
ಅನ್ಯಾಯವೆಲ್ಲಿ, ಅತ್ಯಾಚಾರವೆಲ್ಲಿ ಮತ್ತೆ?

ಸಮರ್ಪಣ

ಓ ಭೀರು, ಓ ಮೂಢ, ಏಳಲ್ಯೆ ನಿನ್ನ ಶಿರವು;
ನಾನಿರುವೆ, ನೀನಿರುವೆ, ಸತ್ಯವೂ ಇಹುದು ಸ್ಥಿರವು !''

೩ ಭಾದ್ರ. ೧೩೧೪, ಬಂಗಾಲಿ ಶಕೆ
( ಇಸ್ವಿ ಸನ್ ೧೯೦೭ )
ಶಾಂತಿನಿಕೇತನ, ಬೋಲಪುರ

**ರವೀಂದ್ರನಾಥ ಠಾಕುರ**

— ಪ್ರಹ್ಲಾದ ನರೇಗಲ್ಲ [ ಅನುವಾದಕ ]

---

ಪರಮಾತ್ಮನನ್ನುಳಿದು ಜೀವನವೊಂದು ದುಃಖದಾಯಕ ಭ್ರಮೆ. ಪರಮಾತ್ಮನೊಂದಿಗೆ ಎಲ್ಲವೂ ಆನಂದ.

× × × ×

ಪರಮಾತ್ಮನ ನಳಿದೋಳುಗಳಲ್ಲಿ ಆಶ್ರಯ ಪಡುವುದರಿಂದ ಎಲ್ಲ ಕಷ್ಟಗಳು ತಪ್ಪುತ್ತವೆ. ಏಕೆಂದರೆ ಆ ತೋಳುಗಳು ನಮಗೆ ಆಶ್ರಯನೀಯಲು ಯಾವಾಗಲೂ ಪ್ರೇಮದಿಂದ ಚಾಚಿರುತ್ತವೆ.

× × × ×

ಪರಮಾತ್ಮನೆಡೆಗೆ ಹೊರಳು, ನಿನ್ನ ಕಷ್ಟಗಳೆಲ್ಲ ಮರೆಯಾಗುವವು.

× × × ×

ಪರಮಾತ್ಮನಿಗೆ ಯಥಾರ್ಥವಾಗಿ ಸಮರ್ಪಿತರಾಗುವುದರಿಂದಲೇ ನಾವು ನಮ್ಮ ಮಾನವೀಯ ಕಷ್ಟಗಳಿಂದ ಪರಿತ್ರಾಣ ಹೊಂದುವೆವು.

— ತಾಯಿಯವರು

# ಶ್ರೀ ಅರವಿಂದರು

ಶ್ರೀ ಅರವಿಂದರು ಇಂದು ಬಹುತರವಾಗಿ ಯೋಗಿಗಳೆಂದೂ, ಏಕಾಂತಪ್ರಿಯರೆಂದೂ, ತಪಸ್ವಿಗಳೆಂದೂ ಜನರ ತಿಳುವಳಿಕೆಯಾಗಿದೆ. ಯೋಗ, ಏಕಾಂತಪ್ರಿಯತೆ, ತಪಸ್ಸು ಇವೆಲ್ಲ ಅವ್ಯವಹಾರಿಗಳಿಗೆ ಬೇಕಾಗುವ ವಿಷಯಗಳೆಂದು ವ್ಯವಹಾರಕುಶಲರೆಂಬವರಿಂದ ನಿಶ್ಚಿತವಾಗಿ ಬಿಟ್ಟಿದೆ. ಯೋಗಿಗಳು ಕೈಲಾಗದ ಜೋಗಿಗಳೆಂದೂ ಏಕಾಂತಪ್ರಿಯರು ಮಂದಿಯೊಳಗಿಂದ ಎದ್ದುಹೋದವರೆಂದೂ, ತಪಸ್ವಿಗಳು ಗಾಳಿಗೆ ಗುದ್ದಿ ಮೈನೋಯಿಸಿಕೊಳ್ಳುವ ವ್ಯರ್ಥ ಸಾಹಸಿಗಳೆಂದೂ ಬುದ್ಧಿವಂತರೆಂಬವರು ತೀರ್ಮಾನಿಸಿದಂತೆ ತೋರುತ್ತದೆ. ಆದರೆ ಶ್ರೀ ಅರವಿಂದರು ಕಳೆದ ೪೦ ವರ್ಷಗಳಲ್ಲಿ ಯೋಗ-ಏಕಾಂತ-ತಪಸ್ಸುಗಳಿಂದ ಅತುಲ ಜ್ಞಾನಶಕ್ತಿಯನ್ನು ದೊರಕಿಸಿ, ಜ್ಞಾನದ ಹಿಮಾಲಯವೆನ್ನುವಂಥ ಸಾಹಿತ್ಯವನ್ನು ನಿರ್ಮಾಣ ಮಾಡಿದ್ದು ಕಣ್ಣಿಂದ ಕಾಣಬಹುದಾಗಿದೆ; ಶಕ್ತಿಯ ಅಜೇಯ ಸಾಮರ್ಥ್ಯದಿಂದ ಜಗತ್ತಿನ ಸರ್ವ ವಿಷಯಗಳಲ್ಲಿಯೂ ಕೃಷಿ ನಡೆಯಿಸಿರುವುದನ್ನು ಅರಿಯಬಹುದಾಗಿದೆ.* ಜ್ಞಾನದಿಂದ ಮೊದಲು ಉಸುರಿದ್ದನ್ನು ಇಂದು ಶಕ್ತಿಯಿಂದ ಕುಸುರಿಸುವ ಕೆಲಸದಲ್ಲಿ ನಿರತರಾದ ಶ್ರೀ ಅರವಿಂದರು, ಶ್ರೀ ಮಾತಾಜಿಯವರ ದಿವ್ಯ ನೆರವಿನಿಂದ ಪೃಥ್ವಿಯ ಮೇಲೆ ಪೂರ್ಣಯೋಗದ ದಾರಿಯಿಂದ ಪೂರ್ಣ ಮಾನವರನ್ನೂ ಪೂರ್ಣ ಜಗತ್ತನ್ನೂ ನಿರ್ಮಿಸುವ ಕಾರ್ಯವನ್ನು ಪೂರ್ಣಗೊಳಿಸುವ ಹೂಣಿಕೆ ತೊಟ್ಟಿದ್ದಾರೆ. ಆ ಹೂಣಿಕೆ ಶ್ರೀ ಅರವಿಂದರು ಹಾಗೂ ಶ್ರೀ ತಾಯಿಯವರು ತೊಟ್ಟ ಹೂಣಿಕೆಯಲ್ಲ; ಪರಮಾತ್ಮನು ಸಂಕಲ್ಪಿಸಿ ಕೊಟ್ಟ ಹೂಣಿಕೆಯದು. ಶ್ರೀ ತಾಯಿಯವರು ಅವಿದ್ಯೆಯಿಂದ ಜಗತ್ತಿನೊಳಗಿನ ಮೃತ್ಯುವನ್ನು ಗೆಲ್ಲುವ ಉದ್ದಿಮೆಯಲ್ಲಿಯೂ, ಶ್ರೀ ಅರವಿಂದರು ವಿದ್ಯೆಯಿಂದ ಜಗತ್ತಿನಲ್ಲಿ ಅಮೃತವನ್ನು ಸ್ಥಾಪಿಸುವ ಧಾವತಿಯಲ್ಲಿಯೂ ತೊಡಗಿದ್ದಾರೆಂದು ಹೇಳಬಹುದು.§

ಅವರಿಗೆ ಗೃಹಕರ್ತವ್ಯ ಜೀವಿತಗಳಲ್ಲಿ ವೈರಾಗ್ಯವುಂಟಾಗಲು ಕಾರಣವೇನು? ಜನ ಜಂಜಾಟಕ್ಕೆ ಅಸಹ್ಯಪಟ್ಟುಕೊಂಡುದು ಏಕೆ? ಇಜ್ಜೋಡು ಸಂಸಾರ ಕಟ್ಟಿಕೊಂಡು ಕರುಳು ಹರಿಯುವಂತೆ ಜಗ್ಗಾಡಿ ಅವರು ಸಂನ್ಯಾಸಕ್ಕೆ ಮೊರೆಹೊಕಿದ್ದಾರೆಂದು ಯಾರೂ ತಿಳಿದುಕೊಳ್ಳುವ ಕಾರಣವಿಲ್ಲ. ಮನಸ್ಸು ತುಂಬುವಷ್ಟು ಬುದ್ಧಿ, ಸಹಜವಾಗಿ ಗಳಿಸಲಿಕ್ಕಾಗದ ವಿದ್ಯೆ, ಅಪ್ರತಿಹತ

* ಕನ್ನಡದಲ್ಲಿಯೂ ಸಿಗುವ "ಶ್ರೀ ಅರವಿಂದರು" ಎಂಬ ಚರಿತ್ರ ನೋಡಿರಿ.

§ "ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽಮೃತಮಶ್ನುತೇ" (ಈಶೋಪನಿಷತ್ತು).
'ಅವಿದ್ಯೆ'='ಅವಿದ್ಯಮಾನ'ದ-ಜಗತ್ತಿನ ಸಕಲ ಶಾಸ್ತ್ರ-ಕಲೆಗಳ ಜ್ಞಾನ; 'ವಿದ್ಯೆ'='ವಿದ್ಯಮಾನ'ದ-ನಿತ್ಯತತ್ತ್ವದ ಜ್ಞಾನ.

ಪ್ರತಿಭೆ, ವಿಪುಲವಾದ ಅರ್ಥಸಂಪತ್ತು, ಸುಸಂಸ್ಕೃತ ಬಾಂಧವ್ಯ ಇಷ್ಟೆಲ್ಲಾ ಅವರಿಗೆ ಸ್ಥಾವರ ಆಸ್ತಿಯಾಗಿತ್ತು. ವಿದ್ಯಾರ್ಥಿಗಳಿಗೆ ಅಕ್ಕರೆಯ ಸಕ್ಕರೆಯಾದ ಗುರು, ರಾಜಕಾರಣದಲ್ಲಿ ರಾರಾಜಿಸಿ ದಿಕ್ಕು ತೋರಿಸುವ ತೇಜೋವಂತ ನಕ್ಷತ್ರ, ತರುಣ ಜಂಗುಳಿಯ ಬೆಂಬಲ ಕಟ್ಟಿಕೊಂಡ ಅದಮನೀಯ ಯೋದ್ಧಾರ-ಆಗಿರುವ ಇವರನ್ನು ಸ್ಥಾನತ್ಯಾಗ ಮಾಡಿಸಿದ ಲೌಕಿಕ ಶತ್ರು ಯಾರಿರಬಹುದು? ಸರಕಾರಕ್ಕೆ ಅಂಜಿದರೆ? ಪ್ರತಿರೋಧದ ಪಂಗಡಕ್ಕೆ ಬೆದರಿದರೆ? ಜನಾನುರಾಗವು ತಪ್ಪಿ ನಿರ್ಜನ ಪ್ರದೇಶಕ್ಕೋಡಿಹೋಗುವ ಪ್ರಸಂಗ ಬಂದಿತೇ? ಅವರ ಶಿಕ್ಷಣ, ಕಾವ್ಯಶಕ್ತಿ, ಅಭ್ಯಾಸ, ರಾಷ್ಟ್ರಕಾರ್ಯ, ಕಾರಾಗೃಹವಾಸ ಮೊದಲಾದ ಜೀವನದೊಳಗಿನ ಪ್ರತಿಯೊಂದು ಘಟನೆಯೂ ದೈವೀ ಸಂಕಲ್ಪಾನುಸಾರವಾಗಿ ಒದಗಿ ಬಂದು, ಈ ಹೊತ್ತು ಅವರನ್ನು ಜಗತ್ತಿನ ಅಗ್ರಪಟ್ಟದಲ್ಲಿ ಕುಳ್ಳಿರಿಸಿದೆಯೆಂದು ಹೇಳಬಹುದಾಗಿದೆ. ಪ್ರತಿ ಒಂದು ವಿಷಯವು ಪೂರ್ಣಯೋಗದ ಪರಿಪೂರಣಕ್ಕೆ ದಾರಿ ಹಾಕಿಕೊಟ್ಟಿತೆಂದೂ, ಪೂರ್ಣಮಾನವ್ಯದ ಧ್ಯೇಯಕ್ಕೆ ದೃಷ್ಟಿ ತಂದುಕೊಟ್ಟಿತೆಂದೂ ಹೇಳಬಹುದು. ಅದರಂತೆ ಶ್ರೀ ಮಾತಾಜಿಯವರ ಮಧುರ ಮಿಲನವು ಭಾರತ-ಯುರೋಪುಗಳ ಅಪೂರ್ವ ಸಂಗಮದಂತೆ ಕಂಗೊಳಿಸುತ್ತಲಿದೆ.

ಭಾರತದ ಪತಿತ ಜನಾಂಗವನ್ನು ಉದ್ಧರಿಸುವುದಕ್ಕೆ ಕ್ಷಾತ್ರಬಲಕ್ಕೂ ಮೀರಿದ ಜ್ಞಾನಬಲವೊಂದಿದೆಯೆಂದೂ, ಅದರ ಸಹಾಯದಿಂದ ಉದ್ಧಾರಕಾರ್ಯವನ್ನು ಮಾಡುವ ಸಲುವಾಗಿಯೇ ತಾವು ಮೈವೆತ್ತಿ ಬಂದಿರುವುದಾಗಿಯೂ ಅವರು ತಮ್ಮ ಸಹಧರ್ಮಿಣಿಯವರಿಗೆ ಬರೆದ ಪತ್ರದಲ್ಲಿ ಕಾಣಿಸಿದ್ದಾರೆ. ಈ ತಿಳಿವು ಅವರಿಗೆ ಯಾವ ಗ್ರಂಥವನ್ನು ಓದುವುದರಿಂದ ಬಂದಿತು? ಅಥವಾ ಯಾರ ಭಾಷಣವನ್ನು ಕೇಳುವುದರಿಂದ ಬಂದಿತು? ಇಲ್ಲವೆ ಯಾವ ಗುರುವಿನ ಕೃಪಾಹಸ್ತದ ಸ್ಪರ್ಶವಾಗಿದ್ದರಿಂದ ಮೈದೋರಿತು? ಇವಾವುವೂ ಘಟಿಸಲಿಲ್ಲ. "ಈ ಭಾವನೆಯು ಹುಟ್ಟುವಾಗಲೇ ಸಂಗಡ ಬಂದಿರುವುದೆ"ಂದು ಅವರೇ ಸಾರಿದ್ದಾರೆ. ೧೪ ವಯಸ್ಸಿನ ತಾರುಣ್ಯಾರಂಭಕಾಲದಲ್ಲಿಯೇ ಆ ಭಾವನೆಯ ಮೊಳೆಯು ಅಂಕುರಿಸಿ, ೧೮ನೆಯ ವಯಸ್ಸಿಗೆ ಅದು ಕಾಣಿಸಿಕೊಂಡಿತು.* ಆಗ ಇಂಗ್ಲಂಡದಲ್ಲಿ ಆಯ್. ಸಿ. ಎಸ್. ಪರೀಕ್ಷೆ ಮುಗಿಸಿ ಅವರು ಭಾರತಕ್ಕೆ ಮರಳುವ ಸಂಧಿಕಾಲ. ಆ ಮೊಳಕೆಗೆ ಸರಿಯಾದ ಗೊಬ್ಬರ-ಹೊಯ್ನೀರು ಸುರಿಸುವುದಕ್ಕೂ, ಅದರ ಬೆಳಗೆಗೆ ಬಾಧಕವಾದ ಕಳೆಯನ್ನು ಕಿತ್ತೊಗೆಯುವುದಕ್ಕೂ ದಿವ್ಯಹಸ್ತವು ಮುಂದೆ ಬಂದುದು ಆ ಬಳಿಕ ೨೦ ವರ್ಷ ಕಳೆದ ಮೇಲೆ. ಅಲ್ಲಿಯ ವರೆಗೆ ದಿವ್ಯ ಹಸ್ತವು ಯಾರಿಗೂ ಕಾಣಿಸದಂತೆ ನೀರನ್ನು ಸಿಂಪಡಿಸಿರಬಹುದು; ಅನುಕೂಲ ಗಾಳಿಯನ್ನು ಸೂಸಿರಬಹುದು. ಆದರೆ ಆ ತರದ ಕೃಷಿಯು ಗೋಚರವಾಗುವಂತೆ ಕಾರ್ಯ ನಡೆದದ್ದು ಶ್ರೀ ಅರವಿಂದರು ಕಾರಾಗೃಹದಲ್ಲಿದ್ದಾಗಲೇ. ಭಾರತವು ಪತಿತ ರಾಷ್ಟ್ರವಾಗಿದ್ದರೂ ಪತಿತ ಜನಾಂಗದ ಪ್ರತಿನಿಧಿಗಳನ್ನು ಕಾಣುವುದಕ್ಕೆ ಕಾರಾಗೃಹವೇ ತಕ್ಕ ಸ್ಥಳ. ಪತಿತರಲ್ಲಿ ಅಧಃಪತಿತರೆನಿಸುವ ಕಳ್ಳರು, ಕೊಲೆಗಡಕರು ಮೊದಲಾದವರಲ್ಲಿಯೂ ದೈವಾಂಶವು ಮಿನುಗುತ್ತಿರುವುದನ್ನು ನೋಡಲಿಕ್ಕೆ ಕತ್ತಲೆಕೋಣೆಯೇ ಅವರಿಗೆ ಬೇಕಾಗಿತ್ತು. ಸೂಕ್ಷ್ಮಾತಿಸೂಕ್ಷ್ಮವಾದ ದೈವೀ ವಾಣಿಯು ಎಳೆದು ಬಂದು ಸ್ಥೂಲವಾದ ಕರ್ಣಗಳಿಗೆ ಗೋಚರವಾಗಲಿಕ್ಕೆ ನಿರ್ಜನವಾದ ಏಕಾಂತಸ್ಥಾನವೇ ಅವಶ್ಯವಿತ್ತು. ಪ್ರತಿಸ್ಪರ್ಧಿಯಾದ ಅಂದಿನ ಸರಕಾರದ

* "ಶ್ರೀ ಅರವಿಂದರ ಪತ್ರಗಳು" ಎಂಬ ಕನ್ನಡ ಪುಸ್ತಕ ಓದಿರಿ.

ತೀಕ್ಷ್ಣ ಹಸ್ತಕರಾದ ಸರಕಾರಿ ವಕೀಲ, ಜೇಲರ್, ಪೋಲೀಸರು-ಇವರಲ್ಲಿಯೂ ಸರ್ವವ್ಯಾಪಿಯಾದ ಸ್ನೇಹದೈವತವು ನಗೆಮುಖದಿಂದ ಲೀಲೆಯಾಡುತ್ತಿರುವುದನ್ನು ನೋಡುವುದಕ್ಕೆ ಸೆರೆಮನೆಯೇ ರಂಗಸ್ಥಳವಾಗಬೇಕಾಗಿತ್ತು. ವೈರಿಗಳು, ದುಷ್ಟರು, ಅಪರಾಧಿಗಳು ಇವರಲ್ಲಿ ದೈವಸಾನ್ನಿಧ್ಯ ಕಂಗೊಳಿಸಿದಂತೆ ಗಿಡ-ಗೋಡೆ-ಕಿಡಕಿ-ಮಂಚ-ಕಂಬಳಿ ಇವು ಸಹ ಪ್ರೇಮಮೂರ್ತಿ ವಾಸುದೇವನ ಅಂಗೋಪಾಂಗವಾಗಿವೆಯೆಂದು ಅನುಭವವಾಗಲಿಕ್ಕೆ ಕಾರಾವಾಸವೇ ಬೇಕಿತ್ತಲ್ಲವೇ ? * ಕೊಲೆಯ ಆರೋಪದಂಥ ಜೀವದ ಮೇಲಿನ ಕುತ್ತಿನ ಪ್ರಸಂಗದಲ್ಲಿಯೂ ಸಾಧಕ-ಬಾಧಕ ವಿಚಾರಮಾಡಲು ನಿಂತಾಗ ಅವನ್ನು ತಡೆಹಿಡಿದ ದೈವತವು- -" ಈ ಆಪಾದನೆಯನ್ನು ನಿರ್ಮಿಸಿದುದು ನಿನ್ನ ಸಲುವಾಗಿ ಅಲ್ಲ, ನನ್ನ ಉದ್ದೇಶಪೂರ್ತಿಗಾಗಿ ಎಂಬುವನ್ನು ಮರೆಯಬೇಡ. ನಿನ್ನನ್ನು ಸೆರೆಮನೆಯಲ್ಲಿರಿಸಿ ಕಠೋರ ಶಿಕ್ಷೆಗೀಡುಮಾಡಿ ಕಷ್ಟಪಡಿಸಬೇಕೆನ್ನುವ ಉದ್ದೇಶ ನನ್ನದಿಲ್ಲ; ನನ್ನ ಮುಂದಿನ ಕಾರ್ಯಸಾಧನೆಗಾಗಿ ನಿನಗೊಂದು ಜ್ಞಾನವನ್ನುಂಟುಮಾಡಿಕೊಡುವ ಕೆಲಸ ಮುಗಿದೊಡನೆ ನೀನು ಇಲ್ಲಿ ಒಂದು ನಿಮಿಷವೂ ನಿಲ್ಲಲಾರಿ. ಈ ಖಟ್ಲೆಯನ್ನು ಮುಗಿಸಿಕೊಡುವ ಹೊಣೆಯನ್ನು ನನ್ನಮೇಲೆ ಬಿಡು '' ಎಂಬರ್ಥದ ವಾಣಿಯನ್ನು ನುಡಿಯಿತೆಂದು ಅವರೇ ಹೇಳುತ್ತಾರೆ. ಇದರ ಮೇಲಿಂದ ಅವರ ಕಾರಾಗೃಹವಾಸ, ಅದರ ಹಿನ್ನೆಲೆಯಾದ ಪ್ರತಿಯೊಂದು ಘಟನೆ, ಅದರ ಮುಂದೆ ನಡೆದ ವಿಚಿತ್ರ ಕಥೆ ಇವೆಲ್ಲಾ ಕಪಟನಾಟಕಸೂತ್ರಧಾರಿಯೊಬ್ಬನು ತೆರೆಯ ಮರೆಯಲ್ಲಿ ನಿಂತು ನಡೆಯಿಸಿದ ಮಾಟವೆಂದು ಯಾರಿಗಾದರೂ ತೋರಿಬರುವುದು ಸಹಜವಾಗಿದೆ.

ಭಾರತದ ಈ ಪತಿತ ಜನಾಂಗವನ್ನು ಉದ್ಧರಿಸುವ ಸಾಮರ್ಥ್ಯ ನಿನ್ನಲ್ಲಿದೆಯೆಂದು ಮನಗಾಣಿಸಿಕೊಟ್ಟ ದೈವೀ ಕೃಪೆಯು, ತನ್ನ ಸಂಕಲ್ಪಾನುಸಾರವಾಗಿ ಕಾರ್ಯ ಮಾಡಿಸುವುದಕ್ಕೆ ಬೇಕಾಗುವ ಅನುಭವ ಅಭ್ಯಾಸಗಳ ಸಲುವಾಗಿ ಕಾರಾಗೃಹಕ್ಕೆ ತಂದಿರುವೆನೆಂದು ಸಾರಿಹೇಳಿದ ದಿವ್ಯವಾಣಿಯು, ಮತ್ತೊಂದು ಎಚ್ಚರಿಕೆಯ ಮಾತನ್ನು ಹೇಳಿತು; ಅದನ್ನು ಕೇಳಿದರೆ ಅಹಂಕಾರವೆಂಬುದು ಅದೆಂಥದಿದ್ದರೂ ಪುಡಿಪುಡಿಯಾಗಿ ಹಾರಬೇಕು! ಆ ಎಚ್ಚರಿಕೆಯ ಮಾತು ಯಾವುದೆಂದರೆ- " ನಿನಗೆ ತೋರಿಸಿಕೊಟ್ಟಂತೆ ಈ ಕಾರ್ಯವೆಲ್ಲ ಜಗತ್ತಿನಲ್ಲಿ ನಡೆದು ಹೋಗತಕ್ಕದ್ದೇ ಸರಿ. ಅದಕ್ಕೆ ಯಾರೂ ತಡೆ ಹಾಕಲಾರರು. **ನೀನಿದರಿಂದ ತಪ್ಪಿಸಿಕೊಂಡರೂ ಆ ಕಾರ್ಯವು ಅಬಾಧಿತವಾಗಿ ಮುಗಿದು ಬಿಡತಕ್ಕದ್ದೇ ಇದೆ.** " ಅಹಂಕಾರದ ಬೆಟ್ಟವೆಲ್ಲ ಕರಗಿ, ಅಣುವಿನಷ್ಟು ಉಳಿದಾಗ ಸಹ -ಅಂಥಾ ದಿವ್ಯ ಕಾರ್ಯ ಮಾಡುವುದಕ್ಕೆ ದೈವತವು ತನ್ನನ್ನು ಆರಿಸಿಕೊಂಡಿದೆಯೆಂದಾಗಲಿ, ಅಂಥಾ ಮಹಾಕಾರ್ಯವು **ತನ್ನಿಂದಲೇ** ಆಗಿ ಮುಗಿಯಬೇಕೆಂದಾಗಲಿ ಅಹಂಕಾರದಿಂದ ಯೋಚಿಸಿದರೆ ಸಾಧಕನು ಹುಡಿಗೂಡುವನೆಂಬ ಎಚ್ಚರಿಕೆಯು ಶ್ರೀ ಅರವಿಂದರಿಗೂ ಬಂದಿತು !

" ಜಗತ್ತಿನ ಕಲ್ಯಾಣದ ಸಲುವಾಗಿ ಭಾರತವನ್ನು ಎಚ್ಚರಗೊಳಿಸುತ್ತಿದ್ದೇನೆ'' ಎನ್ನುವ ದೈವವಾಣಿಯಲ್ಲಿ ನಂಬಿಗೆಯಿಟ್ಟು, ಅದರ ಸಹಜ ಪ್ರಗತಿಯ ಕಾರ್ಯದಲ್ಲಿ ತನ್ನ ಸಂಬಂಧವನ್ನಿಟ್ಟುಕೊಂಡರೆ ಯಶಸ್ಸು, ಜೀವನ ಸಾರ್ಥಕತೆ ಉಂಟಾಗಬಹುದೆಂಬ ಅರಿವೂ ಇತ್ತು.

* ವಿವರಕ್ಕಾಗಿ " ಶ್ರೀ ಅರವಿಂದ ಗ್ರಂಥಾಲಯ, ಚಡಚಣ, ಜಿ. ವಿಜಾಪುರ" ಇವರಿಂದ ಪ್ರಕಟವಾದ " ಉತ್ತರಪರಾ ಉಪನ್ಯಾಸ" ವನ್ನೋದಿರಿ.

ಭಾರತವು ಎಚ್ಚರವಾಗಲು ರಾಷ್ಟ್ರಧರ್ಮ ಪ್ರಚಾರವಾಗುವುದರ ಆವಶ್ಯಕತೆಯನ್ನು ಶ್ರೀ ಅರವಿಂದರು ಚೆನ್ನಾಗಿ ಮನವರಿಕೆ ಮಾಡಿಕೊಂಡಿದ್ದರು. ರಾಷ್ಟ್ರಧರ್ಮವು ಇಂದಿನ ಯುಗಧರ್ಮವಾಗಿದೆಯೆಂದೂ ರಾಷ್ಟ್ರರಕ್ಷಣೆಯಿಂದಲೇ ಸನಾತನ ಧರ್ಮದ ಸಂರಕ್ಷಣೆಯಾಗಬೇಕಾಗಿದೆಯೆಂದೂ ಹೇಳಿ ನಾಲ್ವತ್ತು ವರ್ಷಗಳು ಸಂದವು.* ರಾಷ್ಟ್ರೀಯತ್ವವು ಯುರೋಪಿನವರ ಅನುಕರಣವಾಗಿದ್ದರೂ, ಅದರ ಪ್ರಯೋಜನವು ಭಾರತಕ್ಕೆ ವಿಪುಲವಾಗಿದೆಯೆಂದೂ, ತಾವು ಸಹ ತಮ್ಮ ರಾಷ್ಟ್ರಕಾರ್ಯದಲ್ಲಿ ರಾಷ್ಟ್ರೀಯತ್ವ-ತತ್ವವನ್ನೇ ಉಪಯೋಗಿಸಿದೆವೆಂದೂ ಹೇಳಿದ್ದಾರಲ್ಲದೆ ಇಂದು ಸಹ ಭಾರತದ ಅನೇಕ ಪ್ರಾಂತಗಳಿಗೆ ಅದರ ಆವಶ್ಯಕತೆಯಿದೆಯೆಂದು ಗಟ್ಟಿಯಾಗಿ ಹೇಳಿದ್ದಾರೆ. ಹೀಗಿದ್ದರೂ ಪಾಶ್ಚಾತ್ಯಾನುಕರಣವಲ್ಲದ ರಾಷ್ಟ್ರೀಯತ್ವವೊಂದು ಸಹ ಭಾರತಕ್ಕೆ ಬೇಕೆಂದು ಅವರ ಎಣಿಕೆ. ಆರ್ಯ ಸತ್ತ್ವ-ಸಂಪಾದನವೇ ಭಾರತದ ರಾಷ್ಟ್ರಧರ್ಮವೆಂದೂ ಅದೂ ರಾಷ್ಟ್ರೀಯತ್ವವೆಂದೂ ಶ್ರೀ ಅರವಿಂದರು ಪ್ರತಿಪಾದಿಸಿದ್ದಾರೆ. ಜ್ಞಾನ ಸಂಪಾದನೆ, ಪರೋಪಕಾರ, ಅನಾಥರಕ್ಷಣೆ, ಸ್ವಾರ್ಥತ್ಯಾಗ, ಇಂದ್ರಿಯನಿಗ್ರಹ ಇವು ಆರ್ಯ ಸತ್ತ್ವಗಳೆಂದು ಹೇಳುವುದರ ಜೊತೆಗೆ ದ್ವೇಷ, ಅಸೂಯೆ, ಈರ್ಷೆ ಇವು ಆರ್ಯಲಕ್ಷಣಗಳಲ್ಲವೆಂದು ಸ್ಪಷ್ಟಗೊಳಿಸಿದ್ದಾರೆ. ದ್ವೇಷರಹಿತರಾಗಿ ಯುದ್ಧ ಮಾಡಬಹುದು; ಈರ್ಷೆಯಿಲ್ಲದೆ ಸ್ಪರ್ಧಿಸಬಹುದು; ಅಸೂಯೆಯಿಲ್ಲದೆ ವರ್ಧಿಸಬಹುದು.

ಇಂಗ್ಲಂಡಿನಲ್ಲಿದ್ದಾಗಲೇ ಪೌರ್ವಾತ್ಯ–ಪಾಶ್ಚಾತ್ಯ ರಾಷ್ಟ್ರಗಳ ರಾಜಕೀಯ ಅಭ್ಯಾಸವನ್ನು ಮಾಡಿ ಮುಗಿಸಿದ್ದ ಶ್ರೀ ಅರವಿಂದರು, ಬಡೋದೆಯಲ್ಲಿ ಜೀವನ ನಡೆಯಿಸುತ್ತ ಕಾವ್ಯ ಸಾಹಿತ್ಯಾದಿಗಳನ್ನು ಬರೆಯುತ್ತಲೂ ವಿದ್ಯಾರ್ಥಿಗಳಿಗೆ ಅಭ್ಯಾಸ ಹೇಳುತ್ತಲೂ ಇದ್ದಂತೆ ಕಂಡರೂ ಅನುಕೂಲ ಸಮಯವನ್ನು ಕಾಯುತ್ತಿದ್ದರು. ವಂಗ–ಭಂಗ ಕಾಲಕ್ಕಿಂತ ಮೊದಲೇ ಒಂದೆರಡು ಸಾರೆ ಬಂಗಾಲಕ್ಕೆ ಹೋಗಿ ಸ್ಥಾನಿಕ ಪರಿಸ್ಥಿತಿಯನ್ನು ಅರಿತುಕೊಂಡು ಬಂದಿದ್ದರು. ಆದರೆ ಕರ್ಝನ್ ದೊರೆಗಳ ಪುಣ್ಯದಿಂದ ಭಾರತದ ಮೆದಳು ಎನಿಸಿಕೊಂಡ ಬಂಗಾಲವು ಸಿಡಿಮಿಡಿಗೊಂಡು ಎದ್ದಕೂಡಲೇ, ಭಾರತದ ಅಂಗೋಪಾಂಗಗಳಂತಿದ್ದ ಉಳಿದ ಪ್ರಾಂತಗಳೆಲ್ಲ ಚೇತರಿಸಿದವು. ಅದೇ ಕಾಲಕ್ಕೆ ಸಂಸಾರ–ಸಾಹಿತ್ಯಾನಂದಗಳನ್ನು ತ್ಯಜಿಸಿ ಶ್ರೀ ಅರವಿಂದರು ಕರ್ಮಕ್ಷೇತ್ರದಲ್ಲಿ ಧುಮುಕಿದರು. ೧೯೦೫ ರಿಂದ ೧೯೧೦ ರ ವರೆಗಿನ ಅವರ ಕಲಕತ್ತಾ ಜೀವನವು ರಾಜಕೀಯದಲ್ಲಿ ಕಳೆಯಿತು. ಭಾರತ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆ ೧೮೮೫ ರಲ್ಲಿ ಹುಟ್ಟಿ ೧೯೦೫ ರ ವರೆಗೆ ಬೆಳೆದು ೨೦ ವರ್ಷದ ಮಗುವಾದರೂ ಅದಕ್ಕೆ ತಾರುಣ್ಯಾವಸ್ಥೆಯುಂಟಾಗದೆ ಅಂಬೆಗಾಲಿಕ್ಕುತ್ತಿರುವುದು ಅನಾರೋಗ್ಯದ ಚಿಹ್ನವೆಂದು ಬಗೆದ ಶ್ರೀ ಅರವಿಂದರ ಮುಂದಾಳ್ತನದಲ್ಲಿ ಕಲಕತ್ತೆಯ ವಾತಾವರಣವು "ವಂದೇ ಮಾತರಂ" ಮಂತ್ರದಿಂದ ಪ್ರತಿಧ್ವನಿಸಿ ದುಮುದುಮಿಸಿತು. ಆ ಧ್ವನಿಯು ಅನಂತ ಆಕಾಶದ ವರೆಗೆ ಹಬ್ಬಿ, ಮುಟ್ಟಿಮುಟ್ಟಿದವರಿಗೆ ಉಸಿರು ಕೊಟ್ಟಿತು. ಸ್ವದೇಶಿ ವ್ರತ, ಪರದೇಶಿ ಬಹಿಷ್ಕಾರ, ಅಧಿಕಾರ ತ್ಯಾಗ ಈ ಮೂರರಲ್ಲಿ ನೂರು ಉಪಾಯಗಳನ್ನು ತುಂಬಿ ಜನತೆಯ ಹೃದಯದಲ್ಲಿ ಬೀಜವನ್ನೂರುವ ಕೆಲಸವನ್ನು ಮಾಡಿ, ದಿವ್ಯ ಕೃಷಿಕರಾದ ಶ್ರೀ ಅರವಿಂದರು ಕಾರಾಗೃಹಕ್ಕೋ ಆ ಮೇಲೆ 'ದೇಶಾಂತರ'ವಾದ ಪಾಂಡಿಚೇರಿಗೋ ಹೊರಟು

* ಶ್ರೀ ಅರವಿಂದರ "ಧರ್ಮ ಹಾಗೂ ರಾಷ್ಟ್ರೀಯತ್ವ" ಪುಸ್ತಕವನ್ನು ನೋಡಿರಿ.

ಬಂದರು. ಅವೇ ಮೂರು ಬೀಜಗಳು ಕಾಂಡ, ಎಲೆ, ದೇಟು, ಹೂ, ಕಾಳುಗಳ ರೂಪ ಧರಿಸುತ್ತ ಬಂದು ೧೯೪೭ನೇ ಅಗಸ್ಟ ೧೫ಕ್ಕೆ ರಾಶಿಯಾಗಿ, ಹರಕುಮುರಕು ಸ್ವಾತಂತ್ರ್ಯಪ್ರಾಪ್ತಿಯು ಭಾರತೀಯರ ಉಡಿಯಲ್ಲಿ ಬಂದಿತು. ಈ ಮುಂಚೆಯೇ ಕ್ರಿಪ್ಸ ಯೋಜನೆ ಬಂದಾಗ—ರಾಶಿ ಮಾಡಿ ತೆಗೆಯಿರೆಂದರೆ ಬೆಳೆ-ದಂಟು ಅಲ್ಲಲ್ಲಿ ಹಚ್ಚಗಿದೆಯೆಂದು ದುಡಿಮೆಗಾರರು ಅಸವಸಿತನ ತೋರಿಸಿದರು. ಆಗ ರಾಶಿಯಾಗಿದ್ದರೆ, ಅಡ್ಡಮಳೆ-ಗಾರುಗಳಿಗೆ ಈಡಾಗದೆ ಬೆಳೆದ ಕಾಳೆಲ್ಲ ಉಡಿಯಲ್ಲಿ ಬೀಳುತ್ತಿತ್ತು !

ಇಂದು ಕೂಡ ಶ್ರೀ ಅರವಿಂದರು ಅಖಂಡ ಭಾರತವನ್ನು ಅಪೇಕ್ಷಿಸುತ್ತಾರೆ. ಅವರಲ್ಲಿ ಅಖಂಡ ಭಾರತದ ಶ್ರದ್ಧೆಯು ಅಚಲವಾಗಿದೆ; ಅಖಂಡ ಭಾರತವೇ ನಾಳಿನ ಜಗತ್ತಿಗೆ ಆದರ್ಶ 'ಪಾಠ' ಕಲಿಸಬಹುದಾಗಿದೆ. ಭಾರತವು ಅಂತರ್ರಾಷ್ಟ್ರೀಯ ಸಂಸ್ಥೆಯಲ್ಲಿ ಮನ್ನಣೆಪಡೆಯುವಂತೆ ಶ್ರೀ ತಾಯಿಯವರು ತಪಸ್ಸನ್ನೆಸಗಿದ್ದಾರೆ. ಪೂರ್ಣಯೋಗದ ಪ್ರಥಮ ಸಾಧಕರೂ ಸಿದ್ಧ ಪುರುಷರೂ ಆದ ಭಗವಾನ್ ಶ್ರೀ ಅರವಿಂದರು ಮತ್ತು ಶ್ರೀ ತಾಯಿಯವರು ಭಾರತಕ್ಕೆ ಸ್ವಾತಂತ್ರ್ಯ ದೊರೆತುದನ್ನು ಕಂಡು ಹಳೆ ಮಾತಾಗಿತ್ತು; ಅವರು ಕಂಡ ಭಾರತ ಸ್ವಾತಂತ್ರ್ಯವು ಭೌತಿಕದಲ್ಲಿ ಪರಿಣಮಿಸಲಿಕ್ಕೆ ೩೫ ವರುಷಗಳು ಬೇಕಾದವೆಂದು ಹೇಳುತ್ತಾರೆ.

ಶ್ರೀ ತಾಯಿಯವರು ಏಕಾಗ್ರಚಿತ್ತದಲ್ಲಿ ಕಂಡ ಸಾವಿಲ್ಲದ ಕೇಡಿಲ್ಲದ ಚೆಲುವನನ್ನು ಅರಸಲು ಇಡಿಯ ಪೃಥ್ವಿಯನ್ನೇ ಸುತ್ತುವರಿದರು; ಭಾರತಕ್ಕೆ ಬಂದರು. ಅವೆಷ್ಟೋ ಪುಣ್ಯ ಭೂಮಿಗಳನ್ನು ಸಂದರ್ಶಿಸುತ್ತ, ಗಿರಿ ಗುಹೆಗಳನ್ನು ಶೋಧಿಸುತ್ತ ಎಲ್ಲಿಯೂ ಆ 'ಚೆನ್ನ ಮಲ್ಲಿಕಾರ್ಜುನ'ನು ಸಿಗದಿರಲು ಪಾಂಡಿಚೇರಿಗೆ ಬಂದು ಒಂದು ಹೊಟೇಲಿನಲ್ಲಿ ತಂಗಿದರು. ಹೊಟೇಲಿನ ಮಾಳಿಗೆಯ ಮೇಲೆ ತನ್ನ ಇಷ್ಟದೈವತವನ್ನು ಚಿಂತಿಸುತ್ತ ಶತಪಥ ಮಾಡುತ್ತಿರುವಾಗ ಅಂಥದೇ ಒಂದು ಮಾಳಿಗೆಯ ಮೇಲೆ ಆರಾಮಕುರ್ಚಿಯ ಮೇಲೆ ವಿಶ್ರಮಿಸುತ್ತಿದ್ದ ಗುರುವನ್ನು ಕಂಡರೆಂದೂ, ಅವರೇ ತಾನರಸುತ್ತಿದ್ದ ದಿವ್ಯಸಂಗಾತಿಯೆಂದು ಗುರುತಿಸಿ ಅವರ ಸಂದರ್ಶನ ತಕ್ಕೊಂಡರೆಂದೂ ಹೇಳುತ್ತಾರೆ. ಆ ಮಹಾ ಸಂದರ್ಶನದ ಮರುದಿನವೇ ಶ್ರೀ ತಾಯಿಯವರು ಒಂದು ಪ್ರಾರ್ಥನೆ ಬರೆದಿದ್ದಾರೆ. ಅದು ಅವರ 'Prayers and Meditations' ಪುಸ್ತಕದಲ್ಲಿದೆ. 'ನಿನ್ನೆ ಕಂಡ ಮಹಾಪುರುಷರು ಭೂಮಿಗೆ ಬಂದಿದ್ದಾರೆಂದರೆ ಇನ್ನು ಇಲ್ಲಿಯ ಅಜ್ಞಾನ-ಅಂಧಕಾರಗಳು ಉಳಿಯಲಾರವು' ಎಂಬರ್ಥದ ಮಾತು ಅಲ್ಲಿ ಕಂಗೊಳಿಸುತ್ತದೆ.

ಹೀಗೆ ಅವರಿಬ್ಬರಲ್ಲಾದ ಸುಧಾಸಂಗಮದಲ್ಲಿ "ಆರ್ಯ" ಮಾಸಿಕವು ಮೊಳೆತು ಅಪಾರವಾದ ಜ್ಞಾನವನ್ನು ಪಲ್ಲವಿಸಿತು; ಪೌರ್ವಾತ್ಯ-ಪಾಶ್ಚಾತ್ಯರಿಬ್ಬರಿಗೂ ಆದರ್ಶಪ್ರಾಯವಾದ ಆಶ್ರಮ ಜೀವನವು ಹೂತಿತು; ಅಲ್ಲಿ ಇಂದು ನಾಲ್ಕೈದು ನೂರು ಹೀಚು, ಮಿಡಿ, ಕಾಯಿ, ದೋರೆಗಳಾದ ಪೂರ್ಣಯೋಗದ ಸಾಧಕರು ಫಲಿಸತೊಡಗಿದ್ದಾರೆ. ಆತ್ಮಜಾಗೃತರಾದ ನೂರು ಜನ ದೊರೆತರೆ ಸಾಕು, ಅವರ ಅಹಂಭಾವಶೂನ್ಯತೆಯಿಂದ ಜಗತ್ತಿನಲ್ಲಿ ದೇವಸಂಘದ ನಿರ್ಮಾಣ ಕಾರ್ಯವು ಸುಲಭವಾಗುವುದೆಂದು ಶ್ರೀ ಅರವಿಂದರು ೨೦-೩೦ ವರ್ಷಗಳ ಹಿಂದೆಯೇ ಬಗೆದಿದ್ದಾರೆ. ಆತ್ಮ ಜಾಗೃತಿಯು ತಮ್ಮಿಂದಲೇ ಆಗಲೆಂದು ಅವರು ಪಂಟು ಹಿಡಿದಿಲ್ಲ. ಯಾರಿಂದಲೇ ಆಗಲಿ,

ಯಾವ ಸಾಧನೆಯಿಂದಲೇ ಆಗಲಿ ಆತ್ಮಜಾಗೃತಿ ಹೊಂದಿದವರಾದರೆ ಸಾಕೆಂದು ಅವರ ಉದಾರ ಆಕಾಂಕ್ಷೆಯಿದೆ.

ಭಾರತ ಸ್ವಾತಂತ್ರ್ಯವೊಂದೇ ಭಾರತೀಯರ ಗುರಿಯಲ್ಲವೆಂದೂ, ಭಾರತ ಸ್ವಾತಂತ್ರ್ಯವು ಭಾರತೀಯರಿಗಾಗಿ ಮಾತ್ರ ಅಲ್ಲವೆಂದೂ ಹೇಳುತ್ತ ಬಂದ ಅವರು ಭಾರತ ಸಮಾಜವು ಜಗನ್ನಾಥನ ರಥವಾಗಬೇಕೆಂದೂ ಅದಕ್ಕೆ ಪರಮಾತ್ಮನೇ ರಥಿಕನಾಗಬೇಕೆಂದೂ ಆ ರಥಕ್ಕೆ ಸ್ವಾತಂತ್ರ್ಯ, ಐಕ್ಯ, ಜ್ಞಾನ, ಶಕ್ತಿ ಈ ನಾಲ್ಕು ಚಕ್ರಗಳೆಂದೂ ತಮ್ಮ ' ಜಗನ್ನಾಥೇರ ರಥ ' ಪುಸ್ತಕದಲ್ಲಿ ಸಾರಿದ್ದಾರೆ. ಭಾರತೀಯರು ಇಷ್ಟೊಂದು ಹೋರಾಟ ನಡೆಸಿ ನಾಲ್ಕು ಚಕ್ರಗಳಲ್ಲಿ ಒಂದು ಚಕ್ರವಾದ ಸ್ವಾತಂತ್ರ್ಯವನ್ನು ಇಂದು ಅರ್ಧಮರ್ಧ ಗಳಿಸಿದ್ದಾರೆ. ಅದನ್ನು ಪರಿಪೂರ್ಣಗೊಳಿಸಿಕೊಂಡು, ಇನ್ನುಳಿದ ಐಕ್ಯ ಮೊದಲಾದ ಮೂರು ಚಕ್ರಗಳನ್ನು ನಿರ್ಮಿಸಿಕೊಳ್ಳುವ ಮಹಾಕಾರ್ಯವನ್ನು ಸಾಧಿಸಿಕೊಳ್ಳಬೇಕಾಗಿದೆ. ಶಿಲ್ಪಿಯು ಕೈಹಚ್ಚಿದ ವಸ್ತುವು ಮೊದಲಿಗೆ ಮೂಲಕ್ಕಿಂತ ಹೆಚ್ಚು ಅಸ್ತವ್ಯಸ್ತವಾಗಬೇಕಾಗುತ್ತದೆಂದು ಬಲ್ಲೆವು. ಭಾರತ ಸ್ವಾತಂತ್ರ್ಯಾನಂತರ ದೇಶದಲ್ಲಿ ಎಲ್ಲಿ ನೋಡಿದರೂ ಅನೈಕ್ಯ, ಕಲಹ, ಒಡಕು, ಕೋಲಾಹಲ ಕಂಡುಬರುತ್ತಿವೆ. ಇದನ್ನು ನೋಡಿದರೆ ವಿಶ್ವಕರ್ಮನು ಐಕ್ಯವನ್ನು ರಚಿಸಲು ಉದ್ಯುಕ್ತನಾಗಿದ್ದಾನೆಂದು ಎಣಿಸಬಹುದು. ಅನಂತದೊಳಗಿಂದ ಒಂದು ಐಕ್ಯತತ್ತ್ವವು ಇಳಿದು ಬಂದು, ಭೂಮಿಯನ್ನು ಸಮೀಪಿಸುತ್ತಿದೆಯೆಂದು ಶ್ರೀ ತಾಯಿಯವರ ದೃಷ್ಟಿಗೆ ಕಾಣಿಸಿದ ಸಂಗತಿಯಾಗಿದೆ. ಜಗತ್ತಿನಲ್ಲಿ ದಿನದಿನಕ್ಕೆ ಅಂಧಕಾರವು ಹೆಚ್ಚಾಗುತ್ತಿರುವುದನ್ನು ಕಾಣುತ್ತೇವೆ. ಸಾಮಾನ್ಯ ಜೀವಿಗಳಾದ ನಾವು ಅದನ್ನು ನೋಡಿ ಎದೆಗೆಡುತ್ತಿರುವುದು ಸ್ವಾಭಾವಿಕ. ಆದರೆ ಶ್ರೀ ಅರವಿಂದರು ಈ ಅಂಧಕಾರವನ್ನು ನೋಡಿ ಎದೆಗೆಟ್ಟಿಲ್ಲ; ಅದೊಮ್ಮೆ ಆವರಿಸಿಬಿಡುವುದೆಂದು ಅವರಿಗೆ ಮೊದಲೇ ತಿಳಿದಿತ್ತು. ಇಷ್ಟು ದಿನ ಸುಪ್ತವಾಗಿ ಬಿದ್ದುಕೊಂಡ ಅಂಧಕಾರವು ಇಂದು ಪ್ರಕಟವಾಗಿ ವ್ಯಾಪಿಸಿದೆ. ಇನ್ನು ಅದು ತನ್ನ ಮೊದಲಿನ ಸ್ಥಳಕ್ಕೆ ಹೋಗದೆ ಕರಗಿ ಕತ್ತರಿಸಿ ನಿಃಶೇಷವಾಗಲಿದೆ. ಯಾಕಂದರೆ ನಿರ್ಮಾಣವಾಗಲಿರುವ ನವಜಗತ್ತಿನ ನವಜೀವನದಲ್ಲಿ ಅದು ಉಳಿಯಲಾರದು ; ನವಜೀವನವನ್ನು ಅದು ಕಲಂಕಿತಗೊಳಿಸಲಾರದು. ಆದರೆ ಆ ಅಂಧಕಾರವು ಕರಗಿ ಹೋಗುವುದು ಹಗುರಾದ ಕೆಲಸವಲ್ಲ. ಈ ಗಲಿಬಿಲಿಯಲ್ಲಿ ಅದೆಷ್ಟೋ ವಿತ್ತಹಾನಿ, ಪ್ರಾಣಹಾನಿ ಇವು ಅನಿವಾರ್ಯವಾಗಬಹುದು; ದುರ್ನಿವಾರ್ಯವಾದ ಕುತ್ತುಗಳು ಸಂಗಡಿಸಬಹುದು. ಸ್ವಾತಂತ್ರ್ಯದ ಹೋರಾಟಕ್ಕಿಂತಲೂ ಈ ತೊಡಕು ಜಟಿಲವಾಗಬಹುದು; ಮಹಾಯುದ್ಧದ ಸಂಹಾರಕಾರ್ಯಕ್ಕಿಂತಲೂ ಈ ಕೋಲಾಹಲವು ಮೇರೆ ಮೀರಬಹುದು. ಅಣುಬಾಂಬುವಿನ ಬೆನ್ನೇರಿ ಹೈಡ್ರೋಜನ್ ಬಾಂಬು ಮೆರೆಯಬಹುದು. ನಿಮಿಷದಲ್ಲಿ ಜಗತ್ತು ಹುಡಿಯೆದ್ದು ಹಾರಬಹುದು; ಅರೆನಿಮಿಷದಲ್ಲಿ ಜೀವಜಂತುಗಳೆಲ್ಲ ಉಸಿರುಗಟ್ಟಿ ಸಾಯಬಹುದು. ಆದರೇನು ? ಅಣುಬಾಂಬುವಿನ ಅಬ್ಬರಕ್ಕೆ ನಿಂಬೇಹಣ್ಣನ್ನು ಅಗಿದು ತಿನ್ನುವುದು ತ್ರೋಟಕವಾಗುವಂತೆ ಸಾಮರ್ಥ್ಯ ತುಂಬುವ ರಕ್ಷಾಶಕ್ತಿಯೇ ಬೇರೆ ಇದೆ. " ಇಂಥ ಘೋರ ವಿಪತ್ತಿನಲ್ಲಿಯೂ ನಾನು ಜಗತ್ತಿಗೆ ಸಹಾಯ ನೀಡಬಲ್ಲೆ "ನೆಂಬ ವಿಶ್ವಾಸವು ತಮಗಿದೆಯೆಂದು ಶ್ರೀ ಅರವಿಂದರು ಘೋಷಿಸುತ್ತಿದ್ದಾರೆ. ಕೌಟುಂಬಿಕ ಅಥವಾ ದಾಂಪತ್ಯ ಜೀವನದಲ್ಲಿ ತಡವರಿಸುತ್ತಿರುವ ಜನಾಂಗಕ್ಕೆ " ಭವಿಷ್ಯವತ್ತ " ಬೆಳಕು ತೋರುವ ದಾರಿಯನ್ನು ಶ್ರೀ ತಾಯಿಯವರು ಏಕಾಂಕ ನಾಟಕದಂಥ ಸಾಹಿತ್ಯ ಕೃತಿಯಿಂದ ಜಗತ್ತಿಗೆ ನೀಡುತ್ತಿದ್ದಾರೆ; ಆಡಿಸಿ

ತೋರಿಸುತ್ತಿದ್ದಾರೆ. ಸರ್ವೇಶ್ವರನ ಅಭಯ ಹಸ್ತಗಳಾಗಿ ಇವರಿಬ್ಬರೂ ಸರ್ವ ಸಮಸ್ಯೆಗಳನ್ನು ಬಿಡಿಸಿಕೊಟ್ಟು ಜಗತ್ತಿಗೆ ಮಾರ್ಗದರ್ಶನ ಮಾಡಲು ನಿಂತಿರುವಾಗ— " ಅಂಜಿಕಿನ್ನೇತಕಯ್ಯಾ, ಸಜ್ಜನರಿಗೆ ಭಯವು ಇನ್ನೇತಕಯ್ಯಾ " ಎಂದು ನಿಶ್ಚಿಂತೆಯಿಂದ ಹಾಡಬಹುದಾಗಿದೆ.

ಭಾರತದಲ್ಲಿ ಜನ್ಮವೆತ್ತಿ, ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವಕ್ಕೊಳಗಾದ ಸಂಸಾರದಲ್ಲಿ ಬೆಳೆದು, ಆಂಗ್ಲದಾಯಿಯಿಂದ ಪೋಷಣೆ ಹೊಂದಿ, ಪೂರ್ಣ " ಇಂಗ್ಲಿಶ್‌ಮನ್ " ಆಗಲೆನ್ನುವ ಉದ್ದೇಶವುಳ್ಳ ಹಿರಿಯರ ಮೇಲ್ವಿಚಾರಣೆಯಲ್ಲಿ, ಬಾಲ್ಯದಿಂದ ತಾರುಣ್ಯದಾರಂಭದ ವರೆಗೆ ಇಂಗ್ಲಂಡದಲ್ಲಿ ಅಲ್ಲಿಯ ಗಾಳಿಯನ್ನೇ ಉಸುರಾಡಿಸಿ, ಅಲ್ಲಿಯ ಅನ್ನನೀರುಗಳನ್ನೆ ಸವಿದು, ಅಲ್ಲಿಯ ವಿದ್ಯಾಬುದ್ಧಿಗಳನ್ನೇ ತಲೆಯಲ್ಲಿ ತುಂಬಿಕೊಂಡು, ಯಾವ ಪರಿಸ್ಥಿತಿಯಲ್ಲಿಯೂ ' ಬೀಜದಂತೆ ಮೊಳಕೆ---ಬೆಳೆಯ ಸಿರಿ ಮೊಳಕೆಯಲ್ಲಿ ' ಎನ್ನುವ ಮಾತನ್ನು ದೃಢಗೊಳಿಸಿ ಸ್ಪಷ್ಟವಾಗಿ ಉದಾಹರಿಸುವಂತೆ ಇಂದು ಜಗತ್ತಿನಲ್ಲಿ ಯೋಗೀಶ್ವರರಾಗಿ ಮಹಾಋಷಿಗಳಾಗಿ, ನವಮನ್ವಂತರದ ದೇವಮನುವಾಗಿ ನವಜಗತ್ತಿನಲ್ಲಿ ನವಜೀವನವನ್ನು ನಿರ್ಮಿಸಿಕೊಡಲಿಕ್ಕೆ ನಿಂತಿದ್ದಾರೆ. ಶ್ರೀ ತಾಯಿಯವರ ಬೆಂಬಲ-ಮುಂಬಲವೂ ಅದೇ ತೆರನಾಗಿದೆ. ಫ್ರಾನ್ಸಿನ ಮಣ್ಣಿನಿಂದ ಮೈವೆತ್ತ ಪ್ರಕೃತಿ, ಅಲ್ಲಿಯ ಗಾಳಿತುಂಬಿಕೊಂಡ ಉತ್ಸಾಹ, ಅಲ್ಲಿಯ ಓರಣ-ಚೆಲುವುಗಳನ್ನು ಉಟ್ಟುತೊಟ್ಟ ರೂಪವೆಂದು ಶ್ರೀ ತಾಯಿಯವರನ್ನು ಕುರಿತು ಹೇಳಬಹುದಾಗಿದ್ದರೂ, ಅವರ ಹೃದಯವು ಭಾರತದ ಪ್ರಾಣದಿಂದ ತುಂಬಿದೆ; ಅವರ ಆತ್ಮವು ಭಾರತದ ಅಧ್ಯಾತ್ಮಶಕ್ತಿಯಾಗಿದೆ.

ಶ್ರೀ ಅರವಿಂದರನ್ನು ಕುರಿತಾಗಲಿ, ಶ್ರೀ ತಾಯಿಯವರನ್ನು ಕುರಿತಾಗಲಿ ಹೇಳುವಾಗ ಒಬ್ಬೊಬ್ಬರನ್ನು ಮುಂದಿರಿಸಿಕೊಂಡು ಹೇಳಲಾರದೆ, ಒಟ್ಟಿಗೆ ಹೇಳಿದರೇನೆ ಸಂಪೂರ್ಣವಾಗಿ ಹೇಳಿದಂತಾಗುತ್ತದೆ. ಅವರಿಬ್ಬರ ಒಂದಿಕೆಯೇ ಒಂದು ಶಕ್ತಿ, ವ್ಯಕ್ತಿಯಾಗಿದೆ. ಬಂಗಾಲವೇ ಪ್ರಯೋಗಶಾಲೆಯೆಂದೂ ಭಾರತವೇ ರಂಗಸ್ಥಲವೆಂದೂ ಒಮ್ಮೆನೊಮ್ಮೆ ಶ್ರೀ ಅರವಿಂದರು ಹೇಳಿದ್ದಾರೆ. ಆದರೆ ಇಂದು ಅವರ ಕರ್ಮರಂಗವು ವಿಶಾಲವಾಗಿದೆ. ಪಾಂಡಿಚೇರಿಯು ಭಾರತದ ಹೃದಯವಾಗಿ ಭಾರತವು ಪ್ರಾಯೋಗಿಕ ಶಾಲೆಯಾಗಿದೆ. ವ್ಯಕ್ತಿವ್ಯಕ್ತಿಯೂ ಪ್ರಯೋಗ ವಸ್ತುವಾಗಿದೆ-ಆಗಬೇಕಾಗಿದೆ.

ಪ್ರತಿ ಒಬ್ಬ ವ್ಯಕ್ತಿಯನ್ನೂ ಪ್ರತಿ ಒಂದು ಸಂಸ್ಥೆ, ಸಂಸ್ಥಾನವನ್ನೂ ಆವರಿಸಿರುವ ಅಂಧಕಾರವನ್ನು ಕಳೆಯುವ ಸಾಮರ್ಥ್ಯ ಸಂಸ್ಥಾನದಲ್ಲಿ ಇಲ್ಲವೆನ್ನುವುದು ಪ್ರಯೋಗದಿಂದ ಸಿದ್ಧವಾಗಿರಲು, ಇನ್ನು ಸಂಸ್ಥೆ ಇಲ್ಲವೆ ವ್ಯಕ್ತಿ ಆ ಕೆಲಸವನ್ನು ನಿಸ್ತರಿಸಲುಂಟೇ. ? ವ್ಯಕ್ತಿಗಳು ಒಳ್ಳೆಯ ಮನಸ್ಸಿನಿಂದ ಒಂದುಗೂಡಿದರೆ, ಒಂದು ಕಡೆಯಲ್ಲಿ ಕೂಡಿದರೆ ಅಲ್ಲೊಂದು ದೈವ ಶಕ್ತಿ ಐಕ್ಯತತ್ತ್ವವನ್ನು ಸುರಿಯುವುದಂತೆ. ಈ ಸ್ಥಿತಿಯನ್ನರಿತ ಸಂಸ್ಥೆ ಅಥವಾ ಸಮಾಜವು " ಮಾತೃಧ್ವಜ " ವನ್ನು ಉಪಾಸಿಸಿ ಐಕ್ಯ, ಪ್ರೇಮ, ಸಾಮಂಜಸ್ಯ, ಪರಿಪೂರ್ಣತೆಗಳನ್ನು ಪಡೆಯಬಹುದಾಗಿದೆ. ಶ್ರೀ ತಾಯಿಯವರ ಮಾತೃಧ್ವಜದ ಪರಿಚಯ ಪಡೆದು, ವ್ಯಕ್ತಿಗಳು ಗುಂಪುಗೂಡಿ ನಾಡಹಬ್ಬ, ಸಾಮೂಹಿಕ ಧ್ಯಾನ-ಪ್ರಾರ್ಥನೆ ಮುಂತಾದ ಕಾರ್ಯಕ್ರಮಗಳ ಮೂಲಕ ಮಾತೃಧ್ವಜದ ಉಪಾಸನೆ ನಡೆಯಿಸಬಹುದಾಗಿದೆ. ಆ ಉಪಾಸನೆ ಮಾಡುವುದು

## ಸಮರ್ಪಣ

ಎಲ್ಲಿ, ಯಾರು, ಹೇಗೆ, ಏಕೆ ಮೊದಲಾದ ಸಮಸ್ಯೆಗಳನ್ನೆತ್ತಿ ಮಾತು ಹೊಸೆಯದೆ ಶ್ರದ್ಧೆಯುಳ್ಳವರು ಕಾರ್ಯಾರಂಭ ಮಾಡಿಬಿಡಬೇಕಾಗಿರುವ ಗಳಿಗೆ ಇದಾಗಿದೆ. ಅಂತೆಯೇ ಶ್ರೀತಾಯಿಯವರು

> “ ಮಾತು ಬೇಡ; ಕೃತಿಯಾಗಲಿ–
> ಘೋಷಣೆ ಬೇಡ; ಸಿದ್ಧಿಯಾಗಲಿ ”

ಎಂದು ನಮಗೆ ಈ ವರ್ಷದ ಪ್ರಾರ್ಥನೆಯನ್ನು ಸಲ್ಲಿಸಿದ್ದಾರೆ. ಆ ಪ್ರಾರ್ಥನೆಯ ಬಲದಿಂದಲೇ ನಾವೆಲ್ಲರೂ ಬೆಳೆದು ಬರಬೇಕಾಗಿದೆ.

—ಸಿಂಪಿ ಲಿಂಗಣ್ಣ

---

ಸರ್ವವೂ ಸುವರ್ಣಮಯ, ಸುವರ್ಣಮಯವಾಗಿದ್ದಿತು. ಸುವರ್ಣಮಯ ಜ್ಯೋತಿಯ ಧಾರೆಯು ಅವಿಚ್ಛಿನ್ನವಾದ ಪ್ರವಾಹರೂಪವಾಗಿ ಸುರಿಯುತ್ತಿದ್ದಿತು. ಅದು ತನ್ನೊಡನೆ ತರುತ್ತಿದ್ದ ಪ್ರಜ್ಞೆ ಎಂತಹದೆಂದರೆ: ದೇವತೆಗಳ ಪಥವು ಸೂರ್ಯಪ್ರಕಾಶದಿಂದ ಉದ್ಭಾಸಿತವಾದದ್ದು; ಅಲ್ಲಿ ಕಷ್ಟಗಳು ತಮ್ಮ ಅಸ್ತಿತ್ವವನ್ನೇ ಕಳೆದುಕೊಂಡುಬಿಡುವವು.

ನಾವು ಅನುಸರಿಸಲೆಳಸುತ್ತಿದ್ದರೆ ಇಂಥ ಈ ಪಥವು ನಮ್ಮ ಎದುರಿಗೆ ತೆರೆದೇ ಇದೆ.

— ತಾಯಿಯವರು

ಓಂ

# ಶ್ರೀ ಮಾತಾಜಿ

**( ಭಕ್ತಕವಿ ಶ್ರೀ ಶಹಾ ಶಿವಜೀಭಾಯಿಯವರ ಗುಜರಾತೀ ಕವಿತೆಯ ಅನುವಾದ :**

ಮಟ್ಟ :— " ಅಬ ತೇರೇ ಶಿವಾಯ " ಎಂಬಂತೆ)

ಮೀರಾ ಮಾತೆ ಮುಕ್ತಿದಾತೆ ತಮಗೆ ಶರಣು ಬಂದೆನು ।
ಜಪಿಸ ಗೈವೆ ಹಗಲಿರುಳು ತಮ್ಮ ನಾಮವನ್ನು || ಪ ||

ಶ್ರದ್ಧಾ ಭಕ್ತಿ ವಿದ್ಯಾ ಕಲೆಗಳ ಐಕ್ಯ ಸಾಧಿಸಿ ।
ಸದ್ಧರ್ಮ ಮಾರ್ಗವನ್ನು ಪರಮ ಸರಲಗೊಳಿಸಿ ||
ಮುಕ್ತಿದ್ವಾರ ಮಾಡಿರುವಿರಿ ತಾಯಿ ಪಾಂಡಿಚೆರಿಯನು ||
ಜಪಿಸ ಗೈವೆ ಹಗಲಿರುಳು .... .... || ೧ ||

ಸಾಧೂಗಳು ಹೇಳಿಹರು: " ಸಾಯಿ ಸ್ವರ್ಗವು " ।
ಆ ಸ್ವರ್ಗಧಾಮ ತಮ್ಮ ಚರಣಗಳಲೆ ವಾಸವು ||
ಈ ಚರಣಗಳಿಗೆ ಅರ್ಪಿಸುವೆನು ಸರ್ವಸ್ವವನು ||
ಜಪಿಸ ಗೈವೆ ಹಗಲಿರುಳು ... ... || ೨ ||

ಗಂಗಾ ಯಮುನಾ ತಾಪಿ ತಮ್ಮ ಅಡಿಯಲಿರುವವು ।
ಶಂಕೆಯಿಲ್ಲದೆ ಸುಧಾ-ರೂಪದಿಂದ ಹರಿವವು ||
ತವ ಚರಣ ನೆನೆವ ಮನವು ಶಾಂತಿ-ಸರಸಿ ತಾನು ||
ಜಪಿಸ ಗೈವೆ ಹಗಲಿರುಳು .... .... || ೩ ||

ತವ ರಚನೆಗಳನು ದೇವತೆಗಳು ವರ್ಣಿಸಿ ।
ತವ ಶಿಶುಗಳ ಕಷ್ಟಗಳನು ಕಳೆವರೋಡಿಸಿ ||
ತವ ಚರಣದಲ್ಲಿ ಪಡೆಯಿತೆನ್ನ ಮನ ಶಾಂತಿಯನು ||
ಜಪಿಸ ಗೈವೆ ಹಗಲಿರುಳು .... .... || ೪ ||

## ಸಮರ್ಪಣ

ತವಽ ದರ್ಶನದಿ ಮಽನಽವು ಮಗ್ನವಾಽಗಿಽ ।
ಶಿವಽ-ದಾಯಽಕ ಸಽಮತೆಯು ಸಹಜವಾಽಗಿಽ ॥
ಆಧಿ ವ್ಯಾಧಿಽ ಉಽಪಾಧಿಯಿಂ ದಾಟಿ ತಾಽನು ॥
ಜಪಽ ಗೈವೆ ಹಗಽಲಿರುಳು .... .... ॥ ೫ ॥

**ಪುಣ್ಯಧಾಮ ಪಾಂಡಿಚೇರಿ**
**ದಿನಾಂಕ ೨೦ ೧೨-೪೭**

ಅನುವಾದಕ—
ಶ್ರೀ ಮಹಾಮಾತೃ ಶಿಶು
**ಮಧುರಚೆನ್ನ**, ಹಲಸಂಗಿ

---

ತನ್ನ ತಾನಾಳುವುದು ಅತಿ ದೊಡ್ಡ ವಿಜಯ. ಇದು ಸಕಲ ಸ್ಥಿರ ಸುಖಗಳ ಆಧಾರ.

× × × ×

ತನ್ನ ಸುಖದ ಆಲೋಚನೆ ಮಾಡುವುದು ಅಸುಖಿಯಾಗುವುದರ ನಿಶ್ಚಿತ ಮಾರ್ಗ.

× × × ×

ಬರಿಯ ಸುಖವು ಜೀವನದ ಗುರಿಯಲ್ಲ ಸಾಮಾನ್ಯ ಜೀವನದ ಗುರಿ ಕರ್ತವ್ಯಪಾಲನ; ಅಧ್ಯಾತ್ಮ ಜೀವನದ ಗುರಿ ಪರಮಾತ್ಮನ ಸಾಕ್ಷಾತ್ಕಾರ.

× × × ×

ನಮ್ಮ ಸುಖವನ್ನು ಅಬಾಧಿತವಾಗಿ - ಪರಿಶುದ್ಧವಾಗಿ ಇಟ್ಟುಕೊಳ್ಳುವುದಾದಲ್ಲಿ, ಅದರ ಮೇಲೆ ದುರ್ವಿಚಾರಗಳ ದೃಷ್ಟಿ ಬೀಳದಂತೆ ಎಚ್ಚರಿಕೆ ವಹಿಸಬೇಕು.

**—ತಾಯಿಯವರು**

# ತೇಜಸ್ತೇಜಿ

( ಶ್ರೀ ಅರವಿಂದರನ್ನು ಕುರಿತು ಶ್ರೀ ರೋಮೆನ್‌ರವರು ಬರೆದ "Steed of Light" ಎಂಬುದರ ಅನುವಾದ )

ಪ್ರೋದ್ಯತ್ ಕನತ್ ಕನಕ ಕಾಂತಿಯಿಂ ಕಂಗೊಳಿಪ
ಸಪ್ತಾರ್ಚಿ ಸಂಜಾತ ದಿವ್ಯ ತೇಜಸ್ತೇಜಿ,
ಸ್ವರ್ಗೀಯ ಶಾಂತಿಯಿಂದುದಯಿಸಿದ ಬಲ್ಮಿಂಚೆ,
ಪ್ರಾಲೇಯ ಪರ್ವತೋನ್ನತಿಗೆ ಸರಿಮಿಗಿಲೆನಿಪ
ಗಂಭೀರ ಸಂಕಲ್ಪ ಸಂಸ್ಫೂರ್ತಿಯಿಂ ನೀನು
ನಿನ್ನ ಖುರಹತಿಯಿಂದ ವಿಸ್ಮೃತಿ-ಮಹೋದರವ
ತೊತ್ತಳಂದುಳಿದುಳಿದು ನುಗ್ಗುನುಗ್ಗಾಗೊಡೆದು,
ಕಾಲಗಹನಾಂತರದ ಕತ್ತಲೆಯ ಕಡೆಗೊಳಿಸಿ,
ಎಚ್ಚರರಿಯದ ಗಡಸು ಕಲ್ನಿದ್ದೆಯಿಡಿಕಿರಿದು
ಮೃತ್ಯುಮೌನವನಾಳ್ದ ದೇಶಮಂ ಕೊಡಕೊಡಹಿ,
ಬಾಳ ಸೆರೆಗವಿಗಳಾಚೆಗೆ ಕೋಟಿಸಂಖ್ಯೆಯಲಿ
ನಕ್ಷತ್ರಲೋಕಂಗಳಂ ಸಮೆದು ಬೆಳಗಿಸುವೆ।

ಉರಿಯ ಗರಿಗಳ ಸುರಿವ ಓ ವೇಗವೈಭವವೆ,
ಜಡದ ಶೃಂಖಲೆಗಳನು ಅಪ್ಪಳಿಸಿ ಮುರಿದೊಗೆದು,
ಏರಲಸದಳಮೆನಿಪ ಆತ್ಮೋನ್ನತಿಯ ಶಿಖರಿ-
ಶಿಖರಂಬರಂ ನೆಗೆವ ನಿನ್ನದ್ಭುತಾಪಾರ
ಶಕ್ತಿಯಂ ನೀಡೆನಗೆ ಮುಕ್ತಿಯ ಮಹಾಸೂರ್ಯ-
ಮಂಡಲದಿ ನಾನೆ ನಾನಾಗಿರಲು !

—ಗಂಗಪ್ಪ ವಾಲಿ
( ಅನುವಾದಕ )

# ನಾ ನಿನ್ನವನೌ !

( ಶ್ರೀ ನಾರಾಯಣ ಪ್ರಸಾದರ ಹಿಂದೀ ಪದವೊಂದರ ಅನುವಾದ )

ಹೊರಬರುವ ಸ್ವರವು ಉಚ್ಚಾರಗೊಳಲಿ ।
ಉಸಿಉಸಿರು ಸೂಸಿ ಝುಂಕಾರಿಸಲಿ ।
ರೋಮ ರೋಮ ನೆರೆ ಕೂಗಿಕೊಳಲಿ—
ತಾಯ್ ನಿನ್ನವನೌ । ನಾ ನಿನ್ನವನೌ ॥ ೧ ॥

ಮನ-ಮೃದಂಗದಾ ಪ್ರತಿ ತಾಳದಲಿ ।
ಹೃತ್ತಂತಿ ಮಿಡಿವ ಸವಿ ಮೀಟದಲಿ ।
ಗುಂಜಯೆಂಬ ಗುಂಜಾರವವಿರಲಿ- -
ತಾಯ್ ನಿನ್ನವನೌ । ನಾ ನಿನ್ನವನೌ ॥ ೨ ॥

ಬಾಳಿನ ವಸಂತ-ಶರದೃತುಗಳಲಿ ।
ಬೆನ್ನೀರ್ ಶಿಶಿರದ ಕುಳಿರಿನಲಿ ।
ಹೃದಯ-ಕುಂಜದಾ ಕೋಕಿಲ ಕೂಗಲಿ—
ತಾಯ್ ನಿನ್ನವನೌ । ನಾ ನಿನ್ನವನೌ ॥ ೩ ॥

ಸುತ್ತುವರಿದ ಆ ಸೀಮೆಯ ಮೀರಿ ।
ನಲಿಯುತಿರಲಿ ಚರಣಕೆ ಹಾರಿ ।
ಪುಲಕಗೊಂಡು ಕೂಗಾಡಲಿ ಸಾರಿ--
ತಾಯ್ ನಿನ್ನವನೌ । ನಾ ನಿನ್ನವನೌ ॥ ೪ ॥

**—ಸಿಂಪಿ ಲಿಂಗಣ್ಣ**
( ಅನುವಾದಕ )



ಶ್ರೀ ಅರವಿಂದಾಶ್ರಮ (ಮುಖ್ಯ ಕಟ್ಟಡ)

# ಶ್ರೀ ಅರವಿಂದಾಶ್ರಮ

ಶ್ರೀ ಅರವಿಂದರು ಅಲಿಪುರ ಸೆರೆಮನೆಯಿಂದ ಹೊರಗೆ ಬಂದ ಮೇಲೆ, ಖಿಲವಾಗಿದ್ದ ದೇಶದ ರಾಜಕೀಯ ಪರಿಸ್ಥಿತಿಯ ನಿರೀಕ್ಷಣೆಯಲ್ಲಿ ಕೆಲ ಕಾಲ ಕಳೆದರೂ, ಅಂತರಾತ್ಮನ ಕರೆಯ ಮೇರೆಗೆ ಅವರು ಒಮ್ಮೆಲೆ ಕಲ್ಕತ್ತೆಯನ್ನು ಬಿಟ್ಟು ಚಂದ್ರನಗರಕ್ಕೂ ಅಲ್ಲಿಂದ ಪಾಂಡಿಚೇರಿಗೂ (೧೯೧೦ ರ ಎಪ್ರಿಲ್ ದಿ. ೪) ಬಂದುಬಿಟ್ಟರು. ಅಂದು ಶ್ರೀ ಅರವಿಂದರ ಪ್ರಕಟ ರಾಜಕೀಯ ಜೀವನದ ಅಧ್ಯಾಯವು ಆಕಸ್ಮಿಕವಾಗಿ ಸಮಾಪ್ತವಾಗಿ, ಅವರ ನೈಜಕಾರ್ಯವು ಪ್ರಾರಂಭವಾಯಿತು. ಅಧ್ಯಾತ್ಮಸಾಗರದ ಆಳ-ಅಗಲ-ಎತ್ತರಗಳನ್ನು ಅಳೆದು ನೋಡುವುದೇ ಅವರು ಆಗಿನಿಂದ ಕೈಕೊಂಡ ಮಹತ್ಕಾರ್ಯ; ತಡವರಿಸುತ್ತ ಸಾಗಿರುವ ಮಾನವನ ಭವಿತವ್ಯವು ಭವ್ಯವೂ ದಿವ್ಯವೂ ಆಗಿದೆಯೆಂಬುದೇ ಅವರು ಕಂಡುಂಡ ಅನುಭವ; ಮಾನವನು ಮರೆತು ಹೋದ ತನ್ನ ದೇವತ್ವವನ್ನು ಮರಳಿ ಸಾಕ್ಷಾತ್ಕರಿಸಿಕೊಂಡು ಆ ದಿವ್ಯಾನುಭೂತಿಯುಲ್ಲಡಕವಾದ ಜ್ಞಾನ-ಶಕ್ತಿ-ಆನಂದಗಳ ಸಾಧನದಿಂದ ತನ್ನ ಮನ-ಪ್ರಾಣ-ದೇಹಗಳನ್ನು ಪರಿಪೂರ್ಣಗೊಳಿಸಿಕೊಳ್ಳಬಲ್ಲನೆಂಬುದು ಅವರ ಬೋಧೆ. ಆಶ್ರಮದ ವೈವಿಧ್ಯಮಯ-ಸಮೃದ್ಧಿಮಯ ಕಾರ್ಯಕಲಾಪಗಳು ಅವರೀ ಜೀವನಪ್ರವಣ ತತ್ತ್ವಜ್ಞಾನವನ್ನು ಚೆನ್ನಾಗಿಯೆ ಪ್ರತಿಬಿಂಬಿಸುತ್ತವೆ.

## ಬೀಜಾರೋಪಣ

ಶ್ರೀ ಅರವಿಂದರು ಪಾಂಡಿಚೇರಿಯಲ್ಲಿ ಕಾಲಿಟ್ಟಾಗ ಅವರೊಡನೆ ನಾಲ್ವರು ಹಳೆಯ ನಚ್ಚಿನ ಜೊತೆಗಾರರಿದ್ದರು. ಆಗ ತಾವು ಗುರುವಾಗಬಹುದೆಂದಾಗಲಿ-ಆಶ್ರಮವನ್ನು ನಿರ್ಮಿಸಬಹುದೆಂದಾಗಲಿ ಅವರು ಎಣಿಸಿರಲಿಲ್ಲ. ತಾವು ಕೈಕೊಂಡ ಆಧ್ಯಾತ್ಮಿಕ ಪ್ರಯೋಗವು ತಮ್ಮನ್ನಾವ ದಾರಿಗೇ ಒಯ್ಯಲಿ, ಅದರಲ್ಲೆಷ್ಟೇ ಎಡರುಗಳು ಬರಲಿ ಮುಂದಕ್ಕೆ ಸಾಗುವುದಾಗಿ ಅವರು ಪಂಥ ತೊಟ್ಟಿದ್ದರು. ಅವರೀ ಸಾಹಸದಲ್ಲಿ ಜೊತೆಯಾಗಿ ನಿಂತವರ ಸಂಖ್ಯೆ ನಾಲ್ಕರಿಂದ ಕ್ರಮೇಣ ಹತ್ತಕ್ಕೇರಿ, ಕೆಲ ದಿನಗಳಲ್ಲಿ ಇಪ್ಪತ್ತೈದಾಯಿತು. “ಸ್ವದೇಶಕ್ಕಾಗಿ ಸರ್ವಾರ್ಪಣ” ಎಂಬ ಧ್ಯೇಯದಿಂದ ಪ್ರೇರಿತರಾಗಿದ್ದ ಈ ಜನರು ಶ್ರೀ ಅರವಿಂದರ ಪೂರ್ಣಯೋಗದೀಕ್ಷೆಯನ್ನು ಇದೀಗ ಸ್ವೀಕರಿಸಿ, “ಬಾಹ್ಯಾಭ್ಯಂತರಗಳಲ್ಲಿ ಪರಿಪೂರ್ಣತೆ”ಯೆಂಬ ಹೊಸ ಸಾಧನ ಮಾರ್ಗದಲ್ಲಿ ನಡೆಯಲು ಸನ್ನದ್ಧರಾದರು.

## ಕ್ರಮವಿಕಾಸ

ತಾಯಿಯವರು ಮೊದಲಸಲ ಪಾಂಡಿಚೇರಿಗೆ ಬಂದು ಶ್ರೀ ಅರವಿಂದರನ್ನು ಸಂದರ್ಶಿಸಿದುದು ೧೯೧೪ರ ಮಾರ್ಚ್ ೨೯ರಲ್ಲಿ. ಮಹಾಯುದ್ಧವು ಪ್ರಾರಂಭವಾದ ಮೇಲೆ ೧೯೧೫ರ

ನವಂಬರದಲ್ಲಿ ಅವರು ಫ್ರಾನ್ಸಿಗೆ ಮರಳಬೇಕಾಯಿತು. ಅಲ್ಲಿ ಕೆಲ ತಿಂಗಳಿದ್ದು ಜಪಾನಿಗೆ ಹೋಗಿ ಯುದ್ಧ ಮುಗಿಯುವ ವರೆಗೂ ಅಲ್ಲಿಯೇ ಇದ್ದರು. ೧೯೨೦ರ ಏಪ್ರಿಲ್ ೪ರಲ್ಲಿ ಅವರು ಪಾಂಡಿಚೇರಿಗೆ ಬಂದು ಅಲ್ಲಿ ಕೊನೆಯದಾಗಿ ನಿಂತುಬಿಟ್ಟರು. ಅವರು ಬಂದ ಮೇಲೆ ಶ್ರೀ ಅರವಿಂದರ ಸುತ್ತಲಿನ ಸಾಧಕರ ಬಳಗ ಮತ್ತಷ್ಟೂ ಬೆಳೆಯಿತು; ಅದರಿಂದಾಗಿ ಅವರ ವಸತಿ-ಭೋಜನದ ವ್ಯವಸ್ಥೆಯನ್ನು ಕೈಕೊಳ್ಳಬೇಕಾಗಿ ಬಂದಿತು. ಹೊಸ ಹೊಸ ಕಟ್ಟಡಗಳನ್ನು ಕೊಳ್ಳಬೇಕಾಗಿ, ಬಾಡಿಗೆಯಿಂದ ಹಿಡಿಯಬೇಕಾಗಿ ಬಂದಿತು. ಅವುಗಳನ್ನು ಸರಿಯಾಗಿಡುವುದು, ಸಾಧಕರ ವಿವಿಧ ಜೀವನಾವಶ್ಯಕತೆಗಳನ್ನು ಪೂರೈಸುವುದು, ಸ್ವಾಸ್ಥ್ಯ-ಸ್ವಚ್ಛತೆಗಳ ಬಗ್ಗೆ ಎಚ್ಚರ ವಹಿಸುವುದು—ಎಂದು ಮೊದಲಾಗಿ ಕೆಲಸಗಳು ಬೆಳೆದು, ಅವುಗಳನ್ನು ಕುರಿತು ತಾಯಿಯವರು ಪ್ರಸಂಗೋಚಿತವಾಗಿ ನಿಯಮಗಳನ್ನು ರಚಿಸಿದರು. ಆಶ್ರಮವು ಈ ರೀತಿಯಾಗಿ ರೂಪುದಾಳಿತು. ಅದು ಕಟ್ಟಲ್ಪಟ್ಟ ಸಂಸ್ಥೆಯಲ್ಲ, ಬೆಳೆದು ಬಂದ ಸಸಿ. ಶ್ರೀ ಅರವಿಂದರ ಸಾಕ್ಷಿತ್ವದಲ್ಲಿ ತಾಯಿಯವರ ಕೃಪಾಪೋಷಣೆಯಲ್ಲಿ ಅದೀಗ ಬೆಳೆದು ಹೆಮ್ಮರವಾಗಿದೆ.

## ಸ್ವರೂಪ-ದಿಗ್ದರ್ಶನ

ಗುರುವೇ ಆಶ್ರಮದ ಕೇಂದ್ರವ್ಯಕ್ತಿ. ಆಶ್ರಮವು ಆತನ ಆಧ್ಯಾತ್ಮಿಕ ಪ್ರಯೋಗ ಶಾಲೆ. ಆತನ ಪ್ರಯೋಗಗಳಲ್ಲಿ ಸಹಕರಿಸಲು ಹಲವು ಸಾಧಕಜೀವಿಗಳು ಬಂದು ಕೂಡಿಕೊಳ್ಳುವರು. ಸಂದರ್ಭಕ್ಕೆ ಸರಿಯಾಗಿ ಆಶ್ರಮ ಜೀವನದ ನಿಯಮಗಳು ಅಸ್ತಿತ್ವದಲ್ಲಿ ಬರುವವು. ಶ್ರೀ ಅರವಿಂದಾಶ್ರಮವು ಇದೇ ರೀತಿಯಾಗಿ ಬೆಳೆದುಬಂದಿದೆ. ಇದಕ್ಕೆ ಆಡಳಿತ ಮಂಡಲವಿಲ್ಲ. ಇದು ಸಾರ್ವಜನಿಕ ಸಂಸ್ಥೆಯಲ್ಲ; ಅಂತೆಯೇ ಸಂಸ್ಥೆಗಳ ನಿಯಮಾವಲಿಗಳು ಇಲ್ಲಿಲ್ಲ. ಆಶ್ರಮದ ಕಾರ್ಯಕಲಾಪಗಳು ಸುವ್ಯವಸ್ಥಿತವಾಗಿ ಸಾಗುವಂತೆ ತಯಾರಿಸಿದ ನಿಯಮಗಳಲ್ಲಿ ಹೆಚ್ಚುಕಡಿಮೆ ಮಾಡುವ ಅಧಿಕಾರವು ಹಾಗೂ ಆಶ್ರಮದ ಮೇಲ್ವಿಚಾರಣೆಯು ತಾಯಿಯವರಿಗೇ ಸೇರಿದುದು. ಆಶ್ರಮವು ರಾಜಕೀಯ ಸಂಸ್ಥೆಯಲ್ಲ; ಆಶ್ರಮವಾಸಿಗಳು ಯಾವ ರಾಜಕೀಯ ಚಟುವಟಿಕೆಯಲ್ಲಿಯೂ ತೊಡಗಕೂಡದು. ಆಶ್ರಮದ ಸೊತ್ತು ಶ್ರೀ ಅರವಿಂದರಿಗಾಗಲಿ ತಾಯಿಯವರಿಗಾಗಲಿ ಸೇರಿದುದು. ಇದು ಧಾರ್ಮಿಕ ಸಂಸ್ಥೆಯೂ ಅಲ್ಲ. ಇಲ್ಲಿರುವವರು ಎಲ್ಲ ಧರ್ಮದವರೂ ಇದ್ದಾರೆ, ಕೆಲವರಿಗೆ ಯಾವುದೊಂದು ಧರ್ಮವೂ ಇಲ್ಲ. ಸಾಂಪ್ರದಾಯಿಕತೆಗೆ-ಧಾರ್ಮಿಕ ಕಟ್ಟುಕಟ್ಟಳೆಗಳಿಗೆ ಇಲ್ಲಿ ಅವಕಾಶವಿಲ್ಲ. ಇಲ್ಲಿರುವುದು ಶ್ರೀ ಅರವಿಂದರ ತತ್ತ್ವಬೋಧೆಯ ಅಭ್ಯಾಸ ಹಾಗೂ ಧ್ಯಾನಧಾರಣೆಗಳ ಕೆಲವೊಂದು ಸಾಧನ ವಿಶೇಷಗಳು. ಪ್ರತಿ ವ್ಯಕ್ತಿಮಾತ್ರದಲ್ಲಡಗಿದ ಚಿಚ್ಛಕ್ತಿ ಪ್ರಕಟವಾಗುವಂತೆ, ಮಾನವನ ಚೇತನವಿಶೇಷವು ವಿಸ್ತಾರಗೊಳ್ಳುವಂತೆ, ಅಂತಃಕರಣವು ಅವತರಿಸುವ ದಿವ್ಯಸತ್ಯಕ್ಕೆ ಇಂಬುಗೊಡುವಂತೆ, ವಾಸನಾವಿಜಯವನ್ನು ಪಡೆಯುವಂತೆ, ಸ್ವಭಾವವು ಉತ್ತರೋತ್ತರವಾಗಿ ದಿವ್ಯ ಪ್ರೇರಣೆಯ ಮೇರೆಗೆ ಮಾರ್ಪಡುವಂತೆ ಅನುಕೂಲತೆಯನ್ನೊದಗಿಸುವುದಕ್ಕಾಗಿ ಈ ಯೌಗಿಕ ಸಾಧನರೀತಿಗಳಿವೆ. ಆದರೆ ಇವುಗಳನ್ನೆಲ್ಲ ಸಾಧಕರು ಹೆಚ್ಚಾಗಿ ತಮ್ಮ ಪ್ರಯತ್ನದಿಂದಲೇ ಸಾಧಿಸತಕ್ಕದ್ದು. ಎಲ್ಲರೂ ಭಾಗವಹಿಸಲೇಬೇಕಾದ ಪಾಠಪ್ರವಚನಗಳಾಗಲಿ ಅಭ್ಯಾಸಕೂಟಗಳಾಗಲಿ ಇಲ್ಲಿಲ್ಲ. ಪ್ರತಿ ಸಾಧಕನೂ ತನ್ನ ವ್ಯಾಸಂಗಕ್ಷೇತ್ರವನ್ನೂ ಪದ್ಧತಿಯನ್ನೂ ಆರಿಸಿ

ಕೊಳ್ಳುವನು. ಸ್ವಂತದ ಧ್ಯಾನ-ಮನನ-ನಿದಿಧ್ಯಾಸಗಳಿಂದಲೇ ಆತನು ಮುಂದುವರಿಯ ತಕ್ಕುದು. ಅಗತ್ಯವೆನಿಸಿದಾಗ ಮಾರ್ಗದರ್ಶನವಿದ್ದೇ ಇದೆ.

## ಜೀವನದ ಮಧ್ಯಬಿಂದು—ವ್ಯಕ್ತಿ

ಈ ಅಧಿಕಾರದ ಕೇಂದ್ರೀಕರಣವು ವ್ಯಕ್ತಿತ್ವದ ವಿಕಾಸಕ್ಕೆ ಬಾಧಕವಾಗಿಲ್ಲ. ಸಾಧಕರು ಸ್ವೇಚ್ಛೆಯಿಂದ ಈ ನಿಯಮಗಳನ್ನು ಒಪ್ಪಿಕೊಂಡು ಆಶ್ರಮದ ಸಮರಸಜೀವನದಲ್ಲಿ ಪಾಲು ಗಾರರಾಗುವರು. ಅವರ ಆಂತರಿಕ ವಿಕಾಸಕ್ಕೆ ಅನುಕೂಲವಾಗುವಂತೆಯೆ ಈ ನಿಯಮಗಳ ರಚನೆಯೂ ನಿರ್ವಹಣೆಯೂ ಇರುವುದು. ಇದಕ್ಕೆ ಆಶ್ರಮಜೀವನವೇ ಸಾಕ್ಷಿ. ಸ್ವಾತಂತ್ರ್ಯವು ಇಲ್ಲಿಯ ವಾತಾವರಣದಲ್ಲಿ ತುಂಬಿ ತುಳುಕುತ್ತದೆ. ಜೀವನದ ದಂದುಗಗಳನ್ನು ತಪ್ಪಿಸಲು ಅವನ್ನು ಬಿಟ್ಟೋಡಬೇಕಾಗಿಲ್ಲ—ಆತ್ಮಶಾಂತಿಗಾಗಿ ಕಾಡು ಸೇರಬೇಕಾಗಿಲ್ಲ--ಆತ್ಮನ ಒಳಗಿನ ಐಶ್ವರ್ಯವನ್ನು ಕಂಡುಕೊಂಡು, ಅದರ ಸಹಾಯದಿಂದ ಜೀವನದ ಪ್ರತ್ಯಂಗವನ್ನೂ ಸಮೃದ್ಧಗೊಳಿಸಬೇಕಾಗಿವೆ; -ಆಶ್ರಮದ ವಿವಿಧಮುಖ ಚಟುವಟಿಕೆಗಳಿಗೆ ಈ ದೃಷ್ಟಿಯೇ ಪ್ರೇರಕಶಕ್ತಿಯಾಗಿದೆ. ಆಶ್ರಮದ ೮೦ ಕ್ಕಿಂತ ಹೆಚ್ಚು ಕಟ್ಟಡಗಳಲ್ಲಿ ವಾಸಿಸುತ್ತಿರುವ ೬೦೦ಕ್ಕೆ ಮಿಕ್ಕಿರುವ ಸಾಧಕ-ಸಾಧಿಕೆಯರ ವೈವಿಧ್ಯಮಯ ಜೀವನಕ್ರಮವನ್ನು ನೋಡಿದರೆ ಇದು ಮನವರಿಕೆಯಾಗದಿರದು. ಇಲ್ಲಿ ಕೃಷಿ, ಕಮ್ಮಾರಿಕೆ, ಬಡಿಗತನ, ಅಡಿಗೆ, ಯಾಂತ್ರಿಕ ವಿದ್ಯೆ, ಲೆಕ್ಕಪತ್ರ, ಸಾಹಿತ್ಯ ಸಂಗೀತ ಕಲೆಗಳ ವ್ಯಾಸಂಗ ಮೊದಲಾದ ವಿವಿಧ ಕರ್ಮಗಳಲ್ಲಿ ಅವರವರ ಒಲವಿಗನುಸಾರವಾಗಿ ತೊಡಗಿದ ವ್ಯಕ್ತಿಗಳನ್ನು ಕಾಣಬಹುದು. ಯಾವ ಕರ್ಮವೂ ಉಚ್ಚವಾಗಲಿ, ನೀಚವಾಗಲಿ ಇಲ್ಲ; ಆಯಾ ಸ್ವಭಾವಕ್ಕೆ ಅದು ಅದು ಉಚಿತ. ಇಲ್ಲಯ ಸಾಧಕ ರಲ್ಲಿ ಮೊದಲು ಹಾಡುಗಾರನಿದ್ದವನು ಲೆಕ್ಕಿಗನಾಗಿ, ಸಾಮಾನ್ಯ ಗೃಹಸ್ಥನು ಹಾಡುಗಾರ ನಾಗಿ, ಪ್ರಾಧ್ಯಾಪಕನು ಕವಿಯಾಗಿ, ಅಧಿಕಾರಿಯು ರೈತನಾಗಿ ಪರಿವರ್ತಿತನಾಗಿರುವುದುಂಟು. ಹೀಗೆ ವೃತ್ತಿಗಳನ್ನು ಬದಲಾಯಿಸುವ ಮುಂಚೆ ಯಾವ ಪರೀಕ್ಷಾಕ್ರಮಕ್ಕೂ ಒಳಪಡ ಬೇಕಾಗಿಲ್ಲ; ಸಫಲತೆಗಾಗಿ ತವಕಪಡುವ ಒಳಗಿನ ಪ್ರವೃತ್ತಿವಿಶೇಷವೇ ಉಚಿತ ಕಾರ್ಯ ರಂಗವನ್ನು ಆಯ್ದುಕೊಳ್ಳುತ್ತದೆ. ಇದರಿಂದ ಆ ವ್ಯಕ್ತಿಗೆ ಆಂತರಿಕ ತೃಪ್ತಿಯುಂಟಾಗಿ ಕೆಲಸದಲ್ಲಿ ಸೊಗಸೆನಿಸುತ್ತದೆ. ಆ ಕೆಲಸ ತಾನಾಗಿ ಹೆಚ್ಚು ಹೆಚ್ಚು ಚೊಕ್ಕಟವಾಗುತ್ತದೆ, ಚೆನ್ನಾಗುತ್ತದೆ. ' ಯೋಗವು ಕರ್ಮಕೌಶಲ ' ಎಂಬ ಗೀತೆಯ ವ್ಯಾಖ್ಯೆಗೆ ಭಾಷ್ಯದೋಪಾದಿ ಯಲ್ಲಿದೆ ಶ್ರೀ ಅರವಿಂದಾಶ್ರಮ.

## ವಿಕಾಸಕ್ಕಾಗಿ ವಿಧಾನಗಳು

ವ್ಯಕ್ತಿಯೇ ಚಟುವಟಿಕೆಯ ಕೇಂದ್ರವೆಂಬ ತತ್ತ್ವದ ಮೇರೆಗೆ ಬೆಳೆಯುತ್ತಿರುವ ಆಶ್ರಮವು ಉತ್ಸಾಹ-ಉಲ್ಲಾಸ-ಆನಂದಗಳ ಬೀಡಾಗಿದೆ. ಕಾಲಕಾಲಕ್ಕೆ ಬೆಳೆಯುತ್ತಿರುವ ಚಟುವಟಿಕೆಗಳ ಮೂಲಕ ಆಶ್ರಮವು ಜೇನುಹುಟ್ಟಿನಂತೆ ಸದಾ ಕಾರ್ಯತತ್ಪರವಾಗಿರುತ್ತದೆ. ಈ ಚಟುವಟಿಕೆ ಗಳು ಹೊಸ ಹೊಸ ತಾಂತ್ರಿಕ ಸಮಸ್ಯೆಗಳನ್ನು ತಂದೊಡ್ಡಿದಂತೆ ಅವುಗಳಿಗೆ ಪರಿಹಾರವನ್ನು ಕಲ್ಪಿಸಲಾಗುತ್ತದೆ. ಬಡಿಗತನ, ಮನೆಗುಪಯುಕ್ತವಾದ ಕುರ್ಚಿ-ಮೇಜು-ಕವಾಟು ಮೊದ ಲಾದ ಮರದ ಕೆಲಸ, ಯಂತ್ರವಿದ್ಯೆ, ಬೇಕರಿ ( ರೋಟಿ ತಯಾರಿಸುವ ಭಟ್ಟಿ ), ಬಟ್ಟೆ ಒಗೆ ಯುವ ವಿಧಾನ, ಔಷಧಿ ವಿಭಾಗ, ಹೊಲಿಗೆ, ಮುದ್ರಣ, ತೋಟಗಾರಿಕೆ, ಕೃಷಿ-ಹೀಗೆ ಹಲವು

ಕಾರ್ಯವಿಭಾಗಗಳು ಆಶ್ರಮದಲ್ಲಿ ಉಂಟಾದುದು ಆಯಾ ಕೆಲಸಗಳ ಸಲುವಾಗಿಯಲ್ಲ, ಆದರೆ ಒಂದೊಂದು ವ್ಯಕ್ತಿಯನ್ನು ಕೇಂದ್ರವಾಗಿಟ್ಟುಕೊಂಡು. ಈ ವಿವಿಧ ವಿಭಾಗಗಳ ಆಡಳಿತವನ್ನೂ ಮೇಲ್ವಿಚಾರಣೆಯನ್ನೂ ಸಾಧಕರಿಗೆ ಒಪ್ಪಿಸಲಾಗಿದೆ; ಅವರಲ್ಲಿ ಹಲವರು ಉಚ್ಚ ಪದವೀಧರರಿದ್ದಾರೆ. ಅಲ್ಲಿಯ ಶಾರೀರಿಕ ಶ್ರಮದ ಕೆಲಸಗಳಲ್ಲಿ ಹೆಚ್ಚಿನ ಪಾಲನ್ನೂ ಸಾಧಕರೇ ಮಾಡುವರು; ಕೆಲವೊಂದು ಕೆಲಸಗಳಿಗಾಗಿ ಮಾತ್ರ ಹೊರಗಿನವರನ್ನು ಹಚ್ಚಲಾಗಿದೆ. ಆದರೆ ಭೋಜನಕ್ಕೆ ಸಂಬಂಧಿಸಿದ ಪ್ರತಿಕಾರ್ಯವನ್ನೂ ಸಾಧಕರೇ ನೋಡಿಕೊಳ್ಳುವರು. ಆಹಾರವು ಸಾದಾ, ಶುಚಿ, ಆರೋಗ್ಯಕರ, ಸತ್ತ್ವಯುತವಾಗಿರುವುದು. ಆಹಾರವಿಷಯಕ ಆರೋಗ್ಯ-ಸ್ವಚ್ಛತೆಗಳ ನಿಯಮಗಳನ್ನು ಅತ್ಯಂತ ಜಾಗರೂಕತೆಯಿಂದ ಪಾಲಿಸಲಾಗುವುದು.

"ಗೋಲ್ಕೊಂಡಾ" ಎಂದು ಕರೆಯಲ್ಪಡುವ ವಾಸಗೃಹವು ವೈಶಿಷ್ಟ್ಯಪೂರ್ಣ ಕಲಾಕೃತಿಯಾಗಿದೆ. ಆಶ್ರಮದ ಕಾರ್ಯಪದ್ಧತಿಗೆ ಅದೊಂದು ಒಳ್ಳೆಯ ಉದಾಹರಣೆಯಾಗಿದೆ. ಬೆಳೆಯುತ್ತಿರುವ ಸಾಧಕರ ಸಂಖ್ಯೆಗೆ ಹೊಸ ಸ್ಥಾನವನ್ನು ನಿರ್ಮಿಸುವ ಅಗತ್ಯವೇ ಇದನ್ನು ಕಟ್ಟಲು ಕಾರಣವಾಯಿತು. ಆಂಟೊನಿನ್ ರೇಮಂಡ್ ಎಂಬ ವಾಸ್ತುಶಿಲ್ಪಿಯ ಕಲ್ಪಕತೆಯ ಫಲವಿದು. ಮೂರಂತಸ್ತಿನ ಈ ಕಟ್ಟಡದಲ್ಲಿ ಕಾಜನ್ನು ಉಪಯೋಗಿಸಿಲ್ಲ, ಕಿಟಕಿಗಳಿಲ್ಲ, ಗೋಡೆಗಳು ಕೂಡ ಇಲ್ಲ. ಸಿಮೆಂಟಿನಲ್ಲಿಯೆ ಅಖಂಡವಾಗಿ ತಯಾರಿಸಲಾಗಿದೆ. ಎಷ್ಟು ಬೇಕಷ್ಟು ಗಾಳಿಬೆಳಕುಗಳನ್ನು ಒಳಗೆ ಬಿಡುವಂತೆ ನಿಯಂತ್ರಿಸಲು ಬರುವ ಸಿಮೆಂಟಿನ ಹಲಗೆಗಳೇ ಗೋಡೆಗಳು. ಅತ್ಯಾಧುನಿಕ ಸೌಕರ್ಯಗಳು ಈ ಕಟ್ಟಡದಲ್ಲಿವೆ.

ಆಶ್ರಮದಲ್ಲಿ ಯಂತ್ರಗಳಿಗೆ ಬಹಿಷ್ಕಾರವಿಲ್ಲ. ಹಳೆಯ ಪ್ರಾಥಮಿಕ ಉತ್ಪಾದನ ಸಾಧನಗಳನ್ನೇ ಉಪಯೋಗಿಸಬೇಕೆಂಬ ನಿರ್ಬಂಧವಿಲ್ಲ. ಒಳಗಿನ ಹದ ಮುಖ್ಯ. ಹದವರಿತು, ಹವಣರಿತು ನಡೆಯುವವನಿಗೆ ಯಾವ ಆಯುಧವೂ ತ್ಯಾಜ್ಯವಲ್ಲ.

## ಸಹಜ ಸೌಂದರ್ಯ

ಸ್ವಚ್ಛತೆಯೊಡನೆ ಸೌಂದರ್ಯವು ಹಾಗೂ ಅಚ್ಚುಕಟ್ಟು ಇಲ್ಲಿಯ ಜೀವನದ ವೈಶಿಷ್ಟ್ಯ. ಅಸ್ವಚ್ಛತೆ-ಅಸಹ್ಯತೆ-ಅವ್ಯವಸ್ಥೆ-ಅತಿರಂಜನೆ-ಅತಿರೇಕ ಎಲ್ಲಿಯೂ ಕಾಣವು. ಆಶ್ರಮದ ಕಟ್ಟಡಗಳು ಗಿಡ-ಬಳ್ಳಿ-ಹೂಗಳಿಂದ ನಳನಳಿಸುತ್ತವೆ. ಎಲ್ಲವುಗಳಲ್ಲಿಯೂ ಕಲೆ-ಕೌಶಲ-ಯೋಜನೆ-ಸುಬದ್ಧತೆ. ಒಂದೊಂದು ಹೂವಿಗೂ ಒಂದೊಂದು ಸಂಕೇತಾರ್ಥವಿರುವುದು. ಅವುಗಳ ಹೆಸರುಗಳು ವೈಶಿಷ್ಟ್ಯಪೂರ್ಣವಾದವುಗಳು. ಆಶ್ರಮದಲ್ಲಿ ಎಲ್ಲಿ ನೋಡಿದಲ್ಲಿ ಹೂಗಳೇ ಹೂಗಳು, -ಮನೆ-ಮೇಜು-ಹೂಬುಟ್ಟಿ-ತುರಾಯಿ ಎಲ್ಲವುಗಳನ್ನೂ ಅವು ಅಲಂಕರಿಸಿರುವವು; ಸರ್ವ ಸಮರ್ಪಣಭಾವದ ಪ್ರತೀಕಗಳಾಗಿ ಕಂಗೊಳಿಸುವವು.

## ಮಕ್ಕಳ ಶಿಕ್ಷಣ

ಹಲವು ವರ್ಷಗಳ ವರೆಗೆ ಆಶ್ರಮದಲ್ಲಿ ಮಕ್ಕಳಿಗೆ ಪ್ರವೇಶವಿರಲಿಲ್ಲ. ಆದರೆ ಆಶ್ರಮ ಜೀವನದ ಬೆಳವಣಿಗೆಯ ಅಂಗವಾಗಿ ಶಿಕ್ಷಣವಿಭಾಗವೊಂದು ಪ್ರಾರಂಭವಾಯಿತು. ಮಕ್ಕಳೊಂದಿಗರಾದ ಸಾಧಕರು ತಮ್ಮ ಮಕ್ಕಳ ಶಿಕ್ಷಣವನ್ನು ಬೇರೆ ಕಡೆಗೆ ಸಾಗಿಸಲೊಲ್ಲರಾದ್ದ

ರಿಂದ ಆಶ್ರಮದಲ್ಲಿ ಕಳೆದ ಮಹಾಯುದ್ಧದ ಕಾಲದಲ್ಲಿ ಶಾಲೆಯೊಂದನ್ನು ಪ್ರಾರಂಭಿಸಲಾಯಿತು.

ಅರ್ಥವಿಹೀನ ಶಿಕ್ಷಣದ ಭಾರದಲ್ಲಿ ಮಕ್ಕಳು ಜಿಬ್ಬೆಯಾಗಬಾರದು ; ಶಿಕ್ಷಣವು ಪದವಿಗಳಿಗಾಗಿಯಲ್ಲ, ಜ್ಞಾನಸಾಧನೆಗಾಗಿ— ಎಂಬುದು ಇಲ್ಲಿಯ ಶಿಕ್ಷಣಸೂತ್ರ. ಇಲ್ಲಿ ಮಕ್ಕಳಿಗೆ ಪದವಿಗಳಿಗಾಗಿ ಕಲಿಸುವುದಿಲ್ಲ; ಪದವಿಗಳೇ ಇಲ್ಲಿಲ್ಲ. ಮಕ್ಕಳ ವ್ಯಕ್ತಿತ್ವದ ವಿಕಾಸವೇ ಗುರಿ.

ಸಾಧಕರ ಮಕ್ಕಳಿಗೆ ಮಾತ್ರ ( ೪ರಿಂದ ೧೮ ವಯಸ್ಸಿನ ವರೆಗೆ ) ಈ ಶಾಲೆಯಲ್ಲಿ ಪ್ರವೇಶವಿದೆ. ಶಾಲೆಗೆ ಹೋಗುವ ಚಿಕ್ಕಮಕ್ಕಳ ಆನಂದ–ಉಲ್ಲಾಸಗಳನ್ನು ಹೇಳತೀರದು. ಮನೆಯಲ್ಲಿ ಬಿಟ್ಟುಬಂದ ಎಳೆಯ ಮಗುಗಳು ಕೂಡ ಶಾಲೆಯಲ್ಲಿ ಹೇಗೋ ನುಸುಳಿಬರುವುದುಂಟು— ಅಷ್ಟು ಆಕರ್ಷಕವಾಗಿದೆ ಅಲ್ಲಿಯ ವಾತಾವರಣ. ೧೪ರಿಂದ ೧೮ ವಯಸ್ಸಿನ ಹುಡುಗ–ಹುಡುಗಿಯರು ಆಶ್ರಮದ ವಿವಿಧ ಔದ್ಯೋಗಿಕ ಚಟುವಟಿಕೆಗಳಲ್ಲಿ ತಮ್ಮ ಶಿಕ್ಷಣದ ಅಂಗವಾಗಿ ಭಾಗವಹಿಸುವರು. ಹಲವು ಹುಡುಗಿಯರು ಆಶ್ರಮದ ಮುದ್ರಣಾಲಯದಲ್ಲಿ ಕೆಲಸ ಮಾಡುವರು.

## ಶಾರೀರಿಕ ಶಿಕ್ಷಣ

ಶಾಲೆಯ ಶಿಕ್ಷಣಕ್ರಮದಲ್ಲಿ ಆಟ-ವ್ಯಾಯಾಮ-ವಿನೋದಾವಳಿಗಳಿಗೆ ಉಚಿತ ಪ್ರಾಶಸ್ತ್ಯವನ್ನು ಕೊಡಲಾಗಿದೆ. ಈಚೆಗಂತೂ ಆಟ-ವ್ಯಾಯಾಮಗಳ ಚಟುವಟಿಕೆ ತುಂಬಾ ಬೆಳೆದಿದೆ. ಎಲ್ಲ ಬಾಲ-ಬಾಲಿಕೆಯರು ಇವುಗಳಲ್ಲಿ ಭಾಗವಹಿಸುವರು. ವ್ಯಾಯಾಮದ ಕಾರ್ಯಕ್ರಮಗಳು ಆಶ್ರಮ ಜೀವನದ ಮಹತ್ತ್ವದ ಅಂಗವಾಗಿ ಪರಿಣಮಿಸಿವೆ. ಅವು ಯಾರಿಗೂ ಕಡ್ಡಾಯವಾಗಿರದಿದ್ದರೂ, ಶಾಲೆಯ ಬಾಲ–ಬಾಲಿಕೆಯರೆಲ್ಲರಲ್ಲದೆ ಪ್ರೌಢ ಸಾಧಕರಲ್ಲಿ ಹೆಚ್ಚು ಪಾಲು ಜನರು ಅವುಗಳಲ್ಲಿ ಭಾಗಿಗಳಾಗುವರು. ಸಾಯಂಕಾಲಕ್ಕೆ ಆಟದ ಬೈಲಿನಲ್ಲಿ ಆಶ್ರಮದ ಹಿರಿಯರು-ಕಿರಿಯರು ತಾಯಿಯವರ ಸಮ್ಮುಖದಲ್ಲಿ ಸಾಮುದಾಯಿಕ ಸಂಚಲನ ( Parade )—ವ್ಯಾಯಾಮಗಳನ್ನು ನಡಸುವ ದೃಶ್ಯವು ರೋಮಹರ್ಷಕವಾದುದು. ಹಲವು ಜನ ತಪೋನಿಷ್ಠ ಸಾಧಕರು—ಹಲವಾರು ವರ್ಷಗಳನ್ನು ಧ್ಯಾನ-ಧಾರಣೆಯಲ್ಲಿ ಕಳೆದವರು ಸೈನಿಕ ಶಿಸ್ತಿನಿಂದ ಸಂಚಲನದಲ್ಲಿ–ಸಾಮೂಹಿಕ ವ್ಯಾಯಾಮಗಳಲ್ಲಿ ಭಾಗವಹಿಸುವ ನೋಟವು ಮನಸ್ಸನ್ನು ಸೆಳೆಯುವುದು. ಈ ಕಾರ್ಯಕ್ರಮ ಮುಗಿದಮೇಲೆ ಸುಮಾರು ೧೦ ಮಿನಿಟುಗಳ ವರೆಗೆ ತಾಯಿಯವರ ನೇತೃತ್ವದಲ್ಲಿ ಬಾಲ–ಬಾಲಿಕೆಯರೂ ಸಾಧಕರೂ ಚೌಕೋನಾಕಾರವಾಗಿ ನಿಂತು ಸಾಮೂಹಿಕ ಧ್ಯಾನವನ್ನು ನಡಸುವರು. ಪ್ರೇಕ್ಷಕರೂ ಸದ್ದಿಲ್ಲದೆ ಇದರಲ್ಲಿ ಬೆರೆತುಹೋಗುವರು. ಇದೊಂದು ಅಪೂರ್ವ ಅನುಭವ.

ಆಶ್ರಮದಲ್ಲಿಯ ಈ ಹೊಸ ಪ್ರಯೋಗದ ( ಆಟ-ವ್ಯಾಯಾಮಗಳ ) ತಾತ್ತ್ವಿಕ-ಯೌಗಿಕ ತಳಹದಿಯನ್ನು ಕುರಿತು, ಆಶ್ರಮದ ಶಾರೀರಿಕ ಶಿಕ್ಷಣದ ಚಟುವಟಿಕೆಗಳಿಗೆ ಮೀಸಲಾಗಿ ಕಳೆದ ವರ್ಷದ ಫೆಬ್ರುವರಿಯಿಂದ ಹೊರಡುತ್ತಿರುವ ಸಚಿತ್ರ ತ್ರೈಮಾಸಿಕ ಪತ್ರಿಕೆಯಲ್ಲಿ ಶ್ರೀ ಅರವಿಂದರ ಹಾಗೂ ತಾಯಿಯವರ ಸಂದೇಶಗಳು ಬರುತ್ತಿವೆ.

ಪಾಂಡಿಚೇರಿಯ ಕಡಲತೀರದ ಬಳಿ ಆಟದ ಬೈಲುಗಳು ಹಾಗೂ ಆವಶ್ಯಕ ಕಟ್ಟಡಗಳು ನಿರ್ಮಾಣವಾಗಿವೆ–ಇನ್ನೂ ಆಗುತ್ತಿವೆ. ಟೆನಿಸ್-ವ್ಹಾಲಿಬಾಲ್-ಹ್ಯಾಂಡ್‌ಬಾಲ್-ಫುಟ್‌ಬಾಲ್-

ಕ್ರಿಕೆಟ್-ಉದ್ದ ಹಾಗೂ ಎತ್ತರ ಜಿಗಿತ-ಭಾರವಾದ ಚೆಂಡು ತೂರುವುದು-ಮುಷ್ಟಿಯುದ್ಧ (ಬಾಕ್ಸಿಂಗ್)-ಮಲ್ಲಗಂಭ-ಗರಡೀಸಾಧಕ-ಯೋಗಾಸನಗಳು ಮೊದಲಾದ ಆಟ-ವ್ಯಾಯಾಮ ಗಳ ಶಿಕ್ಷಣವನ್ನು ತಜ್ಞ ಶಿಕ್ಷಕರು ತಕ್ಕ ಉಪಕರಣಗಳ ಸಹಾಯದಿಂದ ಕೊಡುವರು.

ಸ್ತ್ರೀಪುರುಷರಿಗೆ ಬೇರೆಬೇರೆ ವ್ಯಾಯಾಮಪದ್ಧತಿಗಳಿರಬೇಕೆಂಬ ತತ್ತ್ವವು ನಾಮುದಾಯಿಕ ಸಾಂಪ್ರದಾಯಿಕತೆಯ-ರೂಢಿವಶತೆಯ ಸಂಸ್ಕಾರಬಲದ ಪರಿಣಾಮವು, ಇದಕ್ಕೆ ಪ್ರತಿಯಾಗಿ ಎಲ್ಲರಿಗೂ ಸಾಮಾನ್ಯ ವ್ಯಾಯಾಮಪದ್ಧತಿಗಳನ್ನೇ ಯೋಜಿಸಬಹುದಾಗಿದೆ— ಎಂಬ ಹೊಸ ವಿಚಾರದ ಮೇರೆಗೆ ಇಲ್ಲಿ ಪ್ರಯೋಗಗಳು ನಡೆದಿವೆ. ಇದರಲ್ಲಿ ಯಶಸ್ಸೂ ದೊರೆಯತೊಡಗಿದೆ. ಬೇರೆಬೇರೆ ವಯಸ್ಸಿನ ಗುಂಪುಗಳನ್ನು ಏರ್ಪಡಿಸಲಾಗಿದ್ದು, ಅವುಗಳಲ್ಲಿ ಮುಖಂಡರನ್ನು ನಿರ್ಮಾಣ ಮಾಡುವುದು — ಆ ಮುಖಂಡರ ನೇತೃತ್ವದಲ್ಲಿ ಗುಂಪುಗಳು ಸಾಮೂಹಿಕವಾಗಿ ಪ್ರಗತಿ ಪಡೆಯುವುದು ಈ ಪ್ರಯೋಗದ ಗುರಿಯಾಗಿದೆ. ಒಂದೇ ಆಟದಲ್ಲಿ ಇಲ್ಲವೆ ವ್ಯಾಯಾಮ ದಲ್ಲಿ ಎಲ್ಲ ಲಕ್ಷ್ಯವನ್ನು ಹಾಕಿ ಅದರಲ್ಲಿ ಪರಿಣತಿಯನ್ನು ಪಡೆಯುವುದೊಳಿತೋ, ಮುಖ್ಯ ಮನಸ್ಸಿನ ಕೇಂದ್ರೀಕರಣವನ್ನು ಸಾಧಿಸಿ ಹಲವು ಆಟ-ವ್ಯಾಯಾಮಗಳಲ್ಲಿಯೂ ಅಷ್ಟೇ ಏಕಾಗ್ರತೆಯಿಂದ ಕೌಶಲ್ಯವನ್ನು ಸಂಪಾದಿಸುವುದು ಮೇಲೋ ಎಂಬ ವ್ಯಾಯಾಮಶಿಕ್ಷಣದ ಪ್ರಮೇಯಗಳಲ್ಲಿ ಎರಡನೆಯದೇ ಕಷ್ಟಸಾಧ್ಯವಾದರೂ ಸಾಧಿಸಲು ಯೋಗ್ಯವೆಂಬ ಸಿದ್ಧಾಂತ ಕ್ಕನುಸಾರವಾಗಿ ಇಲ್ಲಿ ಪ್ರಯೋಗಗಳು ನಡೆದಿವೆ. ಇಲ್ಲಿ ಉಚಿತ ಸ್ಪರ್ಧೆಗೆ ಅವಕಾಶವಿದೆ, ಆದರೆ ಸಲ್ಲದ ಏರಾಟಿಕೆಗೆ ಸ್ಥಾನವಿಲ್ಲ.

ಆಟದ ಸಮವಸ್ತ್ರ ಧರಿಸಿದ ಹಿರಿ-ಕಿರಿ ಬಾಲಕ-ಬಾಲಿಕೆಯರ ಓಡಾಟದಿಂದ ಆಶ್ರಮವು ನಗೆ-ನಲಿದಾಟಗಳ ತವರುಮನೆಯಾಗಿ ತೋರುವುದು. ಮಕ್ಕಳು ಯಾವಾಗಲೂ ತಾಯಿಯವ ರನ್ನು ಸುತ್ತುವರಿದಿರುವರು. ತಾಯಿಯವರ ಮಮತೆಯಾದರೂ ಮಕ್ಕಳ ಮೇಲೆಯೇ ತಿರುಗಿದೆ ಎಂದೆನಿಸುವಂತಿದೆ.

ಅಂತೂ ಶ್ರೀ ಅರವಿಂದಾಶ್ರಮವು ಎಳೆಮಕ್ಕಳ ನಲಿದಾಟದಿಂದ, ಹುಡುಗ ಹುಡುಗಿ ಯರ ಹಿಗ್ಗಿನ ಕೇಕೆಗಳಿಂದ, ಸಾಧಕರ ವಿಧೇಯ-ಕಾರ್ಯತತ್ಪರ ಜೀವನಕ್ರಮದಿಂದ, ಹೂಬಳ್ಳಿ-ಗಿಡಮರಗಳ ಆಹ್ಲಾದಕರ ರಚನೆಯಿಂದ, ಸಾರ್ವತ್ರಿಕ ಸ್ವಚ್ಛತೆ-ಸುಬದ್ಧತೆ-ಸುಪ್ರಸನ್ನತೆಗಳಿಂದ, ಇವುಗಳನ್ನೆಲ್ಲ ಅಪಾರಕಾರುಣ್ಯದಿಂದ ಆಶೀರ್ವದಿಸುವ ದಿವ್ಯಸ್ಮಿತದಿಂದ, ಇವೆಲ್ಲವುಗಳಿಗೆ ಆಧಾರ-ಆಶ್ರಯಸ್ವರೂಪಿಯಾದ ನೀರವ ಮೌನದಿಂದ, ಜೀವನದ ಗೂಢತೆ-ಗಭೀರತೆ-ವಿಶಾಲತೆ-ವ್ಯಾಪಕತೆ-ಸಹಜತೆ-ಸುಂದರತೆಗಳನ್ನು ಕುರಿತು ಸಂದರ್ಶಕರಲ್ಲಿ ವಿಚಾರ ತರಂಗಗಳನ್ನೆಬ್ಬಿಸುವುದು

ಸಂದರ್ಭ ಸಾಹಿತ್ಯ :

'Sri Aurobindo and His Ashram,' *Arya Publishing House, Calcutta* 'The Message of Sri Aurobindo and His Ashram,' *by P. B. Saint Hilaire & G. Monod-Herzen;* 'Bulletin of Physical Education—Quarterly Journal,' *Published by Sri Aurobindo Ashram, Pondicherry.*

—**ರಾಮಚಂದ್ರ ವಿನೀತ**

# ಪ್ರಾರ್ಥನೆ

## ( ಅ )

೧

“ ಗರಿಯೊಡೆಯುದ ಮರಿ ತಾಯಿಯ ಮರೆಯೊಳಗಿರುವಂತೆ ।
ಕರು ಹಸಿದಿರೆ ಹಸುವಿನ ಬಳಿ ಬೇಗನೆ ಬರುವಂತೆ ॥
ಮರಗುವ ಸೀರೆಯು ಬರುವೊಲು ಬಳಲಿದ ನೀರನೆಡೆ ।
ಗುರು ಅರವಿಂದಾಕ್ಷನೆ ನಾ ನೋಡುವೆ ನಿನ್ನ ಕಡೆ ”॥

“ ಕಬ್ಬಿಣವನು ಚುಂಬಕ ತಾನೇ ಎಳೆವಂತೆ ।
ಕಂಗೆಟ್ಟಿರೆ ಎದೆ-ಬಯಲಲಿ ಚಿತ್ರಛವಿ ಹೊಳೆವಂತೆ ॥
ನಿನ್ನೆಡೆ ನೀನೆಳೆದೊಯ್ ನನ್ನನು ಶ್ರೀ ಗುರುವರನೇ ।
ಮರೆತಿರಲೇನಾ ಭಕ್ತನು, ಗುರು ಕರೆಯಲು ಬರನೇ ”॥

“ ಧ್ರುವ ತಿರುಗಿಸಿಕೊಳ್ಳನೆ ಉತ್ತರಮುಖಿ-ಮುಖವನ್ನು ।
ಜೀವನು ಚಿತ್ತಿಗೆ ಈಯನೆ ಆತ್ಮಿಕ ಸುಖವನ್ನು ॥
ಕೂಪದಿ ಹುಗಿದಿಹ ಭಕ್ತನು ಕರೆದಿರೆ ನಿನ್ನನ್ನು ।
ಸರಿಯೇ ಸಹಜವೆ ಗುರುವೇ, ಬರದಿರುವರೆ ಇನ್ನು ”॥

೨

ಪದ-ಕರ-ಶಿರ ಸಮುಗೂಡಲಿ ಸಹ ಸೇರಲಿ ತಾಯೇ ।
ಕೆಳಮೊಗವನು ಮೇಲೆತ್ತುತ ಮುದ್ದಿಡು ಮಹಮಾಯೇ ॥
ಮುದದಲ್ಲಿಯೆ ಮೊದಲಾಯಿತು ಮೂಡಿರುವೀ ಮಾಟ ।
ಜಲದೊಳಗೆಯೆ ಜಡವರಳುತ ಜನಿಸಿದ ಜಗದಾಟ ॥

೩

ನೆಲದ ಮೈಯ ಕಾವೆ ಬಾ
ನೀರ ಮಿಂಚ ಹಾವೆ ಬಾ

## ಸಮರ್ಪಣ

ನಸುಕಿನ ಮುಂಜಾವೆ ಬಾ
ಬೆಳಕು ಬೇಕು ಬೆಳಕು.

ಗಾಳಿ ಸೊಕ್ಕಿ ದಿಕ್ಕ ತಿಕ್ಕಿ
ಬಾನ ತುಂಬ ಚುಕ್ಕಿ ಚುಕ್ಕಿ
ಬರಲಿ ಅಲ್ಲಿ ಸೂರ್ಯನುಕ್ಕಿ
ಬೆಳಕು ಬೇಕು ಬೆಳಕು.

ಮೈಗೆ ಎಂತೊ ಕಂಗಳು
ಇರುಳಿಗಂತು ತಿಂಗಳು
ಸುತ್ತುತಿವೆ ಜಗಂಗಳು
ಬೆಳಕು ಬೇಕು ಬೆಳಕು.

೪

ಬೆಳಕು ತುಂಬಿದೆ ಒಡಲಲು
ತುಂಬು ಹಾಲಿನ ಕಡಲೊಲು
ಬೆನ್ನ್ಗೆ ಇಳಿಸುತ ಮೈಯ, ಬಾಲವ, ತಲೆಗೆ ನೀಡುತ ಹೆಡೆಯನು
ಹಾವು-ಜೀವವು ಎತ್ತಿ ಹಿಡಿದಿದೆ ಕೋಟಿಮಣಿಗಳ ಕೊಡೆಯನು.

ಪ್ರಾಣಪತಿ ಜೀವೇಶ ಹೃದಯದಧೀಶ ಅಂತರ್ಯಾಮಿಯು
ಗುಟ್ಟಿನೊಳು ಸುಪ್ರೇಮಿಯು
ಹುಟ್ಟಿಗೆಲ್ಲಕು ಸ್ವಾಮಿಯು
ನಿದ್ದೆ ಮರೆಯಲಿ ಮಿದ್ದುತಿರುವನು ಸರ್ವಕಾಮದ ಕಾಮಿಯು

ಮುಕ್ತಲಯದಲಿ ನೆಡೆಯುತ
ಛಂದ ಭಾವಕೆ ಒಲಿಯುವಂದದಿ ನಮ್ಮ ಒಲವಿಗೆ ಒಲಿಯುತ
ಭಕ್ತಿ ತಾಲವ ಹಿಡಿಯುತ
ಜ್ಞಾನ ತೇಜದ ಗೊಂಬೆ ಮಾಡುವ ತನ್ನ ಲೀಲೆಗೆ ನಲಿಯುತ

೫

ಎತ್ತಲೂ ಮುಸುಕಿರುವ ಮುಗಿಲೆ ಓಡಿಲ್ಲಿಂದ
ಹೊರಪು ಬೇಕಾಗಿಹುದು ಹೊಲದ ಬೆಳೆಗೆ
ಜೀವನವನೇ ಸುರಿಸಿ ಜೀವವನು ಹೀರದಿರು
ದಿವ್ಯತೆಯ ಬೆಳೆ ಬರಲಿ ಜೀವಕಳೆಗೆ.

—**ಅಂಬಿಕಾತನಯ ದತ್ತ**

## ಪ್ರಾರ್ಥನೆ

## ( ೨ )

( ಪೂರ್ಣಯೋಗದಲ್ಲಿ ಕಾಲಿಡಲೆಳಸುವ ಸಾಧಕನ ಮನೋಭೂಮಿಕೆಯು ಎಂತಿರಬೇಕೆಂಬುವನ್ನು ಶ್ರೀ ಅರವಿಂದರು ತಮ್ಮೊಂದು ಪತ್ರದಲ್ಲಿ ವಿಶದಪಡಿಸಿದ್ದಾರೆ. ಆ ಅವತರಣಿಕೆಯ ಭಾವಾನುವಾದವಿದು. —Letters of Sri Aurobindo, First Series, p 78. )

ನೀನಲ್ಲದಿನ್ನಾವುದೆನಗೆ ಪ್ರಿಯ, ದೊರೆಯೇ !
ನೀನೆ ಪ್ರಿಯ ; ನಿನ್ನನುಳಿದೇನನರಿಯೆ !

ಮುಡಿಪಿಡುವದೆಂದಿರುವೆ ನಿನಗಾಗಿ ಜೀವನವ
ದಿವ್ಯಸಂಕಲ್ಪ ಮನದೊಳಗೆ ತೊಳಗಿ,
ಇಂದಿಲ್ಲ ನಾಳೆ ಕಾಣುವವು ಕಂಗಳು ನಿನ್ನ
ವಿಶ್ವಪಾವನ-ರೂಪವೆಡೆಯ ಬೆಳಗಿ.

ನಾನು ಕೇಳುವ ವರವಿದೊಂದೆ, ಒಂದೇ ದೊರೆಯೆ !
ನಿನ್ನೆಡೆಗೆ ಕರೆದೊಯ್ಯು ಅಭಯಕರವು ,
ನಿನ್ನ ವ್ಯಕ್ತಾವ್ಯಕ್ತ ಗುಪ್ತ ಇಲ್ಲಿವೆ ಮುಕ್ತ
ಪ್ರಭೆಯಿಂದ ನಿತ್ಯ ಶುಚಿಗೊಳುವ ಇರವು.

ಎಲ್ಲಿವಿಂದೇ ಎಂದು ಗೊಂದಲಿಗೆಡೆನು ನಾನು
ಎಂದು ನಿನಗುಚಿತವೋ ಅಂದು ನೀಡು.
ಯಾವುದೊಂದು ವಿಧಾನವನು ನಂಬಿ ಕುಳಿತಿಲ್ಲ.
ನನಗಾವ ಪಂಥಾನ— ನೀನೆ ನೋಡು

ನಿನ್ನನ್ನೆ ನಂಬಿರುವೆ, ನಿನ್ನ ದಿವ್ಯಾದೇಶ
ವನು ಕೊಂಬುವೆನು ವರಪ್ರಸಾದವೆಂದು.
ನಿಶ್ಚಿಂತಮಾನಸನು ನಿತ್ಯ ನೆನೆಯುವೆ ನಿನ್ನ
ಪ್ರಜ್ಞಾನಸಂನಿಧಿಯು ದೊರೆಯಲೆಂದು.

ಯಾವ ಸಂಕಟವೇನು ? ನೀ ಜೀವನಾಧಾರ.
ತಡವಾದರೇನಂತೆ ? ನೀನೆ ಗುರಿಯು.
ನಿನಗಾಗಿ ಹೃದಯಸಿಂಹಾಸನವು ಕಾದಿಹುದು.
ಎಂದೆಂದಿಗೂ ನೀನೆ ನನ್ನ ದೊರೆಯು.

ಅಚಲವಿರಲಿನ್ನು ಮನ. ಘನವನ್ನೆ ನಂಬಿರಲಿ.
ತೆರೆಯದನು ತವ ಪರಂಜ್ಯೋತಿ-ಪದಕೆ.
ಪಂಚಪ್ರಾಣಗಳಲ್ಲಿ ಪುಣ್ಯ ಸಂಚಯಿಸಿರಲಿ ;
ಸಜ್ಜುಗೊಳಿಸೈ ಶಾಂತಿ-ಆನಂದಕೆ.

ಬರುವುದೆಲ್ಲವು ಬರಲಿ. ನೋಂತ ನೋಂಪಿಯು ಬೆಳಗಿ
ಮಮತೆಯ **ಸಮರ್ಪಣೆ** ಚಿರಾಯುವಿಹುದು.
ಸಿದ್ಧಿಯೇ ಇಂದಿಲ್ಲ ನಾಳೆ ಸಿದ್ಧವದೆಂಬ
ಶ್ರದ್ಧೆಯೇ ಹೃದಯದಿ ಸಮೃದ್ಧವಿಹುದು.

ಕಾಲವು, ಚರಾಚರವು ಚಿದ್ಘನದ ಉಳಿಗವು.
ಇಹುದೆಲ್ಲ ನಿನಗಾಗಿ, ನನ್ನ ದೊರೆಯೆ!
ಎಲ್ಲರೊಲು ನಿನ್ನಡಿಗೆ ನನ್ನ ಜೀವನ ಮುಡಿಪು
ಈ ಶ್ರದ್ಧೆಯಾಳದಲಿ ಮುಂದುವರಿವೆ.

**—ವಿನಾಯಕ**

( ೫ )

ಅರವಿಂದ ಮಕರಂದವೇ
ಹೊಸ ಯುಗದ ಬಿಸವಂದವೇ!

ದಶದಿಕ್ಕುಗಳ ಗಾಳಿಗಾಳಿಯಲಿ
ಜೀವಜೀವದ ಭಾವದಾಳದಲಿ
ದಿವ್ಯ ಜೀವನ ರಸದ ತೊರೆಯಾಗಿ
ಹರಿದು ಬಾ ಅರಿವಿನಾ ನೆರೆಯಾಗಿ ॥ ೧ ॥

ಹಿಂದಿನಿಂದಿನ ಎಲ್ಲ ತಿಳಿವುಗಳ
ತಿರುಳಾದ ತನಿಜೇನೆ! ಹಿರಿಬಾಳ
ನರುಗಂಪೆ! ಚೆಲುವಿಕೆಯ ನನೆಕೊನೆಯೆ!
ಇರುವಿಕೆಯ ಅರಳಿಕೆಯ ಕೊನೆಮೊನೆಯೆ! ॥ ೨ ॥

ಭಾರತದ ಋಷಿವರರ ಕವಿಗಣದ
ದರ್ಶನದ ಸಾರಮಧು ಬೆರೆಬೆರೆದ
ಪೂರ್ಣಯೋಗದ ಪರಮ ಪರಿಣತಿಯೆ!
ಸತ್ಯಯುಗ-ಸತ್ಯವನು ಕಂಡ ಮತಿಯೆ! ॥ ೩ ॥

ಹಿಮದೈವತದ ಧವಳ ಶಿಖರವನು
ಕತ್ತಲೆಯು ಕರಿನೆರಳು ಕವಿದು ತಾನು
ಅಣಕಿಸುವೊಲಿಂದಿನೀ ಜಗದಿರವು
ಕೊಳೆಯಾಗಿ ಬಳಸಿಹುದು ನಿನ್ನ ಚೆಲುವ ! || ೪ ||

ಹೊಳೆ ನೀನು ಹರಿಹರಿದು ಬಾಳ ತೊಳೆ
ಪೂರ್ಣಜೀವನದೆಡೆಗೆ ಚಿತ್ತವೆಳೆ
ನಮ್ಮೊಳದ ಪರಕ್ರತುವ ಚೇತರಿಸು
ಪೂರ್ಣತೆಯ ಪಥದಿ ಮುನ್ನಡಸೆಮ್ಮನು || ೫ ||

—ರಸಿಕ ರಂಗ

---

## ಶ್ರೀ ಅರವಿಂದಪಥ

ಕೋಟಿ ಕೋಟಿ ಗ್ರಹಮಂಡಲ
ಬ್ರಹ್ಮಾಂಡದ ಬಸಿರಲಿ ;
ಕೋಟಿಕಲ್ಪಕಾಲವಲ್ಪ
ಕಾಲದೊಂದೆ ಉಸಿರಲಿ !
ಕಾಲವೆ ಕಣ್ಣಾಗಿ ಕಾಂಬ
ವಿಶ್ವರೂಪ ದೈವಕೆಂಬ
ನಿನ್ನೊಳಿಹುದು ಬ್ರಹ್ಮಾಂಡ
ಅದುವೆ ಅಮೃತ ಪಿಂಡಾಂಡ !

ಲೋಕಜನಕೆ ಮಾತು ಹಗಲು,
ಅದರೊಳವರಿಗೆಚ್ಚರ--
ಮೌನ ಹಗಲು, ಮಾತು ಇರುಳು
ಸಂಯಮಿ ನಿನ್ನುತ್ತರ !
ದಿವ್ಯಲೋಕದಮರಗೀತ
ದೇಹ ಧರಿಸಿ ನಿಂದ ವ್ರತ--
ಸರ್ವಭೂತಹಿತೇ ರತ
ಅರವಿಂದರ ಸತ್ಯಪಥ !

—ಜಿ. ಆರ್. ಪಾಂಡೇಶ್ವರ್

# ಶ್ರೀ ಅರವಿಂದರ ಸಾಹಿತ್ಯ

— ಸಂಕ್ಷಿಪ್ತ ಪರಿಚಯ

## ಸ್ವರೂಪ

ಶ್ರೀ ಅರವಿಂದರ ಸಾಹಿತ್ಯವೆಲ್ಲ ದಾರ್ಶನಿಕ ಸಾಹಿತ್ಯ. ಅಂದರೆ ಯಾವುದಾದರೊಂದು ವಿಶಿಷ್ಟದರ್ಶನವನ್ನು, ಒಂದು ಮತ ಇಲ್ಲವೆ ಪಂಥವನ್ನು ಪ್ರತಿಪಾದಿಸುವುದೆಂದಲ್ಲ. ಅವರ ದಿವ್ಯಾನುಭವವೇ, ಅವರ ದೈವೀ ಸಾಕ್ಷಾತ್ಕಾರವೇ ಅವರ ಎಲ್ಲ ಸಾಹಿತ್ಯದ ಅಡಿಗಲ್ಲು. ಈ ಅರ್ಥದಲ್ಲಿ ಅದು ದಾರ್ಶನಿಕ. ಅವರ ಮುಖ್ಯ ಗ್ರಂಥಗಳೆಲ್ಲ **"ಆರ್ಯ"** ಪತ್ರಿಕೆಯ ಮುಖಾಂತರ ಪ್ರಕಟಗೊಂಡವು. **"ಆರ್ಯ"**ವನ್ನು ಆರಂಭಮಾಡಿದುದು ಪಾಲ್ ರಿಚರ್ಡ ರವರ ಸಲಹೆಯ ಮೇರೆಗೆ. "ಹೊಸ ಯುಗವು ಆರಂಭವಾಗುವುದಿದೆ. ಮಾನವಕೋಟಿಯು ಹೊಸ ಪರಿವರ್ತನೆಯನ್ನು ಕಾಣುತ್ತಿದೆ. ಮಾನವ ಜನಾಂಗದ ಜೀವನರೀತಿಯೇ ಬೇರೆ ಯಾಗುವುದಿದೆ. ಈ ಕಲ್ಪನೆಯು, ಈ ಆಶೆಯು ಎಲ್ಲ ದೇಶಗಳಲ್ಲಿ ವಿಚಾರವಂತರಿಗೆ ವಿವಿಧ ರೀತಿಯಲ್ಲಿ ಭಾಸವಾಗುತ್ತಿದೆ. ಈ ಉದ್ಯಮದ ಸಫಲತೆಗಾಗಿ ನಾವು ಒಂದು ಆಧ್ಯಾತ್ಮಿಕ, ಧಾರ್ಮಿಕ ಸೂತ್ರವನ್ನು ಶೋಧಿಸುವೆವು. ಯಾವ ಆಧ್ಯಾತ್ಮಿಕ ಅನುಭವ ಮತ್ತು ಸಾಮಾನ್ಯ ಸತ್ಯಗಳ ಮೇಲೆ ಈ ಪ್ರಯತ್ನವು ಆಧಾರಗೊಂಡಿರುವುದೋ ಆ ಅನುಭವ-ಸತ್ಯಗಳು ನಮ ಗಾಗಲೇ ವೇದ್ಯವಾಗಿದ್ದುವು. ಇಲ್ಲವಾದರೆ ಈ ಪ್ರಯತ್ನವನ್ನು ಮಾಡುವ ಅಧಿಕಾರವೇ ನಮಗಿರುತ್ತಿರಲಿಲ್ಲ. ಆದರೆ ಅವುಗಳ ಸಂಪೂರ್ಣ ಬೌದ್ಧಿಕ ನಿರೂಪಣೆಯನ್ನು, ಅವುಗಳ ಪರಿಣಾಮ-ಸಿದ್ಧಾಂತ-ಸಮಸ್ಯೆಗಳ ವಿಶ್ಲೇಷಣೆಯನ್ನು ಕ್ರಮವಾಗಿ ಮಾಡುವ ಅಗತ್ಯವಿದ್ದಿತು. ಬೃಹತ್-ಸಮನ್ವಯವೇ **"ಆರ್ಯ"**ದ ಗುರಿ." ಈ ಘನೋದ್ದೇಶವನ್ನಿಟ್ಟುಕೊಂಡು **"ಆರ್ಯ"**ವು ಅಗಸ್ಟ ೧೫, ೧೯೧೪ರಲ್ಲಿ ಜನ್ಮ ತಾಳಿತು.

ಆಧುನಿಕರ ಅವಗಾಹನೆಗೆ ತಕ್ಕ ಸರಣಿಯಲ್ಲಿ ಶ್ರೀ ಅರವಿಂದರು ಬರೆದಿದ್ದರೂ, **ಆರ್ಯ**ದ ಸಾಹಿತ್ಯವೆಲ್ಲ ಬರಿ ಮನೋಲೋಕದ ಸೃಷ್ಟಿಯಾಗಿರದೆ ನಿಸ್ತರಂಗ-ನಿಃಸ್ಪಂದ ಮನಃಸ್ಥಿತಿ ಯಿಂದಲೇ ಅವತರಿಸಿದೆ. ಈ ಅರ್ಥದಲ್ಲಿಯೂ ಶ್ರೀ ಅರವಿಂದರ ಕೃತಿಗಳು ಸಾಮಾನ್ಯ ಸಾಹಿತ್ಯದಿಂದ ಅತಿ ಭಿನ್ನವಾಗಿವೆ. 'ಸಾಹಿತ್ಯ'ವೆಂಬುದರಲ್ಲಿಯೂ ಅಂತಸ್ತುಗಳಿವೆ. ಗದ್ಯ-ಪದ್ಯ ಸಾಹಿತ್ಯವಿದೆ. ಗದ್ಯದಲ್ಲಿ ಅನೇಕ ವಿಭಾಗಗಳುಂಟು—ಕತೆ, ಕಾದಂಬರಿ, ಪ್ರಬಂಧ, ವಿಮರ್ಶೆ, ಜೀವನಚರಿತ್ರೆ ಮೊದಲಾದವು; ಈ ಒಂದೊಂದು ವರ್ಗದಲ್ಲಿಯೂ ಅನಂತ

ಪ್ರಯೋಗ-ಪ್ರಭೇದಗಳಿವೆ. ಹಾಗೆಯೇ ಪದ್ಯದಲ್ಲಿಯೂ ಲಾವಣಿ-ಜೋಗುಳ ಪದಗಳು ಮೊದಲುಗೊಂಡು ಭಾವಗೀತ, ನಾಟಕ, ಮಹಾಕಾವ್ಯಾದಿಗಳಿವೆ; ಮತ್ತಿವುಗಳೊಳಗೆ ವಿವಿಧ ರೀತಿ-ರಂಗಗಳಿವೆ. ಈ ಎಲ್ಲ ಸಾಹಿತ್ಯ ಸಮುದಾಯದಲ್ಲಿ ನಾವು ಮುಖ್ಯವಾಗಿ ಮೂರು ಲಕ್ಷಣಗಳನ್ನು ಕಾಣಬಹುದು. ಮೊದಲನೆಯದು ಸಾಹಿತ್ಯಕ್ಕೂ ಜೀವನಕ್ಕೂ ಇರುವ ನಿಕಟ ಸಂಬಂಧ. ಇಂದ್ರಿಯಗಳೇ ಈ ಸಂಬಂಧವನ್ನು ಕಲ್ಪಿಸಲು ಮುಖ್ಯ ಸಾಧನ. ಎರಡನೆಯದು ಸಾಹಿತಿಯ ಅಂತರಂಗವನ್ನು ಕುರಿತುದು. ಸಾಹಿತ್ಯವು ವಾಸ್ತವಿಕ ಚಿತ್ರವಲ್ಲ, ರಸಜ್ಞನ ಅನುಭವಸಾರ, ವೈಯಕ್ತಿಕ ಸೃಷ್ಟಿ. ಮೂರನೆಯದೆಂದರೆ ಸಾಹಿತ್ಯವು ಆನಂದವನ್ನೀಯುವುದಾಗಿದೆ. ತನಗಾದ ಆನಂದವನ್ನು ಜನಸಾಮಾನ್ಯಕ್ಕೆ ತನ್ನ ಕಲಾಕೌಶಲ್ಯದಿಂದ ಪ್ರತಿರೂಪಿಸುತ್ತ ಸಾಹಿತ್ಯದ ಮೂಲಕ ಸಹೃದಯತೆಯನ್ನೇ ಅರಳಿಸುವುದು ಸಾಹಿತಿಯ ಧರ್ಮ.

ವ್ಯಕ್ತಿ ಮತ್ತು ಸಮಾಜ ಒಂದು ಮಟ್ಟಕ್ಕೆ ಬರುವ ವರೆಗೆ ಸಾಹಿತ್ಯಸೃಷ್ಟಿಯೇ ಇಲ್ಲ. ಹಾಡು, ಕುಣಿತ, ಕೋಲಾಹಲ, ಅಭಿನಯ--ಇವೇ ಸಾಹಿತ್ಯದ ಪೂರ್ವರಂಗ. ಮಾನವ ಜಾತಿಯು ಇಡಿಯಾಗಿ ಈ ಪ್ರಶವಾವಸ್ಥೆಯನ್ನು ಎಂದೋ ದಾಟಿ, ಬೇರೆ ಬೇರೆ ಭಾಷಾ ಸಂಪ್ರದಾಯಗಳನ್ನು ಬೆಳೆಸಿ, ಅವುಗಳ ಮೂಲಕ ಸಾಹಿತ್ಯ ಸಂಪತ್ತನ್ನು ದೊರಕಿಸಿಕೊಂಡಿದೆ. ವಿಚಾರ-ವಿಶ್ಲೇಷಣಗಳು ಅಧಿಕವಾಗಿ ಬೆಳೆದಿರುವ ನಮ್ಮ ಕಾಲದಲ್ಲಿ ಸಾಹಿತ್ಯವು ನೇರವಾಗಿ ಹೃದಯದಿಂದ ಹೊರಹೊಮ್ಮದೆ, ಮನಸ್ಸನ್ನೇ ಪ್ರಧಾನವಾಗಿಟ್ಟುಕೊಂಡು ಉದ್ವೇಶಪೂರಿತವಾಗಿದ್ದು ತನ್ನಲ್ಲಿ ತಾನೇ ಮೋಹಗೊಂಡದ್ದು (self-conscious) ಆಗಿದೆ. ವಿನೋದ, ನಿತ್ಯಜೀವನದ ಬೇಸರವನ್ನು ಕಳೆಯಲು ಅವಲಂಬಿಸಿದ ಪ್ರಸಂಗಗಳು, ವಾಸ್ತವಿಕ ಅನುಭವಗಳ ವಾಸ್ತವಿಕ ವರ್ಣನೆ, ಅತಿಶಯವೆಂದರೆ ಮಾನಸಿಕ ಆದರ್ಶಭಾವನೆಗಳು -- ಇವೇ ಈಗಿನ ಸಾಹಿತ್ಯದ ಸಾಮಾನ್ಯ ಪ್ರೇರಣೆಗಳು. ಶ್ರೀ ಅರವಿಂದರ ಭಾಷೆಯಲ್ಲಿ ಹೇಳುವುದಾದರೆ, ಮಾನವನ ಕಾಮನಾತತ್ತ್ವಕ್ಕೆ (Desire-soul) ಸೇರಿದ ಆಶೆ-ಆಶಯಗಳ, ಹಸಿವು-ಹಂಬಲಗಳ, ಮಹತ್ತ್ವ-ಮಹತ್ತ್ವಾಕಾಂಕ್ಷೆಗಳ ಸ್ವಭಾವ ನಿರೂಪಣೆಯೇ ಈಗಿನ ಸಾಹಿತ್ಯದ ಜೀವಾಳ. ಇವುಗಳಿಂದ ಶುದ್ಧವಾದ, ಅಖಂಡವಾದ ಆನಂದದ ಪ್ರಾಪ್ತಿಯಾಗುವುದಿಲ್ಲ. ಮನಸ್ಸಿನ ಸಾವಿರ ಉದ್ರೇಕಗಳನ್ನು, ವಿಕಾರಗಳನ್ನು, ಚಿತ್ತಚಾಂಚಲ್ಯ-ಚಾಪಲ್ಯಗಳನ್ನು (moods and passions) ಈಗಿನ ಸಾಹಿತ್ಯವು ರೂಪಿಸಲನುವಾಗಿರುವುದು. ಇದರಲ್ಲಿಯೂ ಉಚ್ಚ ನೀಚ ದರ್ಜೆಗಳಿವೆ. ಕೇವಲ ಇಂದ್ರಿಯತೃಪ್ತಿಗಾಗಿ ಬಾಹ್ಯ ಆವರಣ-ಸನ್ನಿವೇಶಗಳಿಂದ ಸ್ಫೂರ್ತಿ ಪಡೆದದ್ದು ಮೊದಲು ಬರುವುದು. ಎರಡನೆಯದಾಗಿ, ಭಾವಗಳ ಜಂಜಾಲವೇ ಆದ ರಾಗ-ವಿರಾಗಗಳ, ಆಸಕ್ತಿ-ಅನಾಸಕ್ತಿಗಳ, ತೃಪ್ತಿ-ಅತೃಪ್ತಿಗಳ ಪ್ರಾಣೋದ್ದೀಪ್ತ (vital) ಸಾಹಿತ್ಯ. ಮೂರನೆಯದೇ ಮನಸ್ಸಿನ ಶುದ್ಧ ಸತ್ತ್ವದಿಂದ ಜನಿತವಾದದ್ದು. ಇವು ಮೂರೂ ಬೇರೆ ಬೇರೆ ಪ್ರಮಾಣಗಳಲ್ಲಿ ಮಿಶ್ರವಾಗಿರಬಹುದು. ಕವಿಯು ಭಾವಾವೇಶದ ಉತ್ತಮ ಬೆನೆಯನ್ನು ಕಂಡಾಗ ಅತಿಮಾನಸ ಭೂಮಿಕೆಗಳಿಂದ ಸತ್ಯವನ್ನು ಪ್ರಾಸಾದಿಕವಾಗಿ ಪಡೆಯಬಹುದು. ಯಾವ ಸ್ಥಿತಿಯನ್ನು ಸಾಮಾನ್ಯ ಸಾಹಿತಿಯು ಅಪೂರ್ವವಾಗಿ ಅರೆಯರೆಯಾಗಿ ಕಾಣುವನೋ, ಕಂಡೂ ಯಥಾರ್ಥವಾಗಿ ವ್ಯಕ್ತಮಾಡಲಾರನೋ, ಆ ಸ್ಥಿತಿಯನ್ನು ಸಾಮಾನ್ಯವಾಗಿ ನಿರಾತಂಕವಾಗಿ ಅನುಭವಿಸಿ, ಮಂತ್ರರೂಪವಾಗಿ ಪ್ರಕಟಿಸಬಲ್ಲ ಶ್ರೀ ಅರವಿಂದರ ಸಾಹಿತ್ಯದ ನಿಲುಮೆಯನ್ನು ಗುರುತಿಸುವುದು ಸುಲಭಸಾಧ್ಯವಲ್ಲ.

## ವ್ಯಾಪ್ತಿ

ಮೇಲೆ ಕಾಣಿಸಿದುದು ಶ್ರೀ ಅರವಿಂದರ ಸಾಹಿತ್ಯದ ಸ್ಥೂಲಾತಿಸ್ಥೂಲ ಸ್ಫೂರ್ತಿವಿಶೇಷವಾಗಿದ್ದರೆ, ಅದರ ಕ್ಷೇತ್ರವು ಅತಿ ವಿಸ್ತೃತವಾದದ್ದಾಗಿದೆ. ಸಚ್ಚಿದಾನಂದ ಮೊದಲುಗೊಂಡು ಆಹಾರ, ನಿದ್ರೆ, ಕಾಮವಿಜ್ಞಾನಗಳ ವರೆಗೆ ವಿಷಯಗಳು ತುಂಬಿವೆ. ಯಾವೊಂದು ವಿಷಯವನ್ನು ತೆಗೆದು ಕೊಂಡರೂ, ಎಲ್ಲಿ ಆರಂಭ ಮಾಡಿದರೂ, ಅದೇ ಸಮಗ್ರದೃಷ್ಟಿ—ಅಣುವಿನಲ್ಲಿ ಮಹತ್ತನ್ನೂ ಮಹತ್ತಿನಲ್ಲಿ ಅಣುವನ್ನೂ ಸಂದರ್ಶಿಸಿ ಪ್ರದರ್ಶಿಸುವ ಸಾಮರ್ಥ್ಯ ತೋರಿಬರುವುದು. ವೇದ, ಉಪನಿಷತ್ತು, ಇತಿಹಾಸ, ಪುರಾಣ, ತಂತ್ರ, ಯೋಗ, ಕಾವ್ಯ, ಸಂಸ್ಕೃತಿ, ಭಾಷೆಯ ವ್ಯುತ್ಪತ್ತಿ, ಪ್ರಗತಿ, ರಾಜನೀತಿ, ಪೌರ್ವಾತ್ಯ–ಪಾಶ್ಚಾತ್ಯ ನಾಗರಿಕತೆಗಳ ಆದರ್ಶಗಳು ಮತ್ತು ಸಾಧನೆಗಳು, ಮನಃಶಾಸ್ತ್ರ, ಆರ್ಯಧರ್ಮ, ಗ್ರೀಕರ ತತ್ತ್ವಶಾಸ್ತ್ರ, ಸಾಹಿತ್ಯ, ಚಿತ್ರಕಲೆ, ಶಿಲ್ಪಕಲೆ, ಸಮಾಜದ ಬೆಳವಣಿಗೆ, ಭೌತಿಕವಾದ, ವಿಕಾಸವಾದ ಮತ್ತು ಅದರ ಆಧ್ಯಾತ್ಮಿಕ ಪರಿವರ್ತನೆ, ನೀತಿಶಾಸ್ತ್ರವಿಚಾರ, ಸೌಂದರ್ಯ ಮೀಮಾಂಸೆ, ಮತಧರ್ಮಗಳ ಚರ್ಚೆ, ರಾಷ್ಟ್ರೀಯ ಶಿಕ್ಷಣ, ಕರ್ಮ, ಪುನರ್ಜನ್ಮ, ಯುದ್ಧ, ಶಾಂತಿ, ಸಮೃದ್ಧಿ ಇವೆಲ್ಲವುಗಳ ಧಾರಾಳ ವಿವರಣೆಯಿದೆ ಅವರ ಗ್ರಂಥಗಳಲ್ಲಿ. ಆಯಾ ಗ್ರಂಥಗಳ ವಿಶದ ವಿವರವನ್ನು ಇಲ್ಲಿ ಕೊಡು ವುದು ಸಾಧ್ಯವಿಲ್ಲ. ಈ ಅಪಾರ ಗ್ರಂಥರಾಶಿಯನ್ನು ಸ್ಥೂಲವಾಗಿ, ಯಾವ ದೃಷ್ಟಿಯಿಂದ, ಯಾವ ಕೋನದಿಂದ ಬರೆದಿರುವರೆಂಬುದನ್ನು ಮಾತ್ರ ಸೂಚಿಸಬಹುದು. ವೇದವಿರಲಿ, ಉಪನಿಷತ್ತುಗಳಿರಲಿ, ಗೀತೆಯಿರಲಿ, ಕಾವ್ಯವಿರಲಿ, ಮಾನವಪ್ರಗತಿ ಪ್ರಶ್ನೆಯಿರಲಿ, ಮಾನ ವೀಯ ಐಕ್ಯದ ಆದರ್ಶವಿರಲಿ, ಎಲ್ಲವನ್ನೂ ಶ್ರೀ ಅರವಿಂದರು ಮುಂದೆ ಸ್ಥಾಪಿತವಾಗಲಿರುವ ಭಾಗವತ ಜೀವನವನ್ನೇ ( Life Divine ) ಉದ್ದೇಶಿಸಿ ಬರೆದಿರುವರು. ಆ ಸಾಗರದೆಡೆಗೆ ಎಲ್ಲ ನದಿಗಳೂ ಹರಿಯುವವು. ಇದೇ ಇವುಗಳಲ್ಲಿಯ ಏಕಸೂತ್ರತೆ.

## ವಿವರ

**The Life Divine** : — ಇದೇ ಶ್ರೀ ಅರವಿಂದರ ಗ್ರಂಥರಾಜ. ೧೨೦೦ ಪುಟ ಗಳನ್ನು ಮಿಕ್ಕಿದೆ. ಇದು ಶ್ರೀ ಅರವಿಂದರ ದರ್ಶನದ ತಳಹದಿ. ೨೮ ಅಧ್ಯಾಯಗಳನ್ನೊಳ ಗೊಂಡ ಮೊದಲನೆಯ ಸಂಪುಟವು ಪರಬ್ರಹ್ಮ ಸ್ವರೂಪವನ್ನು, ಸರ್ವಾಂತರ್ಗತವಾದ ಸತ್ಯ ವನ್ನು ಮತ್ತು ಸೃಷ್ಟಿಯನ್ನು ಕುರಿತದ್ದಾಗಿದೆ. ಎರಡನೆಯ ಸಂಪುಟದ ಮೊದಲನೆಯ ಭಾಗವು ಅನಂತಚೇತನ ಮತ್ತು ಅವಿದ್ಯೆಗಳನ್ನು ವಿಸ್ತರಿಸುವುದು. ಕೊನೆಯ ಭಾಗವು ವಿದ್ಯೆ ಮತ್ತು ಆಧ್ಯಾತ್ಮಿಕ ವಿಕಾಸಗಳ ಬಗ್ಗೆ ಇರುವುದು. ಗ್ರಂಥವು ಮಾನವೀಯ ಅಭೀಪ್ಸೆ ( human aspiration ) ಯಿಂದ ಪ್ರಾರಂಭವಾಗುವುದು ; ಭಾಗವತ ಜೀವನ ( Life Divine ) ದಿಂದ ಮುಗಿಯುವುದು. ಪ್ರಾಚ್ಯ-ಪಾಶ್ಚಾತ್ಯರಲ್ಲಿ ಬೆಳೆದು ಬಂದ ಪರಂಪರೆಗಳ ನ್ಯೂನಾತಿರೇಕಗಳನ್ನು ತಿದ್ದಿ, ಅತಿ ವಿಶಾಲವಾದ ಬೃಹತ್ ಸಮನ್ವಯವನ್ನು ರಚಿಸುವುದೇ ಈ ಗ್ರಂಥದ ಮಹೋದ್ದೇಶ. ಜೀವನದ ಸಮಸ್ಯೆಯೇ ಸಮನ್ವಯ-ಸಾಮರಸ್ಯಗಳ ಸಮಸ್ಯೆ ಯಾಗಿದೆ. ಕ್ಲಿಷ್ಟವೆಂದೂ ಜಟಿಲವೆಂದೂ ಒಂದು ಪ್ರಶ್ನೆಯನ್ನು ನಾವು ಎದುರಿಸದೆ ಯಾವುದೋ ಒಂದು ವ್ಯಾವಹಾರಿಕ ಸೂತ್ರವನ್ನವಲಂಬಿಸಿದರೆ, ಅದು ತಾತ್ಕಾಲಿಕ ಪರಿಣಾಮ ವನ್ನು ಕೊಡಬಹುದೇ ಹೊರತು ಚಿರಶಾಂತಿಯನ್ನೀಯಲಾರದು ; ಮೂಲಪ್ರಶ್ನೆಯು ಹಾಗೆಯೇ

ಉಳಿಯುವುದು. ಪಶುಚೇತನ-ಅಹಂಕಾರ ಚೇತನಗಳನ್ನು ತೊರೆದು, ದೈವೀ ಚೇತನವನ್ನು ಅರಿತು ಅನುಭವಿಸಬೇಕು. ನಸುಬೆಳಕಿನ, ಅಸ್ಪಷ್ಟ ಸ್ಥೂಲ ಮನೋವೃತ್ತಿಯನ್ನು ಪೂರ್ಣ ಅತಿಮಾನಸ ಜ್ಯೋತಿಯನ್ನಾಗಿ ಪರಿವರ್ತಿಸಬೇಕು. ಕ್ಷಣಿಕ ತೃಪ್ತಿಗಳಿಂದ ತುಂಬಿ, ಶಾರೀರಿಕ ಯಾತನೆ-ಸಂಕಟಗಳಿಗೆ ಗುರಿಯಾದ ಜೀವನವನ್ನು ಶಾಂತಿ-ಆನಂದಗಳ ಆಗರವನ್ನಾಗಿ ಮಾಡಬೇಕು. ಯಾಂತ್ರಿಕ ನಿಯಮಗಳ ವಜ್ರಬಂಧನದಂತೆ ತೋರುವ ಜಗತ್ತಿನಲ್ಲಿ ಅನಂತ ಸ್ವಾತಂತ್ರ್ಯ ಮುಕ್ತತೆಗಳನ್ನು ನೆಲೆಗೊಳಿಸಬೇಕು. ಮೃತ್ಯುವಿಕಾರಗಳಿಗೀಡಾದ ದೇಹದಲ್ಲಿ ಅಮೃತತ್ವವನ್ನು ಶೋಧಿಸಿ ಸ್ಥಾಪಿಸಬೇಕು. ಇದೇ ಭೌತಿಕದ ದೈವೀ ಪರಿವರ್ತನೆ. ಇದೇ, ಪ್ರಕೃತಿ ವಿಕಾಸದ ಗಮ್ಯ. ಸಾಮಾನ್ಯವಾದ, ಸೀಮಾಬದ್ಧವಾದ ಸ್ಥೂಲಬುದ್ಧಿಗೆ ಈಗಿನ ಸ್ಥಿತಿಗತಿಗಳೇ—ಈಗ ಪಡೆಯಲಾಗಿರುವ ಚೇತನವೇ ಮಾನವನ ಪ್ರಯತ್ನದ ಅಂತಿಮ ಸಿದ್ಧಿಯೆಂದು ಕಂಡುಬಂದರೂ, ನಮ್ಮ ಈಡೇರದ ಆದರ್ಶಗಳಲ್ಲಿ ಹಾಗೂ ವಾಸ್ತವ ಪ್ರಾಪ್ತಿಯಲ್ಲಿ ವೈಷಮ್ಯವು ತೋರಿಬಂದರೂ, ಪ್ರಕೃತಿಯ ಗೂಢವಾದ ವಿಕಾಸವಿಧಾನವು ಇದೇ ಎಂದು ನಾವು ಮನಗಾಣಬೇಕು. ಪಾಶ್ಚಾತ್ಯರ ಭೌತಿಕವಾದ ಮತ್ತು ಭಾರತೀಯರ ಆತ್ಮವಾದಗಳು ಎರಡು ಬಗೆಯ ಅತಿರೇಕ ಸಿದ್ಧಾಂತಗಳನ್ನೇ ವ್ಯಕ್ತಮಾಡುವವು. ಬಾಹ್ಯ ಜೀವನ-ಆಂತರ್ಯ ಜೀವನಗಳ ಪರಸ್ಪರ ಮೇಳ-ಸಮತೋಲಗಳೇ ಪರಿಪೂರ್ಣತೆಯ ಹೆಗ್ಗುರುತು. ಏಕಮೇವಾದ್ವಿತೀಯ ಸತ್ಯವನ್ನು ಕಂಡ ಭಾರತೀಯರು ಆದರ ಸಾರ್ವತ್ರಿಕ ಅನ್ವಯವನ್ನು, ವ್ಯಕ್ತಿ-ವಿಶ್ವಗಳಲ್ಲಿ ಸಮವಾಗಿ ಒಡಮೂಡಿರುವ ಪರತತ್ತ್ವವನ್ನು, **ಸರ್ವಂ ಖಲ್ವಿದಂ ಬ್ರಹ್ಮ** ಎಂಬ ಸೂತ್ರದ ಯಥಾರ್ಥತೆಯನ್ನು ಅಷ್ಟೇ ಗಾಢವಾಗಿ ಕಾಣಲಿಲ್ಲ. ಬ್ರಹ್ಮಚಿಂತನೆಯಲ್ಲಿ ಉನ್ಮಾದಗೊಂಡವರಾಗಿ ಜಗತ್ತನ್ನು ನಿರಾಕರಿಸಿದರು. ಭೌತಿಕವೂ ಸತ್ಯ, ಭೌತಿಕವಾದವು ತನ್ನ ಚರಮ ಸೀಮೆಯನ್ನು ಮುಟ್ಟಿದಾಗ ದೈವವನ್ನು ಕಾಣಲೇಬೇಕು. ಸಂನ್ಯಾಸ-ತಾಪಸ ವೃತ್ತಿಗಳೂ ಇನ್ನೂ ಹೆಚ್ಚು ಪ್ರಮಾಣದಲ್ಲಿ ದೈವಕ್ಕೆ ನೆರವಾಗಿವೆ. ದೈವೀ ಜೀವನವು ಸಿದ್ಧಿಸಬೇಕಾದರೆ ಇವೆರಡರ ಸತ್ಯವನ್ನೂ ಒಪ್ಪಿಕೊಳ್ಳಬೇಕು, ಎರಡನ್ನೂ ಸಮನ್ವಯಗೊಳಿಸಬೇಕು. **ಒಂದು** ಅನೇಕದ ಮೂಲ; **ಅನೇಕ**ವು ಏಕದ ಅನಂತ ರೂಪ. ಪರತತ್ತ್ವವು ಏಕದಿಂದಾಗಲಿ ಬಹುತ್ವದಿಂದಾಗಲಿ ನಿಯಮಿತವಾಗಿರದೆ, ಬಂಧಿತವಾಗಿರದೆ ಏಕಕಾಲದಲ್ಲಿ ಒಂದಾಗಿರಬಲ್ಲದು, ಅನೇಕವಾಗಿಯೂ ಇರಬಲ್ಲದು. ಆದರೆ ಏಕವೇ ಅನೇಕದ ಆಧಾರ, ಮೂಲ. ಅನೇಕವು ಏಕವನ್ನು ಅವಲಂಬಿಸುವುದು.

ಸಚ್ಚಿದಾನಂದದ ಸ್ವರೂಪ, ಸೃಷ್ಟಿಯ ಕ್ರಮ ಮತ್ತು ಮೂಲಾರ್ಥ, ಸಾವುನೋವುಗಳ-ದುಃಖ ದುಗುಡಗಳ ಇಂಗಿತ, ಏಳು ತತ್ತ್ವಗಳಿಂದ ನಿರ್ಮಿತವಾದ ಮನುಜಪ್ರಕೃತಿ, ಸೃಷ್ಟಿಯ ಆದಿಯಿಂದ ಮಾನವನ ಬುದ್ಧಿಗೆ ಅಗಾಧವಾಗಿಯೂ ಅಪರಿಹಾರ್ಯವಾಗಿಯೂ ತೋಚುತ್ತಿರುವ ಕೆಡುಕಿನ ಸಮಸ್ಯೆಯ ( Problem of Evil ) ಕೂಲಂಕಷ ವಿಚಾರ, ಅವಿದ್ಯೆಯ ಮೂಲ, ಅನೃತದ ಆದಿ, ತಾದಾತ್ಮ್ಯದ ಮೂಲಕ ಪಡೆಯಬಹುದಾದ ಜ್ಞಾನ ( Knowledge by Identity ), ಆಧ್ಯಾತ್ಮಿಕ ವಿಕಾಸದ ನಿಯಮ-ನಿಶ್ಚಿತತೆಗಳು, ಕರ್ಮ, ಪುನರ್ಜನ್ಮ, ಮರಣಾನಂತರದ ಸ್ಥಿತಿಗಳ ಪೂರ್ಣ ವಿವೇಚನೆ, ದೈವೀ ಪರಿವರ್ತನ ಹೊಂದಿದ ಮಾನವನ ( Gnostic Being ) ಸಂಪತ್ತು, ಭಾಗವತ ಜೀವನ ತತ್ತ್ವವನ್ನವಲಂಬಿಸಿದ ಸಂಘ-ಸಮಾಜಗಳ ಸಹಜ ಆಚಾರ-ಶೀಲಗಳು ಈ ಅಪೌರ್ವ್ಯ ಗ್ರಂಥದಲ್ಲಿ ನಿರೂಪಿಸಲ್ಪಟ್ಟಿವೆ.

ಜಿಜ್ಞಾಸುಗಳಿಗೆ ಅತಿ ಸಮರ್ಪಕವಾದ ಉತ್ತರಗಳನ್ನು ಕೊಡುವ ಗ್ರಂಥವಿದು. ದೇಹ, ಪ್ರಾಣ, ಮನ, ಊರ್ಧ್ವಮನ, ಪ್ರದೀಪ್ತ ಮನ ಮೊದಲಾದ ಚೇತನದ ಸಮಸ್ತ ಅಂತಸ್ತುಗಳ ಸ್ವಭಾವ-ಕ್ರಿಯೆಗಳನ್ನು ವರ್ಣಿಸುವ ಅದ್ಭುತ ಮನಃಶಾಸ್ತ್ರವು ಇದಾಗಿದೆ. ವಾಕ್ಯವಾಕ್ಯದಲ್ಲಿಯೂ ಶಬ್ದಶಬ್ದದಲ್ಲಿಯೂ ತರ್ಕಸರಣಿಯನ್ನು ನೋಡಬಹುದಾದರೂ, ಇಲ್ಲಿಯ ತರ್ಕವು ಕೇವಲ ಬೌದ್ಧಿಕ ಜಾತಿಗೆ ಸೇರಿದುದಲ್ಲ. ವಿಶಿಷ್ಟ ವಿಧಾನವುಳ್ಳ, ಅನಂತತೆಯನ್ನನುಲಕ್ಷಿಸುವ, ಅನಂತತೆಗೆ ಅನ್ವಯಿಸುವ, ಪರಿಮಿತಿಯನ್ನರಿಯದ ತರ್ಕವು ( Logic of the Infinite ) ಇಲ್ಲಿಯದು.

**The Secret of the Veda :—** ಈ ಲೇಖಮಾಲೆಯು "**ಆರ್ಯ**"ದ ಪ್ರಥಮ ಸಂಚಿಕೆಯಿಂದಲೇ ಪ್ರಾರಂಭವಾಯಿತು. ಪುಸ್ತಕರೂಪದಲ್ಲಿ ಇನ್ನೂ ಪ್ರಕಟವಾಗಿಲ್ಲ. ಇದು ಸಂಶೋಧನ-ಸಾಹಿತ್ಯಕ್ಕೆ ಸೇರಿದುದು. ಒಂದು ನೂತನ ಪ್ರಸ್ಥಾನವನ್ನೇ ಸ್ಥಾಪಿಸುತ್ತದೆ. ವೇದವು ಸಕಲ ಭಾರತೀಯ ಸಂಸ್ಕೃತಿಯ ಮೂಲವಾಗಿದೆ. ಬ್ರಾಹ್ಮಣಗಳ, ಉಪನಿಷತ್ತುಗಳ, ತಂತ್ರಗಳ, ಪುರಾಣಗಳ, ಷಡ್ದರ್ಶನಗಳ, ಎಲ್ಲ ಋಷಿಸಂತರ ಬೋಧೆಗಳ ಪ್ರಮಾಣ ಗ್ರಂಥವಾಗಿದೆ. ಸಾಯಣಾಚಾರ್ಯರು ಕರ್ಮಕಾಂಡವನ್ನೇ ಮುಖ್ಯವೆಂದು ಬಗೆದು ತಮ್ಮ ಭಾಷ್ಯವನ್ನು ಯಾಜ್ಞಿಕ ವಿಧಿಗಳಿಗೆ ಹೊಂದಿಸಿದ್ದಾರೆ. ಅವರ ದೃಷ್ಟಿಯಲ್ಲಿ ವೇದವೆಂದರೆ ಯಜ್ಞಯಾಗಾದಿ ಕರ್ಮಾಚರಣೆಯ ಆಧಾರಗ್ರಂಥ. ಯುರೋಪಿಯನ್ ಪ್ರಾಚ್ಯವಿದ್ಯಾ ಪ್ರವೀಣರು ಸಾಯಣಭಾಷ್ಯವನ್ನು ವಸ್ತುತಃ ಅಂಗೀಕರಿಸಿ ವೇದವನ್ನು ಭಾಷಾಶಾಸ್ತ್ರ, ಮತ ಧರ್ಮಶಾಸ್ತ್ರ, ಪುರಾಣ ಕತೆಗಳ ತುಲನಾತ್ಮಕ ಅಭ್ಯಾಸದೃಷ್ಟಿಯಿಂದ ಅರ್ಥಮಾಡುವುದನ್ನು ರೂಢಿಯಲ್ಲಿ ತಂದರು. ವ್ಯಾಕರಣ, ಶಬ್ದವ್ಯುತ್ಪತ್ತಿ, ಭಾಷಾಶಾಸ್ತ್ರಗಳನ್ನೇ ಅವರು ಮುಖ್ಯ ಸಾಧನಗಳನ್ನಾಗಿ ಇಟ್ಟುಕೊಂಡು ವೇದಭಾಷ್ಯವನ್ನು ರಚಿಸಿದರು. ಆಧುನಿಕ ತುಲನಾತ್ಮಕ ದೃಷ್ಟಿಯಿಂದ ವೇದವೆಂದರೆ ಅಪ್ರಬುದ್ಧ ಅನಾಗರಿಕ ಜನರ ಅಸಂಬದ್ಧ, ಅಪೂರ್ಣಾರ್ಥವುಳ್ಳ, ಪ್ರಕೃತಿದೇವತೆಗಳನ್ನುದ್ದೇಶಿಸಿ ಮಾಡಿದ ಸ್ತೋತ್ರಮಾಲೆಯಾಗಿದೆ. ಆದರೆ ಅಲ್ಲಲ್ಲಿ ಅಪವಾದಗಳು ತಲೆದೋರುವವು. ಪವಿತ್ರವಾದ ಗಾಯತ್ರಿಯು ವಿಶ್ವಾಮಿತ್ರಕೃತ ಸ್ತೋತ್ರದಿಂದ ಉದ್ಧರಿಸಲ್ಪಟ್ಟಿದೆ. ಇದು ಋಗ್ವೇದದ ಭಾಗ. ವೇದದಲ್ಲಿ ಸ್ಪಷ್ಟವಾಗಿ ಪರಬ್ರಹ್ಮಸತ್ಯವು ನಿರೂಪಿಸಲ್ಪಟ್ಟಿದೆ. ಅದನ್ನೇ ಋಷಿಗಳು ನಾನಾ ಹೆಸರುಗಳಿಂದ ಸಂಬೋಧಿಸಿರುವರು. ಎಲ್ಲ ದೇವತೆಗಳೂ ಒಬ್ಬನೇ ಒಬ್ಬನಾದ ದೇವದೇವನ ಅನಂತರೂಪಗಳು. **ಅಗ್ನಿ** ಎಂದರೆ ಪ್ರತ್ಯೇಕ ದೇವನೊಬ್ಬನಲ್ಲದೆ ಎಲ್ಲ ದೇವರನ್ನು ತನ್ನಲ್ಲಿ ಒಳಗೊಂಡವನು. ಹೀಗೆ ಎಲ್ಲಿಯಾದರೂ ವಿಶೇಷಾರ್ಥವು ಮೂಡಿದ್ದರೆ, ಶುದ್ಧ ತತ್ತ್ವವು ಕಂಡುಬಂದರೆ, ಇಷ್ಟು ಉದಾತ್ತ ತತ್ತ್ವವು ಅನಾಗರಿಕ ಜನರಿಗೆ ಸೇರಿರಲಾರದಾದ್ದರಿಂದ ಅದು ತರುವಾಯ ಪ್ರತಿಪಾದಿಸಲ್ಪಟ್ಟಿರಬೇಕು. ಹೇಗೋ, ಮುಂದೆ ಬಂದ ಆರ್ಯರ ಹೃದಯ-ಬುದ್ಧಿಗಳ ಪರಿಪಾಕವಾಗಿರಬೇಕು. ಇಲ್ಲವಾದರೆ ಈ ಬೆಂಕಿ, ಗಾಳಿ, ಸೂರ್ಯ, ಚಂದ್ರ, ಆಕಾಶಗಳನ್ನೇ ಪೂಜಾವಸ್ತುಗಳನ್ನಾಗಿ ಇಟ್ಟುಕೊಂಡ ಈ ಅಪ್ರಬುದ್ಧ ಆರ್ಯರು ಸುಸಂಸ್ಕೃತ, ಆಧ್ಯಾತ್ಮಿಕ ಪ್ರವೃತ್ತಿಯುಳ್ಳ ತಮ್ಮ ದ್ರಾವಿಡ ವೈರಿಗಳಿಂದ ಅದನ್ನು ಸ್ವೀಕರಿಸಿರಬೇಕು........ಇದೇ ಅವರ ತರ್ಕ, ಕೇವಲ ಊಹಾಪೋಹೆ. ಇತ್ತೀಚೆಗೆ, ಪಂಜಾಬದ ಮಾರ್ಗವಾಗಿ ಆರ್ಯರು ಭಾರತವನ್ನು ಪ್ರವೇಶಿಸಿದರೆಂಬ ಸಂಗತಿಯೇ ಭಾಷಾಶಾಸ್ತ್ರಜ್ಞರ ಕಟ್ಟುಕತೆಯಾಗಿರಬಹುದೆಂಬ ಶಂಕೆಯು ತಲೆದೋರಿದೆ. ಶ್ರೀ ಅರವಿಂದರ

ಅಭಿಪ್ರಾಯವೆಂದರೆ: ವೇದವನ್ನು ಅರ್ಥ ಮಾಡಿಕೊಳ್ಳಬೇಕಾದರೆ ಶಬ್ದಬ್ರಹ್ಮಾತೀತವಾದ ಪ್ರತ್ಯಕ್ಷ ಅನುಭವವನ್ನು ಪಡೆಯಬೇಕು. ಯಾರಿಗೆ ಈ ಅನುಭವವಿಲ್ಲವೋ ಅವರು ವೇದ ರಹಸ್ಯವನ್ನರಿಯಲಾರರು. ವೇದಭಾಷೆಯು, ತಿಳಿಯದ ಸಾಮಾನ್ಯ ಜನರಿಗೆ ಒಂದು ಅರ್ಥವನ್ನೂ ಬಲ್ಲವರಾದ ಅನುಭಾವಿಗಳಿಗೆ ಮತ್ತೊಂದು ಸಾಂಕೇತಿಕ ಗೂಢಾರ್ಥವನ್ನೂ ಬೋಧಿಸುವುದು. ಇದು ಕೇವಲ ವೇದಗಳಿಗೆ ಅನ್ವಯಿಸುವುದೆಂದೇನೂ ಅಲ್ಲ, ಎಲ್ಲ ಪುರಾತನ ಗ್ರಂಥಗಳ ರೀತಿಯೇ ಇದಾಗಿರುವುದು. ಗ್ರೀಕ್ ಜನರಲ್ಲಿ, ಈಜಿಪ್ಟ್ ಜನರಲ್ಲಿ, ಚಾಲ್ಡಿಯಾದಲ್ಲಿ, ಪರ್ಷಿಯಾದಲ್ಲಿ ಈ ಪರಿಪಾಠವಿದ್ದಿತು. ಭಾರತ ಸಂಸ್ಕೃತಿಯ ಇತಿಹಾಸದಲ್ಲಿ ಮೊದಲು ಗುಪ್ತವಿದ್ಯೆಯು ಹಲವೇ ಜನರ ಸ್ವತ್ತಾಗಿದ್ದಿತು. ಅದು ತರುವಾಯ ಲುಪ್ತವಾಯಿತು. ಪಾಮರ ಲೋಕವು ಬಹಳ ಮಂದಗತಿಯಿಂದ ಮುಂದೆ ಸಾಗುವುದು. ಈ ಜನರಲ್ಲಿ ಎಲ್ಲ ಅತಂಸ್ತುಗಳನ್ನು—ಭೌತಿಕ, ಪ್ರಾಣಿಕ, ಮಾನಸಿಕ ಅಂತಸ್ತುಗಳನ್ನು ಗುರುತಿಸಬಹುದು. ಹಲವು ಜನರು ಮಾತ್ರ ಜನಸಾಮಾನ್ಯರ ಮಟ್ಟವನ್ನು ಅತಿಕ್ರಮಿಸಿ, ಒಂದು ಶಿಖರವನ್ನು ಮುಟ್ಟಿ, ಆಧ್ಯಾತ್ಮಿಕ ಗುಪ್ತ ವಿದ್ಯೆ-ಅನುಭವಗಳನ್ನು ಪಡೆದು ಅವುಗಳನ್ನು ಸಾಂಕೇತಿಕ ಭಾಷೆಯಲ್ಲಿ ಪ್ರಸಿದ್ಧಗೊಳಿಸಿದರು. ಆ ತರುವಾಯ ಬಂದ ಪರಂಪರೆಯು ಅವನತಿಯನ್ನೈದಿತೆಂದಲ್ಲ, ಕ್ರಮವನ್ನು ಬದಲಾಯಿಸಿತು. ಭಾರತದಲ್ಲಿ ಪ್ರತ್ಯಕ್ಷಾನುಭವವು, ಅಂತರ್ಜ್ಞಾನವು (Intuition) ಮೊದಲು ರೂಪುಗೊಂಡಿತು. ಆಮೇಲೆ ಬೌದ್ಧಿಕ, ತಾತ್ತ್ವಿಕ ವಿವೇಚನೆ-ನಿರೂಪಣೆಗಳು ಬಂದವು. ವೇದಕಾಲವನ್ನು ಹಿಂಬಾಲಿಸಿ ಅಗಾಧವಾದ ಬೌದ್ಧಿಕ ಜಿಜ್ಞಾಸೆಯು ಕಾಣಿಸಿಕೊಂಡಿತು. ಆದರೆ ವೇದಪ್ರತಿಷ್ಠಿತವಾದ ಸತ್ಯವನ್ನೇ ಅನುಭವವನ್ನೇ ಅವರು ಆಧಾರವಾಗಿಟ್ಟುಕೊಂಡರು. ಆ ಸತ್ಯವನ್ನು ವೇದಕಾಲದ ಋಷಿಗಳಂತೆ ಪ್ರತ್ಯಕ್ಷ ಪ್ರಮಾಣಗಳ ಮೂಲಕ, ದಿವ್ಯ ಸ್ಫೂರ್ತಿಯಿಂದ ಅರಸದೆ ತಾರ್ಕಿಕ-ಬೌದ್ಧಿಕ-ಮಾನಸಿಕ ಸಾಧನಗಳ ಮೂಲಕವೂ ತದನುಸಾರವಾಗಿ ಬೆಳೆದುಬಂದ ಯೋಗಪದ್ಧತಿಗಳ ಮೂಲಕವೂ ತಿಳಿಯಲು ಪ್ರಯತ್ನಪಟ್ಟರು. ಇದರ ಪರಿಣಾಮವಾಗಿ, ಮನಸ್ಸಿನ, ಬುದ್ಧಿಯ ಆಧ್ಯಾತ್ಮಿಕ ಪರಿವರ್ತನೆಯಾಯಿತು. ತದನಂತರ ಭಾವಭಕ್ತಿಗಳ ಮೂಲಕ, ಹೃದಯಸಂಸ್ಕಾರಗಳ ಮೂಲಕ, ಕಲಾತ್ಮಕ-ರಸಾತ್ಮಕ (emotional and aesthetic) ರೀತಿಗಳಿಂದ ಆ ಸತ್ಯವನ್ನು ಕಾಣಬಯಸಿದರು. ಇದಾದಮೇಲೆ ತಾಂತ್ರಿಕರು ಇಚ್ಛಾಶಕ್ತಿಯನ್ನು ಬೆಳೆಸಿ, ಪ್ರಾಣಿಕ ಹಾಗೂ ದೈಹಿಕ ಪ್ರತಿಕ್ರಿಯೆಗಳನ್ನೇ ಸಾಧನ ಸಾಮುಗ್ರಿಯಾಗಿ ಉಪಯೋಗಿಸಿ ಆಧ್ಯಾತ್ಮಿಕಾನುಭವವನ್ನು ಪಡೆಯಲು ಉದ್ಯುಕ್ತರಾದರು. ಹಠಯೋಗದ ನಿರ್ದಿಷ್ಟ ಉದ್ದೇಶವು ಶರೀರ ಯಂತ್ರವನ್ನೇ ಮುಖ್ಯ ಸಾಧನವೆಂದು ಬಗೆದು ಆ ಮೂಲಕ ದಿವ್ಯತೆಯನ್ನು ಪಡೆಯುವುದಾಗಿದ್ದಿತು. ಇದುವೇ, ಭಾರತದ ಅವಿಶ್ರಾಂತ ಆಧ್ಯಾತ್ಮಿಕ ಪ್ರಯೋಗಪರಂಪರೆ. ಮೊದಲು ಎಲ್ಲಕ್ಕೂ ಉನ್ನತವಾದ ಪರಮಪದವನ್ನೇ ಸಾಧಿಸಿ, ಆಮೇಲೆ ನಿಮ್ನ ಪ್ರಕೃತಿಗೆ ಇಳಿದು ಬೇರೆ ಬೇರೆ ವಿಧಾನಗಳಲ್ಲಿಯೂ ಭೂಮಿಕೆಗಳಲ್ಲಿಯೂ ಅದೇ ಪ್ರಯೋಗವನ್ನು ಮಾಡಿರುವರು.

ವೇದವು ನಿಃಸಂಶಯವಾಗಿ ಅನಂತ ನಾಮ-ಶಕ್ತಿಯುತನಾದ ಏಕದೇವನನ್ನು ಸ್ತುತಿಸುವುದು; ದೈವೀ ಶಾಸನವನ್ನೂ, ಆ ಶಾಸನವನ್ನು ಪರಿಪಾಲಿಸುವುದು ಮಾನವನ ಉತ್ಕಟೇಚ್ಛೆಯಾಗಿದೆಯೆಂಬುದನ್ನೂ ವೇದವು ವಿದಿತಗೊಳಿಸುವುದು; ಸೃಷ್ಟಿಯ ಸೂತ್ರ-ನಿಯಮಗಳನ್ನು ವ್ಯಕ್ತಗೊಳಿಸುವುದು. ಈ ಕಾರಣಗಳಿಂದ ವೇದವು ಅಪೌರುಷೇಯವು.

ಸಾಯಣರು ಸೂಚಿಸಿದ ಯಾಜ್ಞಿಕ ವಿಶೇಷಾರ್ಥವು ಉಳಿಯಲಿ; ಯುರೋಪಿನ ವಿದ್ವಾಂಸರು ಶೋಧಿಸಿದ ಪ್ರಕೃತ್ಯುಪಾಸನಾಪ್ರಧಾನವಾದ ಅರ್ಥವನ್ನೂ ಒಪ್ಪಿಕೊಳ್ಳಬಹುದು ಆದರೆ ಇವೆರಡರ ಹಿಂದೆ ಸತ್ಯವಾದ, ಇನ್ನೂ ನಿಗೂಢವಾದ ವೇದರಹಸ್ಯವು ಸದಾ ಇದೆ. ಆತ್ಮ ಪರಿಶುದ್ಧರಾದ, ವಿವೇಕವನ್ನು ಪಡೆದ ಜನರನ್ನು ಉದ್ದೇಶಿಸಿ ಪ್ರಯೋಗಿಸಿದ ರಹಸ್ಯಮಯ ಶಬ್ದಗಳಲ್ಲಿ ಈ ಸತ್ಯವು ಅಡಕವಾಗಿದೆ. ವೈದಿಕ ಪರಿಭಾಷೆಗೆ ಸಂಬಂಧಿಸಿದ ಶಬ್ದಗಳ ಮತ್ತು ಸಂಕೇತಗಳ ಇಂಗಿತವನ್ನೂ ದೇವತೆಗಳ ಆಧ್ಯಾತ್ಮಿಕ ಕ್ರಿಯಾಸ್ವರೂಪಗಳನ್ನೂ ನಿರ್ಣಯಿಸಿ, ಈ ಅಸ್ಪಷ್ಟವಾಗಿದ್ದರೂ ಹೆಚ್ಚು ಮಹತ್ತ್ವವುಳ್ಳ ಅರ್ಥವನ್ನು ಎಷ್ಟೇ ಪ್ರಯಾಸವಾದರೂ ಹೊರತೆಗೆಯುವುದು ಅಗತ್ಯ. ಶ್ರೀ ಅರವಿಂದರು ತಾವು ಬರೆದ 'ವೇದರಹಸ್ಯ'ವೆಂಬ ಅಧ್ಯಾಯಗಳೂ, ಅವುಗಳೊಡನೆ ಬಂದ ಅನುವಾದಗಳೂ ಈ ಲಕ್ಷ್ಯವನ್ನೇ ಸಾಧ್ಯಮಾಡಲು ಪೀಠಿಕೆಯಾಗಿ ಬರೆಯಲ್ಪಟ್ಟಿವೆ ಎಂದು ತಿಳಿಸಿರುವರು.

**Isha and Kena Upanishads** :— ಉಪನಿಷತ್ತುಗಳು ಏಕಕಾಲದಲ್ಲಿ ಕಾವ್ಯ, ತತ್ತ್ವ, ಧರ್ಮಬೋಧೆಗಳನ್ನೊಳಗೊಂಡ ಗ್ರಂಥಗಳು. ಇಲ್ಲಿರುವ ಧರ್ಮವು ಕೇವಲ ಮತ, ನೀತಿ ಅಥವಾ ಒಂದು ವಿಶಿಷ್ಟ ಸಂಪ್ರದಾಯ-ಕಟ್ಟಳೆಗಳ ಸಮುದಾಯವಲ್ಲ. ಆದರೆ ಆತ್ಮ-ಪರಮಾತ್ಮಸಂಬಂಧವಾಗಿದ್ದು, ಜ್ಞಾನಪ್ರದೀಪ್ತವಾಗಿದ್ದು, ಅನುಭವಗಳ ನೆಲೆಯಾಗಿದ್ದು, ಅನಿರ್ವಚನೀಯ ಆನಂದವನ್ನು ಪ್ರಕಟಗೊಳಿಸುತ್ತದೆ. ಇಲ್ಲಿರುವ ತತ್ತ್ವವು ತಾರ್ಕಿಕವೂ ಬೌದ್ಧಿಕವೂ ಆಗಿರದೆ ಅಂತರ್ಜ್ಞಾನದ ಮೂಲಕ ಕಂಡ ನಿಶ್ಚಿತವಾದ ಸತ್ಯವನ್ನು ಆನಂದೋದ್ಗಾರಗಳಲ್ಲಿ ಹೊರಸೂಸುವುದು. ಇಲ್ಲಿರುವ ಕಾವ್ಯವು ಜೀವ-ಜಗತ್ತು-ಈಶ್ವರ ಸಾಕ್ಷಾತ್ಕಾರಗಳಿಂದ ಸ್ಫುರಿತವಾದ ಅತ್ಯುಚ್ಚ ರಸವಾಹಿನಿಯಾಗಿರುವುದು. ವೇದಕಾಲದ ಋಷಿಗಳೂ ಅನುಭಾವಿಗಳೂ ಕಂಡ ಸತ್ಯವು ಇಲ್ಲಿ ಮನೋಭೂಮಿಕೆಯಲ್ಲಿ ಮೈದಾಳಿ ಸ್ಪಂದನ-ಪ್ರತಿಸ್ಪಂದನಗಳಿಂದ ಧ್ವನಿತವಾಗಿ ಒಂದು ಹೊಸ ಆತ್ಮವನ್ನೇ ಸೃಷ್ಟಿಸಿ, ಅದರಲ್ಲಿ ಶಾಂತಿ-ತಿಪೂರ್ಣತೆಗಳನ್ನು ತುಂಬಿ ಆಧ್ಯಾತ್ಮಿಕ ಜ್ಞಾನಶಿಖರದಲ್ಲಿ ವಿರಾಜಿಸುವ ಹಾಗೆ ಮಾಡಿದೆ. ಉಪನಿಷತ್ತುಗಳು ಶ್ರುತಿಪ್ರಮಾಣವಾದುವು. ಬೌದ್ಧಮತವು ಇವುಗಳ ರೂಪಾಂತರವಾಗಿದ್ದು ಅದರ ಮೂಲಕ ಉಪನಿಷತ್ತುಗಳು ಏಶಿಯಾದಲ್ಲೆಲ್ಲ ಹಬ್ಬಿದುವು. ಪಶ್ಚಿಮಕ್ಕೆ ಸಾಗಿ ಯುರೋಪದಲ್ಲಿ ಪ್ರಸಾರ ಹೊಂದಿದುವು. ಉಪನಿಷತ್ತುಗಳು ಪೈಥಾಗೊರಾಸ್, ಪ್ಲೇಟೋ ಮತ್ತು ಅವನ ತರುವಾಯ ಬಂದ ಪಂಥದವರ ಹಾಗೂ 'ನಾಸ್ಟಿಕ'ರ (Gnostics–ಜ್ಞಾನಿಗಳ) ವಿಚಾರ ಸರಣಿಯಲ್ಲಿ ಒಡಮೂಡಿವೆ. ಮತ್ತೊಂದು ಪರಿಭಾಷೆಯಲ್ಲಿ ಸೂಫೀ ಪಂಗಡದವರು ಈ ವಿಚಾರಗಳನ್ನೇ ನುಡಿಯುವರು. ಜರ್ಮನ್ ತತ್ತ್ವಜ್ಞರ ಮೇಲೆಯೂ ಅವು ಪ್ರಭಾವವನ್ನು ಬೀರಿವೆ. ಆಧುನಿಕರ ಮುಖ್ಯ ತಾತ್ತ್ವಿಕ ವಿವೇಚನೆಯ ಮುಂಗುರುತನ್ನು ನಾವು ಇಲ್ಲಿ ಕಾಣಬಹುದು. ಉಪನಿಷತ್ತುಗಳು ವೇದದ ತಿರುಳನ್ನು, ಜ್ಞಾನಭಾಗವನ್ನು ಇನ್ನೂ ಉನ್ನತ ಪ್ರಮಾಣದಲ್ಲಿ ಸಾರುವವು. ಆದರೆ ಈ ತತ್ತ್ವಜ್ಞಾನವು ಶುಷ್ಕವಾಗಿರದೆ ಅನುಭವದ ತಳಹದಿಯ ಮೇಲೆ ಕಟ್ಟಲ್ಪಟ್ಟಿದೆ. ವೇದಕಾಲದ ಪ್ರವೃತ್ತಿ, ಶ್ರದ್ಧೆ, ವಿಚಾರಪ್ರಣಾಲಿಗಳನ್ನೇ ಉಪನಿಷತ್ತುಗಳು ಮುಂದೊಯ್ದು, ವೇದದಲ್ಲಿ ಸಾಂಕೇತಿಕವಾಗಿ ಗುಪ್ತವಾಗಿದ್ದುದನ್ನು ಬಹಿರಂಗಗೊಳಿಸಿರುವವು. ಇದಿಷ್ಟು ಉಪನಿಷತ್ತುಗಳ ಸಾಮಾನ್ಯ ಮಹತ್ವದ ಬಗ್ಗೆ.

ಶ್ರೀ ಅರವಿಂದರು **ಈಶ, ಕೇನ**ಗಳೆಂಬ ಎರಡು ಉಪನಿಷತ್ತುಗಳಿಗೆ ಭಾಷ್ಯವನ್ನು ರಚಿಸಿರುವರು. **ಈಶ**ವು ಶೈಲಿ, ಅರ್ಥ, ಛಂದೋರೀತಿಗಳಲ್ಲಿ ಅತಿ ಪ್ರಾಚೀನವಾದ ಉಪನಿಷತ್ತುಗಳಲ್ಲಿ ಒಂದಾಗಿದೆ. ಜ್ಞಾನದೀಪವನ್ನು ಬೆಳಗಿಸುವುದೇ ಉಪನಿಷತ್ತುಗಳ ಉದ್ದೇಶ; ಕ್ರಮಬದ್ಧವಾಗಿ ಪಾಠವನ್ನೂ ಪದ್ಧತಿಯನ್ನೂ ಕಲಿಸುವುದಲ್ಲ. ಆಗಲೇ ವೇದತತ್ತ್ವವನ್ನರಿತ ಹಾಗು ಅಲ್ಪಸ್ವಲ್ಪ ಅನುಭವ ಪಡೆದ ಜನಗಳನ್ನು ಕುರಿತು ರಚಿಸಲ್ಪಟ್ಟದ್ದರಿಂದ, ವಿಚಾರಗಳ ನಡುನಡುವೆ ಇರುವ ತರ್ಕವನ್ನು ಜೋಡಿಸಿಲ್ಲ; ಮುಖ್ಯವಲ್ಲದ ವಿಷಯಗಳನ್ನು ಊಹೆಗೆ ಬಿಟ್ಟಿರುವರು—ಅನುಭವದ ಒರೆಗಲ್ಲಿನಿಂದ ತಿಳಿಯಬಹುದೆಂದು. ಆಧುನಿಕರಿಗೆ ಈ ರೀತಿಯು ಸಮಂಜಸವಲ್ಲ. ವಿಚಾರಗಳನ್ನು ಬಿಡಿಬಿಡಿಯಾಗಿ, ಪೂರ್ಣವಾಗಿ, ಅಂತರಗಳಿಲ್ಲದೆ ವ್ಯಕ್ತಮಾಡಬೇಕು ಈ ಕೆಲಸವನ್ನೇ ಶ್ರೀ ಅರವಿಂದರು ಮಾಡಿರುವರು.

**Isha:**—**ಈಶ** ಉಪನಿಷತ್ತಿನ ಅಂತರ್ಗತ ತತ್ತ್ವವನ್ನು ನಾಲ್ಕು ತರಂಗಗಳಲ್ಲಿ ಮಂಡಿಸಿರುವರು. ಮೂಲ ದ್ವಂದ್ವಗಳ ಸಮನ್ವಯವೇ ಈ ಉಪನಿಷತ್ತಿನ ತಿರುಳು ಇಲ್ಲಿ ಕಂಡುಬರುವ ವಿರೋಧ ದ್ವಂದ್ವಗಳೆಂದರೆ: ೧. ಈಶ ಮತ್ತು ಪಾಂಚಭೌತಿಕ ಪ್ರಕೃತಿ ( The Conscious Lord and Phenomenal Nature ); ೨. ತ್ಯಾಗ ಹಾಗೂ ಭೋಗ ( Renunciation and Enjoyment ), ೩. ಪ್ರಕೃತ್ಯನುಗುಣ ಕರ್ಮ ಮತ್ತು ಆತ್ಮದ ಸ್ವಾತಂತ್ರ್ಯ ( Action in Nature and Freedom in the Soul ), ೪. ಏಕ ಶಾಶ್ವತ ಬ್ರಹ್ಮ ಮತ್ತು ವಿವಿಧ ಜಗತ್ತು ( The One Stable Brahman and the Multiple Movement ), ೫. ಸತ್ತತ್ತ್ವ ಹಾಗು ಸೃಷ್ಟಿ ( ಇರುವಿಕೆ, ಆಗುವಿಕೆ: Being and Becoming ), ಕರ್ಮಪರ ಈಶ, ಮತ್ತು ಉದಾಸೀನ ಅಕ್ಷರಬ್ರಹ್ಮ ( The Active Lord and the Indifferent Akshara Brahman ); ೭. ವಿದ್ಯೆ, ಅವಿದ್ಯೆ ( Vidya and Avidya ); ೮. ಸಂಭೂತಿ, ಅಸಂಭೂತಿ ( Birth and Non-Birth ); ೯. ಕರ್ಮ, ಜ್ಞಾನ ( Works and Knowledge ). ಸಮನ್ವಯದ ರೀತಿಯನ್ನು ಮೂಲದಲ್ಲಿಯೇ ನೋಡಬೇಕು.

**Kena** ;—ಅಮೃತತತ್ತ್ವದ ಘನಪ್ರಶ್ನೆಯೇ **ಈಶ-ಕೇನ**ಗಳ ವಿಷಯವಾಗಿದೆ. ಮಾನವ-ಚೇತನಕ್ಕೂ ವಿಶ್ವ-ವಿಶ್ವಾತೀತ ಚೇತನಕ್ಕೂ ಇರುವ ಸಂಬಂಧವನ್ನು ನಿಶ್ಚಯಮಾಡಲು ಅವು ಹೊರಟಿವೆ. ಸಾವು-ನೋವುಗಳಿಂದ ತುಂಬಿದ, ಒಡಕಾದ ಅಜ್ಞಾನಪೂರಿತವಾದ ಈ ಬಾಳಿನಿಂದ ಹೇಗೆ ಮಾನವನು ಪರಮಪದವನ್ನು, ಬೆಳಕು-ಆನಂದಗಳನ್ನು ಹೊಂದಬಹುದೆಂಬುದನ್ನೇ ತಿಳಿಸುವುವು. **ಕೇನ**ದ ವಿಷಯವು **ಈಶ**ದಷ್ಟು ವಿಸ್ತಾರವಾಗಿಲ್ಲ; ಅಷ್ಟು ಕಠಿಣವೂ ಅಲ್ಲ. ಮಾನವಚೇತನಕ್ಕೂ ಬ್ರಹ್ಮಚೇತನಕ್ಕೂ ಇರುವ ಸಂಬಂಧವೇ ಅದರ ನಿರ್ದಿಷ್ಟ ವಿಷಯ. ಆರಂಭದಲ್ಲಿಯೇ ನಮ್ಮೀ ಬಾಳು ಒಂದು ಆಂತರಿಕವಾದ, ಆಳವಾದ ತತ್ತ್ವದ ಬಾಹ್ಯಪ್ರಕಟನೆಯೆಂದು ಸ್ಪಷ್ಟೀಕರಿಸಿದೆ. ಅದು ಅಸತ್ಯವಲ್ಲ, ಕೀಳ್ತರದ್ದು, ಆ ದೊಡ್ಡ ತತ್ತ್ವದ ಛಾಯೆ ಮಾತ್ರ. ಮನಃಪ್ರಾಣಗಳು ನಮ್ಮ ಬಾಹ್ಯ ಚಟುವಟಿಕೆಗಳನ್ನು ತಿಳಿದು ನಿಯಂತ್ರಿಸುವ ಉಪಕರಣಗಳು. ಈ ಉಪಕರಣಗಳ ನಿಜಸ್ವರೂಪವೇನೆಂದು **ಕೇನ**ವು ಪ್ರಶ್ನಿಸುವುದು. ಮನಸ್ಸಿನ ಸತ್ಯವೇನು, ಎಷ್ಟು? ಪ್ರಾಣದ ಸತ್ಯವೇನು, ಎಷ್ಟು?

ಇಂದ್ರಿಯಗಳ, ಪ್ರಕೃತಿಯ ಸತ್ಯವೇನು–ಎಷ್ಟು? ಇವು ಅಂತಿಮ ಸತ್ಯಗಳೋ, ಹೇಗೆ? ನಮ್ಮ ಕರ್ಮವೆಲ್ಲ ಇವುಗಳ ಅಧೀನವೋ, ಹೇಗೆ? ಇಲ್ಲವಾದರೆ ಮನಃಪ್ರಾಣಗಳು ಮತ್ತೊಂದು ಸೂಕ್ಷ್ಮ ತತ್ತ್ವದ ಮೇಲುಹೊದಿಕೆಗಳೋ? ಈ ಶಕ್ತಿಯುತ ಸೂಕ್ಷ್ಮತತ್ತ್ವವು ತತ್ತ್ವವು ಹಿಂದೆ ಇದೆ ಎಂಬುದನ್ನು ಉಪನಿಷತ್ತು ಸ್ಪಷ್ಟವಾಗಿ ಸಾರುವುದು. ಜಡಪ್ರಕೃತಿಗೆ ಮನವು ಹೇಗೋ, ಹಾಗೆ ಈ ಸೂಕ್ಷ್ಮತತ್ತ್ವವು ಮನಸ್ಸಿಗೆ. ಮನವು ಜಡಪ್ರಕೃತಿಯನ್ನು ಅರಿಯುವುದು; ಆದರೆ ಜಡಪ್ರಕೃತಿಯು ಮನವನ್ನು ಅರಿಯಲಾರದು. ಹಾಗೆಯೇ ಆ ತತ್ತ್ವವು ಮನವನ್ನು ಗ್ರಹಿಸಬಲ್ಲದು; ಆದರೆ ಮನವು ಅದನ್ನು ಗ್ರಹಿಸಲಾರದು. ಮನಸ್ಸು ತನ್ನ ಅಂಗಗಳನ್ನೂ ಇತರ ಉಪಕರಣಗಳನ್ನೂ ದಾಟಿ, ಹೇಗೆ ಅಂತರ್ಯವನ್ನು ಹೊಗಬೇಕು ಮತ್ತು ಬ್ರಹ್ಮಾನುಭವವನ್ನು ಪಡೆಯಬೇಕು ಎಂಬುದೇ ಮಾನವನ ಹೆಗ್ಗುರಿ. ಆನಂದಮಯ ಜೀವನವು ಇಹದಲ್ಲಿಯೇ ಸಾಧನೀಯವಾದರೆ ಈ ನಮ್ಮ ಪ್ರಸ್ತುತ ಅಪೂರ್ಣ, ಅವಿದ್ಯಾಪೂರಿತ ಜೀವನದ ಉದ್ದೇಶ–ಮಹತ್ತ್ವಗಳೇನು? ಮಾನಸಿಕ ಬಂಧನಗಳಿಂದ ಮಾನವನು ಮುಕ್ತನಾಗಿ ಅತಿಮಾನಸ ಜೀವನದ ಸ್ವಾತಂತ್ರ್ಯ–ಪೂರ್ಣತೆಗಳನ್ನು ಲಭ್ಯಮಾಡಿಕೊಳ್ಳಬೇಕು. ಆದರೆ ಈ ಮುಕ್ತಿಯನ್ನು ಇಲ್ಲಿ, ಇಹದಲ್ಲಿ ಸಾಧಿಸಬೇಕು. ಜಗತ್ತನ್ನು ಅಲ್ಲಗಳೆಯಬಾರದು, ತೊರೆಯಲಾಗದು. ದೈವೀ ಪರಿವರ್ತನ ಮಾಡಬೇಕು.

**Essays on the Gita :**—ಇದು ಸುಮಾರು ೮೦೦ ಪುಟಗಳನ್ನೊಳಗೊಂಡುದು. ಪ್ರಥಮ ಸಂಪುಟವಲ್ಲಿಯ ೨೪ ಪ್ರಕರಣಗಳು ಗೀತೆಯ ಮೊದಲನೆಯ ೬ ಅಧ್ಯಾಯಗಳನ್ನು ವಿವರಿಸುತ್ತವೆ. ಕರ್ಮಯೋಗದ ಸಾರ, ಸಮತ್ವ, ಅವತಾರ ತತ್ತ್ವ, ಯಜ್ಞದ ಅಂತರಾರ್ಥ, ಗೀತೆಯ ಉಪದೇಶಸಾರ—ಇವೇ ಮುಖ್ಯ ವಿಷಯಗಳು. ದ್ವಿತೀಯ ಸಂಪುಟವು ಜ್ಞಾನ–ಭಕ್ತಿ–ಕರ್ಮಗಳ ಸಮನ್ವಯ, ವಿಭೂತಿ ಸಿದ್ಧಾಂತ, ಕ್ಷರ–ಅಕ್ಷರ–ಪುರುಷೋತ್ತಮತ್ರಯರ ವಿಶದ ವಿವೇಚನೆ, ಕ್ಷೇತ್ರ–ಕ್ಷೇತ್ರಜ್ಞ–ಸತ್ತ್ವ–ರಜಸ್ತಮೋಗುಣಗಳ ನಿರೂಪಣೆ, ಸ್ವಭಾವ–ಸ್ವಧರ್ಮಗಳ ವಿವರಣೆ, ಪ್ರಪತ್ತಿಯ (ಆತ್ಮಸಮರ್ಪಣದ) ಮಹಿಮೆ ಹಾಗು ಗೀತೆಯ ಸಂದೇಶ ಇವುಗಳನ್ನು ಸಾಂಗವಾಗಿ ತಿಳಿಸುತ್ತದೆ. ಶ್ರೀ ಅರವಿಂದರ ಎಣಿಕೆಯಲ್ಲಿ ಉತ್ತರ ಭಾಗವೇ ಹೆಚ್ಚು ಮಹತ್ತ್ವವುಳ್ಳದ್ದು. ತತ್ತ್ವಪರಂಪರೆಯಲ್ಲಿ ಗೀತೆಯ ಸ್ಥಾನವನ್ನು ನಿರ್ಣಯಿಸಲು ಶ್ರೀ ಅರವಿಂದರು ಪ್ರಯತ್ನಪಟ್ಟಿಲ್ಲ. ಅವರ ವಿಚಾರಪ್ರಣಾಲಿಯನ್ನು ಪಂಡಿತರ ರೀತಿಯಲ್ಲಿ ಶಾಸ್ತ್ರೀಯ ಪದ್ಧತಿಯ ಪ್ರಕಾರ ತಿಳಿಸುವುದೂ ಅವರ ಉದ್ದೇಶವಲ್ಲ; ತಾರ್ಕಿಕ ವಿವೇಚನೆಯೂ ಅವರ ಗುರಿಯಲ್ಲ. ಗೀತೆಯಿಂದ ನಾವು ಎಷ್ಟು ಆಧ್ಯಾತ್ಮಿಕ ಸಹಾಯವನ್ನು ಪಡೆಯಬಹುದು, ಗೀತೆಯಲ್ಲಿ ತ್ರಿಕಾಲಾಬಾಧಿತ ಸತ್ಯವಾವುದು, ಮಾನವಾಭ್ಯುದಯಕ್ಕೆ ಮತ್ತು ಆಧ್ಯಾತ್ಮಿಕ ಶ್ರೇಯೋನ್ನತಿಗಳಿಗೆ ಹೇಗೆ ಗೀತೆಯು ನೆರವಾಗಬಲ್ಲುದು?—ಇವೇ ಶ್ರೀ ಅರವಿಂದರ ಗೀತಾಭಾಷ್ಯದ ಮೂಲಪ್ರೇರಣೆಗಳು.

ಗೀತೆಯು ಉಪನಿಷತ್ತುಗಳನ್ನೇ ಅನುಸರಿಸಿ ಪರಬ್ರಹ್ಮಸ್ವರೂಪವನ್ನು ಏಕಕಾಲದಲ್ಲಿ ಸಗುಣ–ನಿರ್ಗುಣವೆಂದು ನಿರ್ದೇಶಿಸಿದೆ. ಆದರೆ ಇದು ತರ್ಕಬುದ್ಧಿಗೆ ಸಮ್ಮತವಲ್ಲವಾದ್ದರಿಂದ, ಶ್ರೀ ಶಂಕರಾಚಾರ್ಯರು ಸಗುಣ ಬ್ರಹ್ಮವನ್ನು ನಿರಾಕರಿಸಿ ನಿರ್ಗುಣ ಬ್ರಹ್ಮವನ್ನೇ ಸತ್ಯವೆಂದು ಬಗೆದರು. ಅವರ ದೃಷ್ಟಿಯಲ್ಲಿ ಗೀತೆಯು ಜ್ಞಾನಯೋಗದೀಪಿಕೆ. ವೈಷ್ಣವ ಸಂಪ್ರದಾಯ

ದವರು ಜ್ಞಾನಕರ್ಮಗಳ ಸಮನ್ವಯವನ್ನು ಅಂಗೀಕರಿಸಿದರೂ ಇವೆರಡೂ ಭಕ್ತಿಗೆ ಆನುಷಂಗಿಕ ವೆಂದು ಪ್ರತಿಪಾದಿಸಿದರು; ಸಗುಣಬ್ರಹ್ಮೋಪಾಸನೆಯೇ ಅವರ ಮತವಾಗಿದ್ದು ಅವರು ನಿರ್ಗುಣಬ್ರಹ್ಮವನ್ನು ನಿರಾಕರಿಸಿದರು. ಅವರ ಪ್ರಕಾರ ಗೀತೆಯು ಭಕ್ತಿಯೋಗದೀಪಿಕೆ. ಕರ್ಮಪ್ರವೃತ್ತಿಯನ್ನೇ ಧ್ಯೇಯವಾಗಿಟ್ಟುಕೊಂಡ ಹಲವು ಪಾಶ್ಚಾತ್ಯ ತತ್ತ್ವಜ್ಞರಿಂದ ಪ್ರೇರಿತ ರಾಗಿ ಶ್ರೀ ಬಂಕಿಂ-ಟಿಳಕರೇ ಮೊದಲಾದ ಅಧುನಿಕ ಭಾರತೀಯರು ಗೀತೆಯನ್ನು ಕರ್ಮಯೋಗ ಶಾಸ್ತ್ರವನ್ನಾಗಿ ಗ್ರಹಿಸಿ ಜ್ಞಾನ-ಭಕ್ತಿಗಳನ್ನು ಗೌಣವೆಂದು ತಿಳಿದಿರುವರು. ಹೀಗಾಗಿ ಗೀತೆಯ ಸಮಗ್ರಬೋಧೆಯು ಪಕ್ಷಪಂಗಡಗಳ ವಾದವಿವಾದಗಳಲ್ಲಿ ಹರಿದು ಹಂಚಿಹೋಗಿದೆ. ಪುರುಷೋತ್ತಮ ತತ್ತ್ವವನ್ನು ಅತಿವಿಶದವಾಗಿ ಮಂಡಿಸಿ, ಶ್ರೀ ಅರವಿಂದರು ಗೀತೆಯ ಸಮಗ್ರ ಸತ್ಯವನ್ನು ಮತ್ತೆ ಸಾರಿರುವರು. ಗೀತೆಯ ಮೇರೆಗೆ ಅಪರಾಪ್ರಕೃತಿಯೇ ಸೃಷ್ಟಿಯ ಮೂಲ. ಈ ಪ್ರಕೃತಿಯೇ ಪ್ರತಿ **ಜೀವನ** ಆಧ್ಯಾತ್ಮಪ್ರಕೃತಿಯಾಗಿ ಪರಿಣಮಿಸಿದೆ. ಪರಾಪ್ರಕೃತಿಯು **ಜೀವ**ನಲ್ಲ, ಆದರೆ **ಜೀವ**ನಾಗಿ ಪರಿಣಮಿಸುತ್ತದೆ. ಈ **ಜೀವ**ನ ಮೂಲ ಆಧ್ಯಾತ್ಮಿಕ ಪ್ರಕೃತಿಯು ಕ್ರಮೇಣ ವಿಕಾಸಗೊಳ್ಳುತ್ತದೆ; ಈ ವಿಕಾಸವು ಪೂರ್ಣವಾಗುವ ವರೆಗೆ, ಅದು ಸತ್ತ್ವರಜಸ್ತಮೋಗುಣೋಪೇತವಾದ ನಿಮ್ನಪ್ರಕೃತಿಯ ಅಧೀನವಾಗಿರುವುದು. ಇದೇ ಅವಿದ್ಯೆ, ಯಾತನೆಗಳ ಮೂಲ. ಈ ನಿಮ್ನಪ್ರಕೃತಿಯು ಯಾವ ಸಾಧನೋಪಾಯಗಳಿಂದ ಉನ್ನತತರ ಆಧ್ಯಾತ್ಮಿಕತೆಯನ್ನು ಪಡೆಯಬಹುದು, ಸಾಧರ್ಮ್ಯವನ್ನು ಹೊಂದಬಹುದು, 'ಮದ್ಭಾವ'ವನ್ನು ಪ್ರಾಪ್ತಿಮಾಡಿಕೊಳ್ಳಬಹುದು ಎಂಬುದನ್ನು ಗೀತೆಯು ತೋರಿಸುವುದು.

ಶ್ರೀ ಅರವಿಂದರ ಈ ಕೃತಿಯು ಕೇವಲ ಒಂದು ಸನಾತನ ಧರ್ಮಗ್ರಂಥದ ಅರ್ಥವಿವರಣೆಯಾಗಿರದೆ ಸ್ವತಂತ್ರ ಸೃಷ್ಟಿಯಾಗಿ ಕಾಣುವುದು. ಮೂಲದ ಸ್ಫೂರ್ತಿ-ಅಧಿಕಾರವಾಣಿಗಳು ಪ್ರಚಲಿತ 'ರಾಜಭಾಷೆ'ಯಾದ ಆಂಗ್ಲದಲ್ಲಿ ಹೊಸ ಆತ್ಮವನ್ನು ಧರಿಸಿವೆ. ಈ ಗ್ರಂಥದ ವಿಷಯ ವಿವೇಚನಾಕೌಶಲ್ಯವನ್ನು ಕುರಿತು ಪ್ರಶಂಸಿಸುತ್ತಾ 'Statesman' ಪತ್ರಿಕೆಯು, ಶ್ರೀ ಅರವಿಂದರು ಪಾಶ್ಚಾತ್ಯರಿಗೆ ಹಿಂದೂ ದರ್ಶನಸಾರವನ್ನು ಸುಲಭ ಶೈಲಿಯಲ್ಲಿ ವಿವರಿಸುವ ದುಃಸಾಧ್ಯವಾದ ಕಲೆಯನ್ನು ನಸಪೂರ್ಣತೆಗೆ ಒಯ್ದಿರುವರೆಂದು ಅಭಿಪ್ರಾಯಪಟ್ಟಿದೆ.

**The Synthesis of Yoga:** ಇದರ ೧ನೆಯ ಭಾಗವು ಮಾತ್ರ The Yoga of Divine Works ಎಂಬ ಹೆಸರಿನಲ್ಲಿ ಪುಸ್ತಕರೂಪದಲ್ಲಿ ಮುದ್ರಿತವಾಗಿದೆ. ಈ ಲೇಖಮಾಲೆಯು '**ಆರ್ಯ**'ದ ಪ್ರಥಮ ಸಂಚಿಕೆಯಲ್ಲಿ ಆರಂಭವಾಗಿ ಕೊನೆಯ ಸಂಚಿಕೆಯ ವರೆಗೂ ನಡೆಯಿತು; ಇನ್ನೂ ಅಪೂರ್ಣವಾಗಿ ಉಳಿದಿದೆ. The Life Divine ಗ್ರಂಥವು ಒಟ್ಟು ೫೬ ಅಧ್ಯಾಯಗಳುಳ್ಳ ಪೂರ್ಣ ಗ್ರಂಥವಾಗಿದ್ದರೆ The Synthesis of Yoga ವು ೭೩ ಪ್ರಕರಣಗಳನ್ನೊಳಗೊಂಡ ಅಪೂರ್ಣ ಗ್ರಂಥವಾಗಿರುವದು ಪೂರ್ಣವಾದಾಗ ಇದು ಇನ್ನು ಅದೆಷ್ಟು ಪ್ರಮಾಣವನ್ನು ತಾಳುವುದೋ! ಇಲ್ಲಿ ಸೃಷ್ಟಿ, ಭಗವಂತ ಮೊದಲಾದ ವೇದಾಂತ (metaphysical) ಪ್ರಶ್ನೆಗಳ ಹೆಚ್ಚು ವಿವರಣೆಯಿಲ್ಲ, ಕೇವಲ ಯೋಗಭಾಗ ಮತ್ತು ಅದರ ಸಾಧನ ವಿಧಾನಗಳು ಇವೆ. ಶ್ರೀ ಅರವಿಂದರ ವಿಶಿಷ್ಟ ಯೋಗವಾದ ಪೂರ್ಣಯೋಗವು (Integral Yoga) —ವಿಜ್ಞಾನ ಯೋಗವು **ಆರ್ಯ**ದ ೫ನೆಯ ಸಂಪುಟದ ೫ನೆಯ ಸಂಚಿಕೆಯಿಂದ ಪ್ರಾರಂಭವಾಗಿದೆಯೆನ್ನಬಹುದು. ಅದಕ್ಕೂ ಪೂರ್ವದಲ್ಲಿ, ಸಾಂಪ್ರದಾಯಿಕವಾಗಿ ಬಂದ ವಿವಿಧ ಯೋಗಪದ್ಧತಿಗಳ ತುಲನಾತ್ಮಕ ವಿವೇಚನೆಯಿದೆ. ಪರಂಪರಾಗತವಾದ

ಕರ್ಮಯೋಗ, ಭಕ್ತಿಯೋಗ, ಜ್ಞಾನಯೋಗ, ರಾಜಯೋಗ, ಹಠಯೋಗಗಳ ತಿರುಳನ್ನು ಪೂರ್ಣಯೋಗದ ಸಮನ್ವಯ-ಪ್ರಸ್ಥಾನದಿಂದ ನೋಡಲಾಗಿದೆ. ಮಾನವ ಪ್ರಕೃತಿಯ ಎಲ್ಲ ತತ್ತ್ವಗಳ ಅತ್ಯಗಾಧ ನೂತನ ನಿರೂಪಣೆ ಇದಾಗಿದೆ. ಶುದ್ಧೀಕರಣವನ್ನು ಎಲ್ಲ ಭೂಮಿಕೆಗಳಲ್ಲಿ ಹೇಗೆ ಸಾಧಿಸಬೇಕು, ಬರುವ ತೊಡಕುಗಳಾವುವು, ಉಪಾಯಗಳೇನು, ದೈವೀ ಶಕ್ತಿಯ ಸ್ಪಷ್ಟೀಕರಣ, ಶ್ರದ್ಧೆ ಮತ್ತು ದೈವೀ ಶಕ್ತಿ, ಆ ತರುವಾಯ ಅಂತರ್‌ಜ್ಞಾನ ಪ್ರದೀಪ್ತವಾದ ಮನಸ್ಸು ( Intuitive mind ), ಅತಿಮಾನಸದ ( Super–mind ) ಸ್ವರೂಪ, ಅದರ ಅಂತಸ್ತುಗಳು, ಅತಿಮಾನಸದಿಂದ ಪ್ರಾಪ್ತವಾಗುವ ಜ್ಞಾನ, ಅತಿಮಾನಸದ ಉಪಕರಣಗಳು, ಅತಿಮಾನಸದ ಪ್ರಭಾವದಿಂದ ಹೇಗೆ ನಿಮ್ನ ತತ್ತ್ವಗಳಾದ ದೇಹ--ಪ್ರಾಣ-ಮನಗಳು ದೈವೀ ಪರಿವರ್ತನೆಯನ್ನು ಹೊಂದಬಹುದು, ಅದರಿಂದ ನಮ್ಮ ಕಾಲದೃಷ್ಟಿಯೇ ( Time Vision ) ಬೇರೆಯಾಗಬಹುದು ಎಂಬೀ ವಿಪುಲ ವಿಷಯಗಳ ಪ್ರಕಾಶನವೇ ಈ ಮಹಾಗ್ರಂಥದ ಉದ್ದೇಶ.

**The Human Cycle :** – ಯೋಗಸಮನ್ವಯವು (Synthesis of Yoga) ಪ್ರಥಮತಃ ವ್ಯಕ್ತಿಜೀವನಕ್ಕೆ, ವ್ಯಕ್ತಿಸಾಧನೆಗೆ ಅನುಕೂಲವಾಗಿದ್ದರೆ ಈ **ಮಾನವಪ್ರಗತಿಚಕ್ರವು** ( Human Cycle ) ಸಮಾಜಜೀವನಕ್ಕೆ, ಸಾಮುದಾಯಿಕ ಆಧ್ಯಾತ್ಮಿಕತೆಗೆ ಸಂಬಂಧಿಸಿದ್ದಾಗಿದೆ. ಇಲ್ಲಿ ೨೪ ಅಧ್ಯಾಯಗಳಿವೆ. ಮಾನವಸಮಾಜದ ಜೀವನಸೂತ್ರಗಳನ್ನೂ ಮೂಲೋದ್ದೇಶಗಳನ್ನೂ ಪ್ರಗತಿಕ್ರಮವನ್ನೂ ತಿಳಿಯುವುದು ಸುಲಭವಲ್ಲ. ಸಮಾಜದ ಬೆಳವಣಿಗೆಯನ್ನು ಶ್ರೀ ಅರವಿಂದರು ಸ್ಥೂಲವಾಗಿ ಐದು ಅವಸ್ಥೆಗಳಾಗಿ ವಿಂಗಡಿಸುವರು. ಯಾವುದೇ ಜನಾಂಗದ ಪ್ರಥಮಾವಸ್ಥೆ ಸಂಕೇತಪ್ರಧಾನ( Symbolic )ವಾಗಿರುವುದು. ಆ ಯುಗದ ವಿಚಾರಗಳು, ಪದ್ಧತಿಗಳು, ಸಂಸ್ಥೆಗಳು ಸಂಕೇತಮಯವಾಗಿರುವವು. ಧಾರ್ಮಿಕ ಮನೋವೃತ್ತಿಯು ಪ್ರಧಾನವಾಗಿದ್ದು, ಪ್ರತಿಭೆಗೆ ವಿಶೇಷ ಪ್ರಾಶಸ್ತ್ಯವಿರುವುದು. ಅನಿರ್ವಚನೀಯ, ಗುಪ್ತ, ದೈವೀಪ್ರಭಾವದ ಹಿನ್ನೆಲೆಯಲ್ಲಿಯೇ ಈ ಜೀವನವು ರೂಪುಗೊಳ್ಳುವುದು. ಜೀವನದ ಚಲನವಲನಗಳೆಲ್ಲ ಸಂಕೇತಾರ್ಥವನ್ನು ಸೂಚಿಸುವವು. ಪ್ರಾಚೀನ ಭಾರತದ ಯಜ್ಞಯಾಗಾದಿ ವಿಧಿಗಳು, ಸ್ತ್ರೀಪುರುಷರ ಪರಸ್ಪರ ಸಂಬಂಧದ ನಿಯಮಗಳು ಹಾಗೂ ಚಾತುರ್‌ವರ್ಣ್ಯ ಸಂಸ್ಥೆಯು ಈ ತತ್ತ್ವವನ್ನು ವ್ಯಕ್ತಮಾಡುವವು. ಆ ಕಾಲದ ಸಾಹಿತ್ಯವು ಸಾಂಕೇತಿಕ ಪರಿಭಾಷೆಯನ್ನೇ ಅವಲಂಬಿಸಿರುವುದು. ಆಧುನಿಕರಿಗೆ ಕಾವ್ಯವು ಬುದ್ಧಿಯ, ಪ್ರತಿಭೆಯ ಲೀಲಾವಿನೋದ ವಸ್ತುವಾಗಿ ಪರಿಣಮಿಸಿರುವದು. ಆದಿಯುಗದ ಕವಿಗಳು ದ್ರಷ್ಟಾರರೂ ರಹಸ್ಯಸತ್ಯಪ್ರಕಾಶಕರೂ ಆಗಿದ್ದರು. ಅವರಿಗೆ ಪ್ರತಿಭೆಯು ಮನೋಮಂದಿರದ ನೃತ್ಯವಿಲಾಸಿನಿಯಾಗಿರದೆ, ದೇವಮಂದಿರದ ಪವಿತ್ರ ಪೂಜಾರಿಣಿಯಾಗಿದ್ದಳು ; ಕಲ್ಪನಾವಿಹಾರಿಣಿಯಾಗಿರದೆ, ದುರ್ಲಭ ಮತ್ತು ಗುಪ್ತ ಸತ್ಯಗಳನ್ನು ಪ್ರಕಟಿಸುವವಳಾಗಿದ್ದಳು. ಸಮಾಜವ್ಯವಹಾರವೆಲ್ಲ ಆಧ್ಯಾತ್ಮಿಕ ಚೌಕಟ್ಟಿನಲ್ಲಿ ನಡೆಯುತ್ತಿತ್ತು. ಎಲ್ಲಿಯೂ ನಿರ್ಬಂಧಗಳಿಲ್ಲದೆ ಸ್ವತಂತ್ರ ರೀತಿಯೇ ತೋರಿಬರುವುದು. ಬರಬರುತ್ತಾ ಒಂದು ಮಾನಸಿಕಾವಸ್ಥೆಯು-ಒಂದು ಮನಃಪ್ರವೃತ್ತಿಯು ನೆಲೆಯೂರುವುದು. ಸಾಂಕೇತಿಕ ಯುಗದ ಅವಧಿಯಲ್ಲಿ ಆಧ್ಯಾತ್ಮಿಕತೆಯು ಪ್ರಥಮವೂ ಪ್ರಧಾನವೂ ಆಗಿದ್ದು, ಮಾನಸಿಕ-ನೈತಿಕ-ಆರ್ಥಿಕ-ಭೌತಿಕ ಸಂಗತಿಗಳೆಲ್ಲಾ ಗೌಣವಾಗಿದ್ದವು. ದ್ವಿತೀಯ ಅವಸ್ಥೆಯು ಆಗಲೇ ಒಂದು ನಿಲುಕಡೆಗೆ ಬಂದ ಅವಸ್ಥೆ. ಒಂದು ಸ್ಥಿರವಾದ ಪಡಿಯಚ್ಚನ್ನು ಇಲ್ಲಿ ಕಾಣಬಹುದು. ಇದು ಮುಖ್ಯವಾಗಿ

ಮನಃಪ್ರಧಾನವೂ ನಿಯಮಬದ್ಧವೂ ಆಗಿರುವುದು. ಉಳಿದ ಅಂಶಗಳೆಲ್ಲ—ಆಧ್ಯಾತ್ಮಿಕತೆ ಮೊದಲುಗೊಂಡು—ಅದರ ಪೋಷಕವಾಗಿ ಉಳಿಯುವವು. ಆಧ್ಯಾತ್ಮಿಕತೆಯು ನೈತಿಕ ನಿಯಮಗಳ ಆಧಾರವಾಗಿ, ಸ್ವರೂಪವನ್ನು ನಿಶ್ಚಯಿಸುತ್ತ, ಧರ್ಮವೆಂದು ಪ್ರತಿಷ್ಠೆಗೊಳ್ಳುವುದು. ಮನುಜನಲ್ಲಿ ಪ್ರತ್ಯಕ್ಷ ದೈವಾನುಭವ ಮತ್ತು ವಿಶ್ವಸತ್ಯದ ಅನುಭವ ಇವುಗಳು ಪ್ರಧಾನವಾಗಿರದೆ, ಅಪ್ರಧಾನವಾಗಿ, ಕೊನೆಗೆ ಜೀವನದ ಆಚರಣ ಸಿದ್ಧಾಂತಗಳಲ್ಲಿ ಕೂಡ ಲುಪ್ತವಾಗುವವು. ಈ 'ಮಾದರಿ' ಯುಗದಲ್ಲಿ ( Typal Stage ) ಉನ್ನತ ಸಾಮಾಜಿಕ ಆದರ್ಶಗಳು ಹುಟ್ಟುವವು. ಆ ಕಾಲವು ಕೊನೆಗಂಡರೂ, ಆ ಆದರ್ಶಗಳ ಪ್ರಭಾವವು ಅಳಿಯುವುದಿಲ್ಲ. ಶೀಲ ಸಭ್ಯತೆಗಳು ಚೆನ್ನಾಗಿ ಒಡಮೂಡುವವು. ಕುಲಧರ್ಮವು ಸಜೀವವಾಗಿ ನೆಲೆಗೊಳ್ಳುವುದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಧರ್ಮಗಳು ವಿಕೃತಿಗೀಡಾಗದೆ, ತಮ್ಮ ಶುದ್ಧ ಸತ್ತ್ವದಲ್ಲಿ ಬೆಳಗುವವು. ಆದರೆ ಕ್ರಮವಾಗಿ ಮಾನಸಿಕ ಹಿನ್ನೆಲೆಯು ಮಸುಕಾಗಿ, ಕಡೆಗೆ ಅದು ಶುಷ್ಕ ಆಚಾರವಾಗಿ ಪರಿಣಮಿಸುವುದು. ಇದೇ ಮೂರನೆಯ ಯುಗ. ಎಂದು ಬಾಹ್ಯ ನಿಯಮಗಳೂ ರೂಪಗಳೂ ಅಂತಃಸತ್ಯ—ಆದರ್ಶಗಳಿಗಿಂತ ಪ್ರಾಧಾನ್ಯವನ್ನು ಪಡೆಯುವವೋ ಆಗ ರೂಢಿಯುಗ ಇಲ್ಲವೆ ಆಚಾರಯುಗವು ( Conventional Stage ) ಪ್ರಾರಂಭವಾಯಿತೆನ್ನಬಹುದು. ಈ ಸಾಂಪ್ರದಾಯಿಕ ಯುಗದ ಮುಖ್ಯ ಲಕ್ಷಣವೆಂದರೆ ಪ್ರಗತಿಪರವಾದ ಬದಲಾವಣೆಗಳಿಗೆ ಎಡೆಗೊಡದೆ ಸಂಸ್ಥೆ—ಆಚಾರಗಳನ್ನು ಸ್ಥಿರಗೊಳಿಸುವುದು, ವರ್ಗ—ಅಂತಸ್ತುಗಳನ್ನು ನಿಷ್ಠುರನಿಯಮಗಳ ಪ್ರಕಾರ ಗೊತ್ತುಪಡಿಸುವುದು ಹಾಗೂ ಮತ-ಧರ್ಮಗಳನ್ನೂ ವಿದ್ಯಾವಿಧಾನಗಳನ್ನೂ ಎಲ್ಲವನ್ನೂ 'ಪದ್ಧತಿ'ಗೊಪ್ಪಿಸುವುದು. ಸಾಂಪ್ರದಾಯಿಕ ಯುಗದಲ್ಲಿ ಆತ್ಮವು ಇನ್ನೂ ಸಬಲವಿದ್ದಾಗ ಒಂದು ಸುವರ್ಣ-ದಶೆಯನ್ನು ನೋಡಬಹುದು. ಇದು ಮುಂದಿನವರ ದೃಷ್ಟಿಗೆ ಮೋಹಕವಾಗಿರುವುದು. ದೂರದಿಂದ ನೋಡುವವರಿಗೆ ಇಲ್ಲಿ ಸುವ್ಯವಸ್ಥೆ, ಆಕಾರಸೌಷ್ಠವ, ಸಮಾಜರಚನಾಕೌಶಲ್ಯ, ಒಂದೇ ಚೌಕಟ್ಟಿನಲ್ಲಿ ಹೊಂದಿಕೊಂಡಿರುವ ವಿವಿಧ ಭಾಗಗಳ ಮೇಳ—ಇವು ಎದ್ದು ಕಾಣಿಸುವವು. ಯುರೋಪಿನ ಮಧ್ಯಯುಗದ ಕಾಲವಿಂತಹುದು. ಹಿನ್ನೋಟಕ್ಕೆ ವೈಭವಯುತವಾದುದು ; ಆದರೆ ನಿಜವಾಗಿಯೂ ಅಜ್ಞಾನ, ಅನ್ಯಾಯ, ಕ್ರೌರ್ಯ, ದೌರ್ಜನ್ಯಗಳಿಂದ ಅದು ತುಂಬಿದ್ದಿತು. ಬಾಹ್ಯಪರಿಪುಷ್ಟತೆ ಇದ್ದರೂ, ಸಾಂಪ್ರದಾಯಿಕ ಯುಗದಲ್ಲಿ ಆಂತರ್ಯವು ಕ್ರಮೇಣ ಕ್ಷೀಣವಾಗುವುದು. ಆಕಾರದಲ್ಲಿ ಬಲಿಷ್ಠವಾಗಿ ತೋರಿದರೂ ಅಂತಃಶೂನ್ಯತೆಯು ರಭಸದಿಂದ ಸಾಗಿರುತ್ತದೆ. ಸಮಾಜವೇ ಕುಸಿದುಬೀಳುವ ಕಾಲವದು. ಸಂಪ್ರದಾಯಕ್ಕೂ ಸತ್ಯಕ್ಕೂ ಇರುವ ಅಂತರವು ತೀರಾ ಹೆಚ್ಚಾಗಿ, ಅಸಹನೀಯವಾಗುವುದು. ಆಗ ಬುದ್ಧಿಯು ಎಚ್ಚತ್ತು ಎಲ್ಲ ಹಳಯ ಸೂತ್ರಗಳನ್ನು ಬದಿಗೊತ್ತಿ ಪುನರ್-ನಿರ್ಮಾಣಕಾರ್ಯವನ್ನು ಕೈಕೊಳ್ಳುವುದು. ಇದೇ ಬೌದ್ಧಿಕ, ಪ್ರಾಗತಿಕ ಇಲ್ಲವೆ ಸ್ವಾತಂತ್ರ್ಯಯುಗವೆಂದು ( Age of Reason, Age of Progress or Age of Freedom ) ಪ್ರಖ್ಯಾತವಾಗಿರುವುದು. ಪ್ರಗತಿಶೋಧನಾಪಥದಲ್ಲಿ ನಾವು ಹೊರಗಣ ಸಾಧನಗಳನ್ನೂ ಯಂತ್ರಗಳನ್ನೂ ಅವಲಂಬಿಸಿ, ಅವುಗಳ ಲೋಪ-ನ್ಯೂನತೆಗಳನ್ನು ಕಂಡ ತರುವಾಯ ಒಂದು ಅಂತಸ್ತತ್ತ್ವವನ್ನು ಅರಸುತ್ತಾ ಹೋಗುವೆವು. ಇದೇ ಆಂತರಿಕ ಯುಗದ ( Subjective Age ) ಸೀಠಿಕೆ. ಇಲ್ಲಿ ಅನೇಕ ತೊಡಕುಗಳಿರುವವು. ಅವುಗಳ ಸಂಪೂರ್ಣ ವಿವೇಚನೆಯಿರುವುದು ಈ ಗ್ರಂಥದಲ್ಲಿ. ಆಂತರ್ಯವನ್ನು ಹೊಕ್ಕು, ಕೇಂದ್ರ

ವನ್ನು—ನಿಜಹೃದಯವನ್ನು—ಮುಟ್ಟುವವರೆಗೆ ಮಾನವನು ಅಲೆಯಬೇಕಾಗುವುದು. ಆಂತರಿಕ ಇಲ್ಲವೆ ಮಾನಸಿಕ ಯುಗವೇ ಆಧ್ಯಾತ್ಮಿಕ ಯುಗದ ( Spiritual Age ) ಪೂರ್ವ ಚಿಹ್ನೆ. ಇದು ಬಹಳ ದುರ್ಗಮವಾದ ಹಾದಿ; ಆಸುರೀಶಕ್ತಿಗಳ ಪ್ರಾಂತ. ಮಾನವನು ಬಹಳ ಎಚ್ಚರಿಕೆಯಿಂದ ನಡೆಯಬೇಕು. ಇಲ್ಲವಾದರೆ ಅದೈವೀ ಗುಣಗಳ ಪಾಲಾಗುವನು. " ಮಾನವ ಪ್ರಗತಿಚಕ್ರ "ವು ಈ ಮಾನಸಿಕ ಪಥದ ಕಷ್ಟನಿಷ್ಠುರಗಳನ್ನು ಚೆನ್ನಾಗಿ ವಿಶದಗೊಳಿಸುವುದು. ಬೆಳವಣಿಗೆಯ ಆದರ್ಶತತ್ತ್ವವನ್ನು ನಿರ್ದೇಶಿಸಿ, ನಾಗರಿಕತೆ—ಸಂಸ್ಕೃತಿ- ನೀತಿ ಸೌಂದರ್ಯಗಳ ಮೀಮಾಂಸೆಯನ್ನರುಹಿ, ಬುದ್ಧಿಯ ಕರ್ತವ್ಯ-ಮಿತಿಗಳನ್ನು ತಿಳಿಸಿ, ಅತೀಂದ್ರಿಯ ಸತ್ಯ-ಶಿವ-ಸುಂದರಗಳನ್ನು ಗುರುತಿಸಿ, ಕೊನೆಯ ೪ ಅಧ್ಯಾಯಗಳಲ್ಲಿ ಆಧ್ಯಾತ್ಮಿಕ ಗುರಿ, ಆಧ್ಯಾತ್ಮಿಕ ಪರಿವರ್ತನೆಯ ಅಗತ್ಯ, ಆಧ್ಯಾತ್ಮಿಕ ಯುಗದ ಪೂರ್ವಸಿದ್ಧತೆ ಮತ್ತು ಆಧ್ಯಾತ್ಮಿಕ ಸಮಾಜದ ನಿರ್ಮಾಣಗಳನ್ನು ಸೂಚಿಸಿ ಗ್ರಂಥವು ಮುಗಿಯುವುದು. ಅಂಥ ಸಮಾಜದ ಸೃಷ್ಟಿಯೇ ಮಾನವ ಪ್ರಗತಿಯ ಗುರಿ ಮತ್ತು ಸಾಫಲ್ಯ.

**The Ideal of Human Unity** ( ಮಾನವೀಯ ಐಕ್ಯದ ಆದರ್ಶ ) :—ಇದು **" ಆರ್ಯ "** ದ ೨ನೆಯ ಸಂಪುಟದ ೨ನೆಯ ಸಂಚಿಕೆಯಿಂದ ಆರಂಭವಾಗಿ ೪ನೆಯ ಸಂಪುಟದ ೧೨ನೆಯ ಸಂಚಿಕೆಯಲ್ಲಿ ಮುಗಿಯಿತು. ಪುಸ್ತಕರೂಪದಲ್ಲಿ ಇದೀಗ ಅಚ್ಚಾಗಿದೆ. ೨೦ ಪುಟಗಳ ಓನ್ನುಡಿಯೂ ಇದೆ. ಇಲ್ಲಿ, ಇತಿಹಾಸದಲ್ಲಿ ಮಾನವೀಯ ಐಕ್ಯದ ಬಗ್ಗೆ ಇಲ್ಲಿಯವರೆಗೆ ನಡೆದ ಪ್ರಯತ್ನಗಳ ವಿವರವಿದೆ. ವ್ಯಕ್ತಿಗೂ ಸಮಾಜಕ್ಕೂ ಇರಬೇಕಾದ ಸಂಬಂಧದ ವಿಚಾರವಿದೆ. ಐಕ್ಯವು ಪ್ರಕೃತಿಸಿದ್ಧವಾದುದು. ಕುಟುಂಬ ಮೊದಲುಗೊಂಡು ಸಾಮ್ರಾಜ್ಯದ ವರೆಗೆ ಹೇಗೆ ಸಮಾಜವು ಬೆಳೆದು ಬಂದಿದೆಯೆಂಬುದರ ಸೂಕ್ಷ್ಮ ವಿವೇಚನೆಯಿದೆ. ಕೇವಲ ರಾಜಕೀಯ ಇಲ್ಲವೆ ಬಾಹ್ಯ ಐಕ್ಯವು ನಿಜವಾದ ಆಂತರಿಕ ಐಕ್ಯವಾಗಿ ಪರಿಣಮಿಸುವಂತೆ ಮಾಡುವುದೇ ಇತಿಹಾಸದ ಸಮಸ್ಯೆಯಾಗಿದೆ. ಸಮಾಜದ ಬೆಳವಣಿಗೆಯಲ್ಲಿ ಹೀಗೆ ಪ್ರಕೃತಿಸಿದ್ಧವಾಗಿ ನಮ್ಮ ಕಾಲದಲ್ಲಿ ರೂಪುಗೊಂಡಿರುವ ಸಮುದಾಯವೆಂದರೆ ಜನಾಂಗ ( Nation ). ರಾಜಕೀಯ ಆಡಳಿತ-ವಿಧಾನಗಳಿಂದ ಯಾಂತ್ರಿಕ ಐಕ್ಯವನ್ನು ನಾವು ಕಲ್ಪಿಸಬಹುದು. ಅದು ಭದ್ರವಾಗಿ ಉಳಿಯಬೇಕಾದರೆ, ಸತ್ಯಸ್ವರೂಪವನ್ನು ಪಡೆಯಬೇಕಾದರೆ ಮಾನವೀಯತೆಯ ಧರ್ಮವು ( Religion of Humanity ) ಆಧ್ಯಾತ್ಮಿಕ ಚೈತನ್ಯವನ್ನು ತಾಳಬೇಕು. ಈಗ ಅದು ಕೇವಲ ಬೌದ್ಧಿಕ ವಿಚಾರವಾಗಿ ಉಳಿದಿದೆ. ಈ ಧರ್ಮವು ೧೯ನೆಯ ಶತಕದಲ್ಲಿ ತಲೆದೋರಿತು. ಮಾನವಾಭ್ಯುದಯವೇ ಎಲ್ಲ ಪ್ರಯತ್ನದ ಗುರಿ. ಮಾನವಕೋಟಿಯೇ ಆರಾಧ್ಯ ದೇವತೆ. ಜಾತಿ, ರಾಷ್ಟ್ರ, ಕುಟುಂಬ ಮೊದಲಾದ ಎಲ್ಲ ಸಂಸ್ಥೆಗಳು ಈ ಧರ್ಮದ ಚೌಕಟ್ಟಿನಲ್ಲಿ ಬಾಳಬೇಕು; ಕೃತಿಯೆಸಗಬೇಕು. ಜಾತಿ-ಮತ-ಪಂಥಗಳನ್ನು ಮೀರಿ ಮಾನವನ ಹಿರಿಮೆಯನ್ನು, ಪವಿತ್ರತೆಯನ್ನು ಗುರುತಿಸಬೇಕು. ಮನುಷ್ಯನ ದೇಹವನ್ನು ಪವಿತ್ರವೆಂದೆಣಿಸಿ, ಹಿಂಸೆ-ಅಪಚಾರಗಳಿಂದ ತಪ್ಪಿಸಿ, ರೋಗದ ಬಲೆಯಿಂದಲೂ ಅಕಾಲ ಮೃತ್ಯುವಿನ ದವಡೆಯಿಂದಲೂ ಕಾಪಾಡಬೇಕು. ಮನುಷ್ಯನ ಪ್ರಾಣವೂ ಅಷ್ಟೇ ಪವಿತ್ರವೆಂದು ತಿಳಿದು ಅದನ್ನು ಉಳಿಸಬೇಕು, ಬಲಗೊಳಿಸಬೇಕು, ಉನ್ನತಿಗೊಳಿಸಬೇಕು. ಮಾನವಹೃದಯದ ಪಾವಿತ್ರ್ಯವನ್ನೂ ಅರಿತು, ಅದರ ವಿಕಾಸಕ್ಕೆ ಆಸ್ಪದವನ್ನು ಕೊಟ್ಟು, ಅದು ಕ್ಷುದ್ರವಾಗದಂತೆಯೂ ಯಾಂತ್ರಿಕವಾಗದಂತೆಯೂ

ತಮಃಪಟಲಗಳಿಂದ ಮುಚ್ಚಿಹೋಗದಂತೆಯೂ ನೋಡಬೇಕು. ಮನಸ್ಸನ್ನಾದರೂ ಎಲ್ಲ ಬಂಧನಗಳಿಂದ ಮುಕ್ತಮಾಡಿ, ಅದಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟು, ಸ್ವಯಂಶಿಕ್ಷಣ-ಸ್ವಯಂವೃದ್ಧಿಗಳಿಗೆ ಮಾರ್ಗ ಮಾಡಿಕೊಟ್ಟು, ಮಾನವಕೋಟಿಯ ಸೇವೆಗೆ ನೆರವಾಗುವ ಹಾಗೆ ತಿದ್ದಬೇಕು. ಇದು ಕೇವಲ ಭಾವನೆಯಾಗಿ ಉಳಿಯದೆ, ನಿತ್ಯ ವ್ಯವಹಾರದಲ್ಲಿ ಇಳಿಯಬೇಕು. ಇದೇ ಮಾನವೀಯತೆಯ ಧರ್ಮದ ಸಾರ. ಇದರ ಪ್ರಭಾವದಿಂದ ಕಳೆದ ಒಂದೂವರೆ ಶತಮಾನದಲ್ಲಿ ಜಗತ್ತಿಗೆ ಎಷ್ಟೋ ಉಪಕಾರವಾಗಿದೆ. ಅದನ್ನು ಶ್ರೀ ಅರವಿಂದರು ಚೆನ್ನಾಗಿ ಒಪ್ಪಿಕೊಂಡಿರುವರು. ಆದರೆ ಇನ್ನೂ ನಮ್ಮ ಸ್ವಭಾವಪರಿವರ್ತನೆಯಾಗಬೇಕಾಗಿದೆ. ಇದಕ್ಕಾಗಿ ಮಾನವೀಯತೆಯು ಕೇವಲ ಬೌದ್ಧಿಕ ತತ್ತ್ವವಾಗಿರದೆ, ಆಧ್ಯಾತ್ಮಿಕ ಹೃದಯವನ್ನು ಪಡೆಯಬೇಕು. ಆಗ ಸ್ವಾತಂತ್ರ್ಯ, ಸಮತ್ವ, ಭ್ರಾತೃತ್ವವೆಂಬೀ ಕಲ್ಪನೆಗಳು ಯಥಾರ್ಥವಾಗುವವು. ಈ ಮೂಲತತ್ತ್ವಗಳ ಅರಿವು ಜಗತ್ತಿಗಿನ್ನೂ ಬೋಧೆಯಾಗಿಲ್ಲ. ಆಧ್ಯಾತ್ಮಿಕ ಮಾನವೀಯ ಧರ್ಮವನ್ನು ಸ್ಥೂಲವಾಗಿ ಗುರುತಿಸಲೂ ಇಲ್ಲಿ ಅವಕಾಶವಿಲ್ಲ.

ಪರಿಶಿಷ್ಟ ಭಾಗದಲ್ಲಿ ಇತ್ತೀಚೆಗೆ ಮಾನವೀಯ ಐಕ್ಯದ ಸಾಧನೆಗೆಂದು ನಿರ್ಮಿತವಾಗಿದ್ದ League of Nations, ಪ್ರಸ್ತುತದಲ್ಲಿ ಸ್ಥಾಪಿತವಾದ ಯುಕ್ತರಾಷ್ಟ್ರಗಳ ಸಂಸ್ಥೆ, ಜಗತ್ತಿನಲ್ಲಿ ಪ್ರಚಲಿತವಾಗಿರುವ ಬೇರೆ ಬೇರೆ ವಾದಗಳ (Ideologies) ಹಾಗು ತತ್ತ್ವಗಳ ಹೋರಾಟ, ರಷಿಯನ್ನರ ಸಾಮ್ಯವಾದ (Communism), ತೃತೀಯ ಯುದ್ಧದ ಸಂಭಾವ್ಯತೆ, ಎಷ್ಟೇ ಎಡರು ತೊಡರುಗಳಿಗೀಡಾದರೂ ಮಾನವೀಯ ಐಕ್ಯದ ಅಂತಿಮ ಸಿದ್ಧಿಯ ಅನಿವಾರ್ಯತೆ ಇವುಗಳನ್ನೆಲ್ಲಾ ಸೂಚಿಸಿರುವರು.

**The Future Poetry** (ಭಾವೀ ಕಾವ್ಯ) :— ಈ ಲೇಖಮಾಲೆಯು ಇನ್ನೂ ಪುಸ್ತಕರೂಪದಲ್ಲಿ ಸಂಗ್ರಹವಾಗಿಲ್ಲ. **ಆರ್ಯ**ದ ೪ನೆಯ ಸಂಪುಟದಲ್ಲಿ, ಶ್ರೀ. Cousins ರವರು ಬರೆದ "New Ways in English Literature" (ಆಂಗ್ಲ ಸಾಹಿತ್ಯದಲ್ಲಿ ಹೊಸ ಮಾರ್ಗಗಳು) ಎಂಬ ಪುಸ್ತಕದ ವಿಮರ್ಶೆಯಾಗಿ ಪ್ರಾರಂಭವಾಗಿ ಸ್ವತಂತ್ರ ಚರ್ಚೆಯಾಗಿ ಬೆಳೆಯಿತು. ೬ನೆಯ ಸಂಪುಟದಲ್ಲಿ ಸಮಾಪ್ತಿ ಲೇಖವಿದೆ. ಮೊದಲಿನ ಆರು ಸಂಚಿಕೆಗಳಲ್ಲಿ ಕಾವ್ಯದ ಸಾರ, ಛಂದಸ್ಸು, ವಸ್ತು, ರಾಷ್ಟ್ರೀಯ ಸಾಹಿತ್ಯ ಈ ವಿಷಯಗಳಿವೆ. ಆ ತರುವಾಯ Chaucer ಕವಿಯಿಂದ ಮೊದಲುಮಾಡಿ ಶ್ರೀ ಅರವಿಂದರು ಬರೆಯುವ ವೇಳೆಯ ವರೆಗೆ ನಡೆದ ಸಾಹಿತ್ಯಪರಂಪರೆಯ ಅವಲೋಕನವಿದೆ. ಇದು ಕೇವಲ ಕವಿಗಳ ಅಥವಾ ಸಾಹಿತ್ಯದ ಚರಿತ್ರೆಯಾಗಿರದೆ ಆಂಗ್ಲಸಾಹಿತ್ಯದ ಉದ್ದಾಮ ಕವಿಗಳ ಕೃತಿಗಳ ಅತಿಮಾರ್ಮಿಕ ವಿವೇಚನೆಯಾಗಿದೆ. ಅಮೇರಿಕದ ಸಾಹಿತ್ಯ ಪ್ರತಿನಿಧಿಗಳಾದ Emerson, Whitman, Carpenter ರವರ ದೃಷ್ಟಿ ಸೃಷ್ಟಿಗಳ ವೈಶಿಷ್ಟ್ಯವನ್ನೂ ಸೂಚಿಸಲಾಗಿದೆ. ಅಯರ್ಲಂಡ ದೇಶದ ಕವಿಗಳಾದ Yeats, Russel ಮೊದಲಾದವರ-ಆಂಗ್ಲಸಾಹಿತ್ಯಕ್ಕೆ ಹೊಸ ಪ್ರತಿಭೆಯನ್ನೂ ಅನುಭಾವಿಕ ಪ್ರಭೆಯನ್ನೂ ನೀಡಿದ ಕೆಲ್ಟಿಕ್ ಕವಿಗಳ ಬಗ್ಗೆಯೂ ಪ್ರಶಂಸೆ ಇದೆ. ರವೀಂದ್ರರು ಈ ದಿಶೆಯಲ್ಲಿ ಮಾಡಿದ ಪ್ರಯೋಗದ ಬಗ್ಗೆ ಮಾರ್ಮಿಕ ಉಲ್ಲೇಖವೂ ಸೇರಿದೆ. ಈ ನೂತನ ಕಾವ್ಯಾಂತರಿಕ್ಷದಲ್ಲಿ ಗರಿಬಿಚ್ಚಿ ಹಾರಾಡುವ ಕವಿವಿಹಂಗಮರಲ್ಲಿ ಅವರದೇ ಉಚ್ಚಮಟ್ಟವೆಂದು ಅಭಿಪ್ರಾಯ ಪಟ್ಟಿದ್ದಾರೆ.

**Wordsworth, Byron, Coleridge, Blake, Keats, Shelley, Browning, Tennyson, Swinburne, Arnold** ರವರ ಸಾಹಿತ್ಯವನ್ನು ಕುರಿತ ಲೇಖ ಗಳು ವಿಮರ್ಶಾತ್ಮಕ ರೀತಿಯಲ್ಲಿ ಹೊಸ ಶೈಲಿಯನ್ನು ಪ್ರಕಟಿಸುತ್ತವೆ. ಕೊನೆಯ ಅಧ್ಯಾಯ ಗಳಲ್ಲಿ ಮತ್ತೆ ಕಾವ್ಯಮೀಮಾಂಸೆ; ಸಾಹಿತ್ಯವನ್ನು ಮಂತ್ರದ ಮಟ್ಟಕ್ಕೆ ಏರಿಸುವುದೇ ಈ ಮೀಮಾಂಸೆಯ ಉದ್ದೇಶ. ವೇದೋಪನಿಷತ್ತುಗಳಲ್ಲಿ ಮೂಡಿರುವ ಮಂತ್ರಸಾಹಿತ್ಯದ ರೀತಿ ಯನ್ನು ಹಾಗು ಏಕಕಾಲಕ್ಕಾಗುವ ಕಾವ್ಯ-ತತ್ತ್ವಜ್ಞಾನಗಳ ಸಹಜ ಸಮ್ಮಿಲನ ರೀತಿಯನ್ನು ಮತ್ತೆ ಆಧುನಿಕರ ಲಕ್ಷ್ಯಕ್ಕೆ ತಂದಿರುವರು. ಸಾಹಿತ್ಯದ ಪ್ರಕಾರಗಳು, ಭಾವಗೀತೆ, ನಾಟಕ, ಮಹಾಕಾವ್ಯ ಇವು ಅತಿಮಾನಸದ ಸ್ಫುರಣೆಯನ್ನು ಪಡೆದಾಗ ಯಾವ ವಸ್ತುವನ್ನು, ಯಾವ ಆಕಾರವನ್ನು ತಾಳಬಹುದು ಎಂಬುದರ ಮುನ್ನೋಟವಿದೆ. ಮಹಾಕಾವ್ಯವೇ ( Epic ) ಮುಂದೆ ಬರುವ ಮಹಾಕವಿಯ ವಾಹಕವಾಗಿ, ಅಭೂತಪೂರ್ವ ಸೃಷ್ಟಿಯಾಗಬಹುದೆಂಬ ಆಶೆಯಿದೆ. ಅದರ ರೂಪ-ರೇಷಗಳನ್ನು ನಾವರಿಯಬೇಕಾದರೆ ಶ್ರೀ ಅರವಿಂದರ Savitri ( ಸಾವಿತ್ರಿ ) ಮಹಾಕಾವ್ಯದತ್ತ ನಾವು ಸಾಗಬೇಕು.

**Savitri** :—ಶ್ರೀ ಅರವಿಂದರ ಕವನಗಳೂ ನಾಟಕಾನುವಾದಗಳೂ ಎರಡು ಸಂಪುಟ ಗಳಲ್ಲಿ ಪ್ರಸಿದ್ಧವಾಗಿವೆ. ಇನ್ನೂ ಬೆಳಕನ್ನು ಕಾಣದ ಎಷ್ಟೋ ಕಾವ್ಯರಾಶಿಯಿದೆಯೆಂದು ಸೂಚಿಸಿದ್ದಾರೆ. ಇವನ್ನು ಬಿಟ್ಟು Savitri ಮಹಾಕಾವ್ಯವು ಈಗ ರೂಪುಗೊಳ್ಳುತ್ತಿದೆ. ಮೂರು ಭಾಗಗಳು ಈಗಾಗಲೇ ಪುಸ್ತಕರೂಪದಲ್ಲಿ ಹೊರಬಿದ್ದಿವೆ. ೨ನೆಯ ಭಾಗದಲ್ಲಿ ಒಂದೊಂದರಲ್ಲಿ ೫೦೦, ೬೦೦ ಸಾಲುಗಳಂತೆ ೧೫ ಸರ್ಗಗಳಿವೆ. ಈ ಅಪೂರ್ವ ಕಾವ್ಯದ ಸ್ಥೂಲ ಅರ್ಥಗ್ರಹಣದ ವೇಳೆಯಾದರೂ ಇನ್ನೂ ಬಂದಿಲ್ಲ ಈ ಕಾವ್ಯದ ಬೆಡಗನ್ನು, ಅದರ ದಿವ್ಯಾತ್ಮವನ್ನು, ಮಂತ್ರಮಯ ನುಡಿಗಳನ್ನು ಅಲ್ಪ ಪ್ರಮಾಣದಲ್ಲಿ ತಿಳಿಯಲು ಸಹ ಓದುಗ ರಲ್ಲಿ ದಿವ್ಯ ಸಂಸ್ಕಾರವೇ ಬೇರೂರಬೇಕು, ಬಹಳ ಕಾಲವು ಗತಿಸಬೇಕು. ಈ ಮಹಾಕಾವ್ಯವು ಸಾವಿತ್ರಿ ಆಖ್ಯಾನದ ಸಂಕೇತವನ್ನು ವಸ್ತುವನ್ನಾಗಿಟ್ಟುಕೊಂಡಿದೆ. ಮೊದಲನೆಯ ಸರ್ಗದಲ್ಲಿ ಕೊನೆಯ ಸಾಲಾದ, *That day Satyavan was to die* ಎಂಬುದೊಂದೇ ಕಥೆಯನ್ನು ಸೂಚಿಸುವ ಸಾಲು. ಉಳಿದುದೆಲ್ಲ ತೆರೆಯ ಮೇಲೆ ತೆರೆಯಾಗಿ ಉಕ್ಕಿ ಬಂದದಿವ್ಯ ಪ್ರತಿಭೆಯು ದಿವ್ಯಾನುಭವದ ಆನಂದೋದ್ಗಾರ.

ಈ ಉದ್ಗ್ರಂಥಗಳಲ್ಲದೆ ಚಿಕ್ಕಪುಟ್ಟ--ಅಂದರೆ ಗಾತ್ರದಲ್ಲಿ ಮಾತ್ರ-ಬರಹಗಳ ಸಂಖ್ಯೆಯು ೩೦ ಮಿಕ್ಕಿದೆ: –

*The Yoga and its Objects*
*Lights on Yoga*
*Bases of Yoga.*
*The Riddle of this World.*
*Lights on Life-Problems*
*Bankim–Tilak-Dayananda*
*A System of National Education.*
*The Ideal of the Karmayogin.*
*The Renaissance in India*
*Speeches*
*War and Self-determination.*
*Ideal and Progress.*
*The Superman*
*Evolution*
*Thoughts and Glimpses.*
*The National Value of Art*

*The Brain of India*
*The Doctrine of Passive Resistance*
*Kalidas.*
*Heraclitus.*
*The Mother.*
*Yogic Sadhan*
*Letters* ( *1st Series* ).
,, ( *2nd* ,, ).
,, ( *3rd* ,, ).
*Form and Spirit of Indian Polity.*
*The Significance of Indian Art.*
*Messages*
*Need in Nationalism etc......*

ಹೀಗೆ ಅವರ ಗ್ರಂಥಗಳ ಪಟ್ಟಿ. ಪತ್ರಸಾಹಿತ್ಯದ ಮೂರು ಸಂಪುಟಗಳು ಒಂದೊಂದೂ ೩೦೦, ೪೦೦ ಪುಟಗಳನ್ನೊಳಗೊಂಡು ಸಾಧಕರಿಗೆ ಅಮೌಲ್ಯವಾದ ಮಾರ್ಗದೀಪಿಕೆಗಳಾಗಿವೆ.

## ಸೂತ್ರ

ಪೂರ್ಣಯೋಗದ ವೇದಾಂತಭಾಗವನ್ನು **ಭಾಗವತ ಜೀವನ**ದಲ್ಲಿ ಮಂಡಿಸಿ, ಅದು ಹೇಗೆ ವೇದಸಮ್ಮತವೆಂಬುದನ್ನು **ವೇದರಹಸ್ಯ**ದಲ್ಲಿ ತಿಳಿಸಿ, **ಈಶ–ಕೇನ** ಉಪನಿಷತ್ತುಗಳಲ್ಲಿಯೂ ಅದನ್ನೇ ಸಮರ್ಥಿಸಿ, ಮುಂದೆ **ಗೀತೆ**ಯು ಸಹ ತಮ್ಮ ಸಾಕ್ಷಾತ್ಕಾರವನ್ನು ಹೇಗೆ ಪುಷ್ಟೀಕರಿಸುವುದೆಂಬುದನ್ನು **ಗೀತಾಪ್ರಬಂಧ**ಗಳಲ್ಲಿ ಕಾಣಿಸಿ, ಪೂರ್ಣಯೋಗದ ಸಾಧನ ಮಾರ್ಗವನ್ನು ವ್ಯಕ್ತಿಗೋನುಗ **ಯೋಗಸಮನ್ವಯ**ದಲ್ಲಿ ನಿರೂಪಿಸಿ, ಅದನ್ನೇ **ಮಾನವಪ್ರಗತಿಚಕ್ರ**ದಲ್ಲಿ ಸಮಾಜಕ್ಕೆ ಅನ್ವಯಿಸಿ, ಆಧ್ಯಾತ್ಮಿಕ ಸಮಾಜಸೃಷ್ಟಿಯು ಹೇಗಾಗಬೇಕೆಂಬುದನ್ನು ಸೂಚಿಸಿ, ಇಲ್ಲಿಯ ವರೆಗೆ ಇತಿಹಾಸದಲ್ಲಿ ನಡೆದ ಪ್ರಯೋಗ-ಪ್ರಯತ್ನಗಳ ಬೆಲೆ-ಮಹತ್ತ್ವಗಳನ್ನು ಭಾಗವತ ಜೀವನದ ಮತ್ತು ಮಾನವೀಯತೆಯ ಧರ್ಮದ ಸಮಗ್ರ ದೃಷ್ಟಿಕೋನದಿಂದ **ಮಾನವೀಯ ಐಕ್ಯದ ಆದರ್ಶ**ದಲ್ಲಿ ಅಳೆದು, ಶ್ರೀ ಅರವಿಂದರು ಕೇವಲ ಆರೇಳು ವರ್ಷಗಳ ಅವಧಿಯಲ್ಲಿ ವಿಶ್ವವಿಚಾರಸರಣಿಯನ್ನು ( global thinking ) ನಿದರ್ಶಿಸುವ ಅಪಾರ ಸಾಹಿತ್ಯವನ್ನು ಲೋಕಕ್ಕೆ ಒದಗಿಸಿದ್ದಾರೆ.

**ಅ. ವೆಂಕಪ್ಪಶಾಸ್ತ್ರಿ**

**ಹೆಚ್ಚಿನ ಅಭ್ಯಾಸ ಸಾಮಗ್ರಿ :**

**General**

*Sri Aurobindo* · K. R. SRINIVASA IYENGAR, M. A., D. LITT
*The Yoga of Sri Aurobindo, Parts 1, 2, 3, 4, 5* NOLINI KANTA GUPTA.
*Sri Aurobindo and the New Age* · ANIL BARAN ROY

**1. The Life Divine, Vols. 1 and 2:** SRI AUROBINDO.

*Sri Aurobindo's "The Life Divine"*. A Brief Study V. CHANDRASHEKHARAM
*An Introduction to Sri Aurobindo's Philosophy* DR. S. K. MAITRA, M. A., Ph. D.

**II. The Secret of the Veda:** SRI AUROBINDO. "ARYA" VOLS I & II.

*Hymns to the Mystic Fire:* SRI AUROBINDO.

*Bankim-Tilak-Dayananda* SRI AUROBINDO.

*Lights on the Veda:* T. V KAPALI SASTRI.

*Sri Aurobindo and the Veda:* V. CHANDRASEKHARAM Sri Aurobindo Mandir Annual I

*Godhead and the Gods in the Rigveda:* T V. KAPALI SASTRI. Sri Aurobindo Mandir Annual IV.

*Legend of Shunah Shepa:* M. P. PANDIT. Sri Aurobindo Mandir Annual VIII

*Vedic Study. Need for a New Approach:* M. P PANDIT, Bombay Circle Annual VI.

*Sri Aurobindo's Esoteric Interpretation of the Vedas:* BENOYTOSH BHATTACHARYA The Advent, VI, 49.

**III. Isha Upanisad:** SRI AUROBINDO.

**Kena Upanishad:** SRI AUROBINDO. "ARYA," Vols. I and II

*Lights on the Upanishads.* T. V. KAPALI SASTRI.

*Sri Aurobindo and the Isha Upanishad:* C. C. DUTT. Sri Aurobindo Mandir Annual II.

*Sri Aurobindo and the Kena Upanishad:* C. C. DUTT. Sri Aurobindo Mandir Annual IV

**IV. Essays on the Gita,** Part one, Part two: SRI AUROBINDO.

*Sri Aurobindo and the Gita:* ANIL BARAN ROY. Sri Aurobindo Mandir Annual I.

*Yogeshwara Krishna:* ANIL BARAN ROY. The Advent, November 1946.

*The Teaching of the Gita:* ANIL BARAN ROY. The Advent, February 1947.

*An Approach to the Study of the "Essays on the Gita":* E GOVINDAN NAIR. The Advent, February 1948.

**V. The Synthesis of Yoga:** SRI AUROBINDO.

*The Aim of Integral Yoga:* HARIDAS CHAUDHURI, Sri Aurobindo Mandir Annual V.

*The Main Principles of Integral Yoga:* HARIDAS CHAUDHURI. Bombay Circle Annual III, VI.

**VI. The Human Cycle:** SRI AUROBINDO.

*Sri Aurobindo and Man's Socio-political Development:* C. C. DUTT. Mother India, Vol. II, Nos. 13, 14, 15,

**VII. The Ideal of Human Unity:** SRI AUROBINDO.

*Towards a New World:* SISIR KUMAR MITRA. Sri Aurobindo Mandir Annual I.

*The Integral Vision of India:* Sri Aurobindo Mandir Annual II.

**VIII. The Future Poetry :** SRI AUROBINDO, " Arya " Vols. IV, V & VI.

" *The Future Poetry,* " *Some Comments :* SISIR GHOSE. The Advent, April, 1949.

*Letters of Sri Aurobindo* Third Series

**IX. Collected Poems and Plays, Vols 1 and 2 :** SRI AUROBINDO.

*The Poetic Genius of Sri Aurobindo :* K. D. SETHNA.

*The Later Poems of Sri Aurobindo :* SISIR KUMAR GHOSE. Sri Aurobindo Mandir Annual IV

*An Introduction to the Poetry of Sri Aurobindo* SISIR KUMAR GHOSE. Sri Aurobindo Mandir Annual V.

*Andromeda* Dr. K. R. S. IYENGAR. Sri Aurobindo Mandir Annual VII.

*Urvasi .* Dr. K. R. S. IYENGAR. Sri Aurobindo Mandir Annual VIII.

*Ahana .* Dr. K R. S. IYENGAR. Bombay Circle Annual III.

*The Poetry of Sri Aurobindo* LOTIKA GHOSE. Sri Aurobindo Mandir Annual VIII

*Poems, Past and Present ·* SISIR KUMAR GHOSE. The Advent, Nov. 1946.

*Spiritual Poetry ·* J. S. AGARWAL. The Advent, Aug. 1948

*The Muse of Sri Aurobindo* JAGADISH SARAN. The Advent, Nov. 1948

*Sri Aurobindo* ( Indian Poet, Philosopher and Mystic ) Chapter 10 . G. H. LANGLEY.

**X. Savitri :** SRI AUROBINDO.

*Book One* The Book of Beginnings ( Cantos 1, 2, 3, 4, 5 )

*Book Two ·* The Book of the Traveller of the Worlds ( Cantos 15 ).

*Book Three :* The Book of the Divine Mother ( Cantos 1, 2, 3, 4).

*Book Four* The Book of Birth and Quest ( Cantos 1, 2 ). The Advent, April, 1950 ; Aug 1950.

*Book Five* The Book of Love. Bombay Circle Annual VI

*Parts of Book Six, Book Seven,* published in different Jayanti and The Advent Numbers

*Mystic Poetry* SRI AUROBINDO. Letters, 3rd Series.

*Mystic Poetry ·* NOLINI KANTA GUPTA. Sri Aurobindo Mandir Annual VI.

*Savitri* SRI KRISHNA PREM. Sri Aurobindo Mandir Annual VII.

*Sri Aurobindo,— A New Age of Mystical Poetry ·* K D. SETHNA. Bombay Circle Annual II.

*Savitri ·* NOLINI KANTA GUPTA. The Advent, Feb. 1947.

*Savitri :* NOLINI KANTA GUPTA. The Advent, April, 1947.

# ಮಧ್ಯರಾತ್ರಿಯಲ್ಲಿ

ಅಂದು ಮಧ್ಯರಾತ್ರಿಯಲ್ಲಿ
ಮೊಗ್ಗೆ ಬಿರಿದು ಅರಳುವಲ್ಲಿ
ಹೃದಯ ಹಿಗ್ಗಿ ತೆರೆಯುವಲ್ಲಿ
ಏನು ಇಟ್ಟಿರಿ । ಅಲ್ಲಿ ಏನು ನೆಟ್ಟಿರಿ ॥ ೧ ॥

ಅಂಥ ಕಾಳಕತ್ತಲೊಳಗೆ
ಸುತ್ತು ಮೋಡ-ಮುಸುಕಿನೊಳಗೆ
ಮನದ ಶೂನ್ಯ ಬೆಳಕಿನೊಳಗೆ
ಮಿಂಚನಿಟ್ಟಿರಾ । ಒಂದು ಬೆಳಕನಿತ್ತಿರಾ ॥ ೨ ॥

ಏಸು ದಿನದ ಹಸಿವೆ ಮುರಿದು
ಲೇಸಿನಂದದಮೃತ ಸುರಿದು
ಎರಡನೊಂದರಲ್ಲೆ ಪೊರೆದು
ಭೇದ ಸುಟ್ಟಿರಾ । ಒಂದು ಮೋದವಿಟ್ಟಿರಾ ॥ ೩ ॥

ರಾತ್ರಿ ಕಳೆದು ಬೆಳಗುವಂತೆ
ಕುರುಡು ಅಳಿದು ತಿಳಿಯುವಂತೆ
ಮನದ ಮುಡಿಯು ತೊಳಗುವಂತೆ
ಹರಕೆಯಿತ್ತಿರಿ । ಎಂಥ ಸ್ಪರ್ಶವಿತ್ತಿರಿ ॥ ೪ ॥

ಅಂದು ಮಧ್ಯರಾತ್ರಿಯಲ್ಲಿ
ಮೊಗ್ಗೆ ಬಿರಿದು ಅರಳುವಲ್ಲಿ
ಹೃದಯ ಹಿಗ್ಗಿ ತೆರೆಯುವಲ್ಲಿ
ಏನು ಇಟ್ಟಿರಿ । ಅಲ್ಲಿ ಏನು ನೆಟ್ಟಿರಿ ॥ ೫ ॥

**—ಸಿಂಪಿ ಲಿಂಗಣ್ಣ.**

# ವೇದ-ರಹಸ್ಯ

**( ‘ ವೇದರಹಸ್ಯ ’ವನ್ನು ಕುರಿತ ಲೇಖನಮಾಲೆಯ ಪ್ರಥಮ ಲೇಖ )**

*‘ The secret of the Veda, even when it has been unveiled, remains still a secret.’*

—Sri Aurobindo

ಶ್ರೀ ಅರವಿಂದರು ವೇದದ ರಹಸ್ಯ ಪ್ರಕಟಿಸಲು ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಪುಸ್ತಕರೂಪದಲ್ಲಿ ಬಂದದ್ದು ‘ Hymns to the Mystic Fire ’ ( ಅಗ್ನಿದೇವತೆಯ ಸೂಕ್ತಗಳು ) ಇತ್ತೀಚಿನದು. ಮುಂಚಿನ ಮೂರು **‘ ಆರ್ಯ ’** ಮಾಸಪತ್ರಿಕೆಯ ಮುಂಚಿನ ಮೂರು ವರ್ಷಗಳಲ್ಲಿ ಬಂದುವು: ಅವೆಂದರೆ ( i ) ‘ Secret of the Veda ’ ( ವೇದ ರಹಸ್ಯ ), ( ii ) ‘ Selected Hymns ’ ( ಆಯ್ದ ಸೂಕ್ತಗಳು ), ( iii ) ‘ Hymns of the Atris ’ ( ಅತ್ರಿಗಳ ಸೂಕ್ತಗಳು ). ಇವುಗಳಲ್ಲಿ ಮೊದಲಿನವೆರಡು ಶ್ರೀ ಅಭಯ ದೇವಜಿಯವರಿಂದ ಹಿಂದಿಯಲ್ಲಿ ಅನುವಾದಿತವಾಗಿವೆ, ಪುಸ್ತಕರೂಪದಲ್ಲಿ ಮೊನ್ನೆ ಮೊನ್ನೆ ಪ್ರಕಟವಾಗಿವೆ ; ಮೂರನೆಯದು ಆಗಲಿದೆ. ಹೀಗೆ ಗ್ರಂಥಾಕಾರದಲ್ಲಲ್ಲದೆ, ಬಿಡಿಬಿಡಿ ಸೂಕ್ತಗಳ ಆಂಗ್ಲ ಅನುವಾದವು ಹಲಕೆಲವು ಸಲ **‘ ಆರ್ಯ ’**ದಲ್ಲಿ ಬಂದಿತು. ಈ ಮಾತಿಗೆ ಮೂವತ್ತು ವರ್ಷಗಳಿಗಿಂತ ಮೇಲಾಗಿದೆ.

ಶ್ರೀ. ಕಪಾಲಿಶಾಸ್ತ್ರಿಗಳು ಈ ಮಾರ್ಗವನ್ನನುಸರಿಸಿ ತಮ್ಮ ‘ Lights on the Veda ’ ( ವೇದಪ್ರಕಾಶ ) ಎಂಬ ಪ್ರಬಂಧವನ್ನು ಪ್ರಕಟಿಸಿದ್ದಲ್ಲದೆ, ಋಗ್ವೇದಸಂಹಿತೆಯನ್ನು ‘ ಸಿದ್ಧಾಂಜನ ’ವೆಂಬ ಭಾಷ್ಯಸಮೇತವಾಗಿ, ಸಂಸ್ಕೃತದಲ್ಲಿ, ಇದೇ ವರ್ಷ ಪ್ರಕಟಿಸಿದ್ದಾರೆ. ಇವರೇ ಬರೆದ ‘ Lights on the Upanishads ’ ( ಉಪನಿಷತ್‌ಪ್ರಕಾಶ ) ಎಂಬ ಪ್ರಬಂಧಸಂಗ್ರಹದಲ್ಲಿಯೂ ಶ್ರೀ. ನಲಿನೀಕಾಂತ ಗುಪ್ತರವರ ‘ The Approach to Mysticism ’ ( ಅನುಭಾವಮಾರ್ಗ ) ಎಂಬ ನಿಬಂಧಗಳಲ್ಲಿಯೂ ಶ್ರೀ ಅರವಿಂದರ ವೇದರಹಸ್ಯದ ಬೆಳಕಿನಲ್ಲಿ ಬರೆದ ಬರೆಹಗಳಿವೆ. ಇವಲ್ಲದೆ ಮತ್ತೆ ಬೇರೆ ಕೆಲವು ಬಿಡಿ ಲೇಖನಗಳೂ ಅಲ್ಲಲ್ಲಿ ಪ್ರಕಟವಾಗಿವೆ.

ವೇದರಹಸ್ಯವನ್ನು ಹೇಳುವ ಅಗತ್ಯವೇನು ? **ಒಂದು;** ವೇದ ಭಾರತೀಯ ಸಂಸ್ಕೃತಿಯ ಅಡಿಗಲ್ಲು ; ಇಂದಿಗೂ ಅದರ ಪ್ರೇರಣೆ-ಸ್ಫೂರ್ತಿ ನಮಗಿದೆ. **ಎರಡು;**- ಆದರೆ, ಪ್ರಾಚೀನ

ಕಾಲದಿಂದಲೂ ಈ ವೇದವನ್ನು ಯಜ್ಞದ ಅಂಗವನ್ನಾಗಿ ಮಾಡಿ, ಯಾಜ್ಞಿಕೋಪಯುಕ್ತವಾದ ಮಂತ್ರಗಳ ಸಂಗ್ರಹವೆಂದರೆ ಈ ವೇದ---ಎಂಬುವಂತೆ ಇದರ ಅರ್ಥ ಹಚ್ಚಿ ತೋರಿಸುವ ಭಾಷ್ಯಕಾರರ ಪರಂಪರೆಯೊಂದಿದೆ. ಅದರ ಮೂಲಕ, ವೇದಕ್ಕೂ ವೇದಾಂತವೆನಿಸುವ ಉಪ ನಿಷತ್ತುಗಳಿಗೂ ಇಬ್ಬಣ ಬೆಳೆದು ಬಂದಿತು; ವೇದವೇ ಗೌಣವಾಯಿತು. **ಮೂರು ;** ಭಾರತ ದಲ್ಲಿ ಆಂಗ್ಲವಿಜಯದ ಅನಂತರವಾಗಿ ಪ್ರಾಚೀನ ಸಾಹಿತ್ಯ ಸಂಸ್ಕೃತಿಗಳ ಅಭ್ಯಾಸ ಪ್ರಾರಂಭ ವಾಯಿತು. ಇದರ ವಿಸ್ತಾರದ ಕಲ್ಪನೆಯು ರೆನೋ ಮತ್ತು ಪ್ರೊ. ದಾಂಡೇಕರರವರ ' Vedic Bibliography ' ( ವೈದಿಕ ಗ್ರಂಥಸೂಚಿ )ಯಿಂದ ಬರುವದು. ಇವೆರಡರಲ್ಲಿ ಹತ್ತು ಸಾವಿರ ಉಲ್ಲೇಖಗಳ ಸಂಗ್ರಹವಿದೆ. ಪ್ರೊ. ದಾಂಡೇಕರರವರ ಗ್ರಂಥದಲ್ಲಿ ೨೧ ಪ್ರಕರಣಗಳೂ ಒಟ್ಟು ೧೬೮ ಅಧಿಕರಣಗಳೂ ಇವೆ. ಈ ಹೊಸ ಅಭ್ಯಾಸಕರ ದೃಷ್ಟಿ ಪ್ರಮುಖವಾಗಿ ಪಾಶ್ಚಾತ್ಯಾನುಸಾರಿ. ಆ ದೃಷ್ಟಿಯ ಮುಖ್ಯ ಲಕ್ಷಣಗಳು ಎರಡು. ( i ) ಪ್ರಾಚೀನ ಕಾಲ ದಲ್ಲಿ ಜ್ಞಾನವೃದ್ಧಿಯಿರಲಾರದು ; ( ii ) ಪ್ರಾಚೀನ ಗ್ರಂಥಗಳನ್ನು ಅಂದಿನ ಜೀವನ, ರಾಜ ಕಾರಣ, ಸಮಾಜಕಾರಣಗಳ ದೃಷ್ಟಿಯಿಂದ ಅಭ್ಯಸಿಸಬಹುದು- -ಎಂಬುದಾಗಿ. ಇದರಿಂದ ವೇದಗಳಿಗೆ ಒಂದು ಮಹತ್ತ್ವ ಬಂದರೂ, ಗೌರವ ಹೆಚ್ಚಾಗಿಲ್ಲ---ಕಡಮೆಯಾಗಿದೆ. ಈ ಮೂರು ಕಾರಣಗಳಿಗಾಗಿ ಅಲ್ಲದೆ ಇವೆಲ್ಲಕ್ಕೂ ಹೆಚ್ಚಿನ ಒಂದು ಕಾರಣವಾಗಿ ಶ್ರೀ ಅರವಿಂದರು ವೇದ ರಹಸ್ಯ ಹೇಳಬೇಕಾಯಿತು. ಅದೆಂದರೆ ಅವರಿಗಾದ ಸತ್ಯಸಾಕ್ಷಾತ್ಕಾರ. ಆ ಸಾಕ್ಷಾತ್ಕಾರದ ಬೆಳಕಿನಲ್ಲಿ ಅವರು ವೇದ, ಉಪನಿಷತ್ತು, ಗೀತೆ, ಯೋಗಮಾರ್ಗ, ಭಾರತದ ಭವಿಷ್ಯ, ಸಮಾಜ ವಿಕಾಸಕ್ರಮ, ರಾಜಕೀಯ ವಾದ, ಮಾನವೀಯ ಐಕ್ಯವಾದ ಇವೆಲ್ಲವುಗಳನ್ನು ನೋಡ ಬೇಕಾಯಿತು. ಆಗ ಅವರಿಗೆ ವೇದದಲ್ಲಿ ಆಧ್ಯಾತ್ಮಿಕ ಯೋಗ ಕಂಡಿತು. ಅದನ್ನು ಪ್ರಕಾಶ ಗೊಳಿಸಲು ಮೇಲ್ಕಾಣಿಸಿದ ಅನೇಕ ಪ್ರಬಂಧಗಳನ್ನು ಬರೆದರು. ಅವುಗಳ ಮುಖ್ಯ ಆಶಯ ವನ್ನು ಹೀಗೆ ಸಂಗ್ರಹಿಸಬಹುದು :--

**( i ) ವೇದರಹಸ್ಯ :—** ಇದರಲ್ಲಿ ೨೧ ಪ್ರಕರಣಗಳಿವೆ. ವೇದ ಅನುಭಾವ ಮಾರ್ಗದ ಪ್ರಾರ್ಥನಾಸಂಗ್ರಹ. ಅಲ್ಲಿಯ ಭಾಷೆ ತುಂಬ ಸಾಂಕೇತಿಕವಾಗಿದೆ. ಸಾಂಕೇತಿಕ ಭಾಷೆಯ ಗ್ರಂಥಗಳು ಕಾಣಲು ಲೌಕಿಕಾಚಾರ-ವಿಚಾರಗಳಿಂದ ತುಂಬಿದಂತೆ ಕಂಡರೂ ಅವುಗಳ ಭಾವ ಆಧ್ಯಾತ್ಮಿಕ ಅನುಭವ. ಮನೆ-ಮಾರು, ಮಕ್ಕಳು, ಆಕಳು, ಕುದುರೆ, ಸಂಪತ್ತು, ಆಯುಷ್ಯ ಇವುಗಳನ್ನು ಅಗ್ನಿ, ಸೂರ್ಯ, ವರುಣ, ಇಂದ್ರ, ಸೋಮ, ವಾಯು ಮೊದಲಾದವರಿಗೆ ಪ್ರಾರ್ಥಿಸಿ ಬೇಡಿಕೊಂಡಿದ್ದರೂ ಆ ಪ್ರಾರ್ಥನೆಗಳನ್ನು ಚೆನ್ನಾಗಿ ಅರಿದು, ತಿಳಿದು ಓದಿದರೆ ಅವುಗಳ ಆಧ್ಯಾತ್ಮಿಕತೆ ಪ್ರಕಟವಾಗುವದು. ಲೌಕಿಕ ಪ್ರಾರ್ಥನೆಗಳೆಂದು ಅವುಗಳನ್ನೋದಿದರೆ ಏನೇನೋ ವಿಪರೀತ ಅರ್ಥವಾಗುತ್ತದೆ. ಅವು ಯಾವ ಸಾಮಾಜಿಕ ರಾಜಕೀಯ ವಿಷಯಗಳನ್ನೂ ಹೇಳುತ್ತಿರಲಾರವು. ಅವೂ ಹೊಂದುವದಿಲ್ಲ. ಆಧ್ಯಾತ್ಮಿಕ ಕ್ಕಾದರೂ ಹೊಂದಿಕೆಯಾಗುತ್ತವೆಯೇ ? — ಎಂದರೆ, ಹೌದು— ಆಧ್ಯಾತ್ಮಿಕಕ್ಕೆ ಆದಷ್ಟು ಉಳಿ ದಾವುದಕ್ಕೂ ಹೊಂದಿಕೆಯಾಗುವದಿಲ್ಲ. ಪ್ರಾಚೀನ ಆಚಾರ್ಯರಲ್ಲಿಯೆ, ವೇದಕ್ಕೆ ಆಧ್ಯಾತ್ಮಿಕವೇ ಮುಖ್ಯಾರ್ಥವೆಂದು ಹೇಳುವ ಸಂಪ್ರದಾಯವಿತ್ತು. ವೇದಭಾಷೆಯ ಸಾಂಕೇತಿಕತೆಯ ಮೂಲಕ ಆಧಿಯಾಜ್ಞಿಕ, ಆಧಿದೈವಿಕ, ಆಧಿಭೌತಿಕ ಅರ್ಥಗಳನ್ನೂ ಹೊಂದಿಸಬಹುದಾಗಿತ್ತು. ಆದರೆ ಇಡೀ ವೇದಕ್ಕೆ ಸುಸೂತ್ರವಾಗಿ ಹೀಗೆ ಬರೆದ ಭಾಷ್ಯಗಳೇ ಇಲ್ಲ. ಇದ್ದ ಒಂದು ಸಾಯಣ

ಭಾಷ್ಯವು ಯಾಜ್ಞಿಕ ಸಂಪ್ರದಾಯದ ಅರ್ಥ ಹೊಂದಿಸಲು ಅಪೂರ್ವ ಪ್ರಯತ್ನ ಮಾಡಿದೆ. ಸಾಯಣರೂ ಆಧ್ಯಾತ್ಮಿಕ ಅರ್ಥಕ್ಕೆ ವಿರೋಧಿಗಳೇನೂ ಅಲ್ಲ. ಶ್ರೀ ಮಧ್ವಾಚಾರ್ಯರು ವೇದಕ್ಕೆ ಮೂರು ಅರ್ಥಗಳೆಂದರು. ಆ ಮಾರ್ಗವಾಗಿ ಕರ್ನಾಟಕದಲ್ಲಿ ಅನೇಕ ಭಾಷ್ಯಗಳಾದವು. ಆದರೂ ಆಧ್ಯಾತ್ಮಿಕ ಅರ್ಥವೇ ಮುಖ್ಯವೆಂದೂ, ಅದರಲ್ಲಿ ಸಾಧನಾಯೋಗವೂ ಅಡಕವಾಗಿದೆಯೆಂದೂ, ಅದನ್ನೇ ಉಪನಿಷತ್ತು, ಗೀತೆ, ಇತಿಹಾಸಪುರಾಣಗಳು ಗರ್ಭೀಕರಿಸಿವೆಯೆಂದೂ ಶ್ರೀ ಅರವಿಂದರು ಪ್ರಚಾರಪಡಿಸಲು ಪ್ರಯತ್ನಿಸಿರುವಂತೆ ಬೇರೆ ಪ್ರಯತ್ನ ಭೂತಲದಲ್ಲಾಗಿಲ್ಲ ಎಂದರೆ ಅತಿಶಯೋಕ್ತಿಯಂತೆ ತೋರಿದರೂ ಅದು ಸತ್ಯವಾದ ಮಾತು.

ಯೋಗಾಭ್ಯಾಸ ಮಾಡುತ್ತಿರುವಾಗಲೆ ತಮಗೆ ಇಳಾ, ಸರಸ್ವತಿ, ಸರಮಾ ಎಂಬ ಸ್ತ್ರೀ ದೈವತಗಳು—ಬುದ್ಧಿಯೋಗದ ನಾಲ್ಕು ಶಕ್ತಿಗಳಲ್ಲಿ ಮೂರಾದ revelation, inspiration, intuition, ಎಂದರೆ ಸ್ವಪ್ರಕಾಶ, ಅಂತಃಪ್ರೇರಣೆ, ಅಂತರ್ಜ್ಞಾನ ಎಂದು ಹೊಳೆಯಿತು ಎಂಬುದಾಗಿ ಶ್ರೀ ಅರವಿಂದರು 'ಆಧ್ಯಾತ್ಮಿಕಯೋಗವಾದದ ಅಸ್ತಿವಾರ' ಎಂಬ ೫ನೆಯ ಪ್ರಕರಣದಲ್ಲಿ ಹೇಳುತ್ತಾರೆ. ಹೀಗೆಯೆ 'ಮತಿ', 'ಋತ', 'ಮನೀಷಾ', 'ಕವಿ', 'ವಿಪ್ರ', 'ಧೀ,, 'ರಯಿ', 'ಘೃತ', 'ಗೋ', 'ಅಶ್ವ' ಮೊದಲಾದವುಗಳಿಗೆ ಯೌಗಿಕವೇ ಮುಖ್ಯಾರ್ಥವೆಂದು ತೋರಿದುದನ್ನು ತಿಳಿಸಿ,—ವೇದವು ಆರ್ಯದ್ರಾವಿಡರ ಯುದ್ಧದ ಕಥಯೆಂಬುದನ್ನು ನಂಬಲು ಸಾಧ್ಯವಿಲ್ಲ ಎಂದು ತಿಳಿಸುತ್ತಾರೆ. ವೇದದಲ್ಲ ಬಳಸಿದ ಪುರಾಣ ಕಥೆಗಳ ಹಿಂದೆ ಜ್ಯೋತಿರ್ವಿಷಯಕ ಅಥವಾ ಲೌಕಿಕಾಖ್ಯಾಯಿಕ ವಿಷಯಗಳು ಮೂಲದಲ್ಲಿರಲಾರವೆಂದಲ್ಲ, ಆದರೆ ಋಷಿಗಳ ಮಂತ್ರಗಳಲ್ಲಿ ಅವುಗಳ ಆ ರೂಪ ಆಧ್ಯಾತ್ಮಿಕದಲ್ಲಿ ಪರ್ಯವಸಾನಗೊಂಡಿದೆಯೆಂದು ಅವರ ಮತ. ಈ ರೀತಿಯಾಗಿ ಅವರು ಅಗ್ನಿ, ಇಂದ್ರ, ಸರಸ್ವತಿ, ಉಷಾ, ಗೋವುಗಳು, ಸರಮಾ, ಅಂಗಿರಸ, ವೃತ್ರ--ಇವರ ರಹಸ್ಯವನ್ನು ಬಯಲಿಗಿಟ್ಟು ಇವು ಅಧ್ಯಾತ್ಮಸಾಧನೆಯ ಯೋಗಮಾರ್ಗವನ್ನು ಸಾಂಕೇತಿಕವಾಗಿ ರೂಪುಗೊಳಿಸುವವೆಂದು ತಮಗೆ ಕಂಡ ಮಾತುಗಳಿಂದ ಸೂಚನಾಪ್ರಾಯವಾಗಿ ಸಿದ್ಧಗೊಳಿಸಿದ್ದಾರೆ. ಜ್ಞಾನಶಕ್ತಿ-ಅಜ್ಞಾನ ವ್ಯಕ್ತಿಗಳ ಸಂಗ್ರಾಮವನ್ನು ವೇದ ಪ್ರಕಟಿಸುವದೆಂದು ಅವರ ಅಭಿಪ್ರಾಯ. ಜೀವನ ಒಂದು ಯಜ್ಞ, ಅಂತರ್ಯಾಗ. ಋತಲೋಕದ ಪ್ರಯಾಣ. ಈ ಹಾದಿಯಲ್ಲಿ ಪಣಿ, ವೃತ್ರ, ಶಂಬರ, ನಮುಚಿ-ಆದಿದೈತ್ಯ-ದಾನವ-ಅಸುರರ ಕಾಟ. ಜ್ಞಾನರೂಪದ ಆಕಳನ್ನು ಅವರು ಕದ್ದೊಯ್ಯುತ್ತಾರೆ. ತಮ್ಮ ಗವಿಗಳಲ್ಲಿ ಅಡಗಿಸಿಡುತ್ತಾರೆ. ಬೆಳಕಿಗೆ ಅಡ್ಡ ಬರುತ್ತಾರೆ. ನೀರನ್ನು ಕಟ್ಟಿಬಿಡುತ್ತಾರೆ. ದುರ್ದಿನ ತರುತ್ತಾರೆ. ಈ ಸಂಗ್ರಾಮದಲ್ಲಿ ದೇವತೆಗಳು ಸಹಾಯವಾಗುತ್ತಾರೆ. ಈಶಸಂಕಲ್ಪದ ಅಗ್ನಿಯೇ ನಮ್ಮ ಪುರೋಹಿತ, ದೇವದೂತ. ಬೃಹಸ್ಪತಿ ನಮ್ಮ ಪ್ರಾರ್ಥನಾಕಾರ. ಸತ್ಯಪ್ರಕಾಶದ ಘೃತ , ದೈವಿಕಾನಂದದ ಸೋಮವೂ ಯಜ್ಞಕ್ಕೆ ಬೇಕಾದ ಆತ್ಮಿಕ ಪದಾರ್ಥಗಳು. ದಸ್ಯುಗಳಿಗೆ ಈ ಜ್ಞಾನಯಜ್ಞ ಬೇಕಾಗಿಲ್ಲ ಇಷ್ಟೇ ಅಲ್ಲ, ಅದಕ್ಕೆ ಅವರು ಅಡ್ಡಿ ತರುತ್ತಾರೆ. ಈ ಯಜ್ಞೋಪಾಸಕನೇ ಆರ್ಯ. ಇದು ವೇದದ ದರ್ಶನ.

ಇಲ್ಲಿಯ ದೇವತಾಪ್ರಪಂಚವೂ ಸುಸಂಬದ್ಧವಾಗಿದೆ. ಇಂದ್ರನು ದಿವ್ಯ ಪ್ರಕಾಶ ಕೊಡುತ್ತಾನೆ. ಅದಕ್ಕೆ ಅಡ್ಡಿಯಾಗುವ ವೃತ್ರನನ್ನು ವಜ್ರದಿಂದ ಹೊಡೆಯುತ್ತಾನೆ. ಸಜ್ಞಾ ಸಂಕಲ್ಪವೆ ಅಗ್ನಿ. ನಮ್ಮ ಕಾಮಸಂಕಲ್ಪಗಳಲ್ಲಿ ಬೆಂಕಿಗಿಂತ ಹೊಗೆ ಹೆಚ್ಚು, ಅದು ಅಜ್ಞಾನದ ಮಾರ್ಗ. ಸೂರ್ಯಸವಿತೃವು ನಿರ್ಮಾಪಕನೂ ಜ್ಞಾನಪೋಷಕನೂ ಆಗಿದ್ದಾನೆ.

ಆನಂದೋಪಭೋಗಕ್ಕೆ ಭಗದೇವತೆಯು ಅಭಿಮಾನಿ, ಪ್ರಾಣಶಕ್ತಿಗಳಿಗೆ ವಾಯುವು ಅಧಿಪತಿ, ಬೃಹಸ್ಪತಿಯು ಆತ್ಮಶಕ್ತಿ, ಆನಂದದ ಅಧಿಪತಿಗಳು ಅಶ್ವಿನೀದೇವತೆಗಳು; ಋಭುಗಳು ಅಮರತೆಯ ಶಿಲ್ಪಿಗರು, ವಿಶ್ವವ್ಯಾಪಕನಾದ ದೇವ ವಿಷ್ಣು, ಅಮರತೆಗೂ ಆನಂದಕ್ಕೂ ಸೋಮನು ರಾಜ—ಹೀಗಿದೆ ಈ ದೇವತೆಗಳ ಬಳಗ. ಇದರ ವಿವೇಚನೆಯನ್ನು 'ಆಯ್ದ ಸೂಕ್ತಗಳ'ಲ್ಲಿ ಶ್ರೀ ಅರವಿಂದರು ಭಾಷ್ಯಸಹಿತವಾಗಿ ಮಾಡಿರುವರು; ಸಾಯಣಭಾಷ್ಯದ ಯಾಜ್ಞಿಕ ಮಾರ್ಗವನ್ನು ಹಿಡಿದರೆ ಈ ಮಂತ್ರಗಳಿಗಾಗುವ ಅರಕಳಿ-ಮುರಕಳಿ ಅರ್ಥದ ರೀತಿಯನ್ನು ಅಲ್ಲಲ್ಲಿ ಎತ್ತಿ ತೋರಿಸಿರುವರು.

'ಅತ್ರಿಸೂಕ್ತ' ಗಳನ್ನು ಕುರಿತು ಮೂರನೆಯ ಲೇಖಮಾಲೆಯನ್ನು ಪ್ರಾರಂಭಿಸುವಾಗ 'To translate the Veda is to border upon an attempt at the impossible' (ವೇದವನ್ನು ಭಾಷಾಂತರಿಸುವುದು ಅಸಾಧ್ಯ ಪ್ರಯತ್ನ) —ಎಂದು ಶ್ರೀ ಅರವಿಂದರೇ ಸಾರಿದ್ದಾರೆ. ಹೊರಗೆ ಕಾಣಲಿಕ್ಕೆ ವೇದ ಯಾಜ್ಞಿಕವಿಧಿಗೆ ಉಪಯುಕ್ತವಾದ ಮಂತ್ರಗಳಂತಿವೆ; ಒಳಗೋ ಅಧ್ಯಾತ್ಮ ಸೂತ್ರ. ಇಲ್ಲಿಯ ಯೌಗಿಕ ಮಾನಸಶಾಸ್ತ್ರಕ್ಕೆ ಯಾವ ಎಲ್ಲೆಯೂ ಇಲ್ಲ. ಅದು ದೇಶ-ಕಾಲ-ಮತಾತೀತ. ಬೆಳಕಿನ ಅನುಭವವನ್ನು ಕುರುಡರಿಗೆ ತಿಳಿಸುವದು ಹೇಗೆ ಕಷ್ಟವೋ ಹಾಗೆ ಅಂತರ್ಜ್ಞಾನದ ಭಾವಪ್ರಪಂಚವನ್ನು ಅಜ್ಞಾನಿಗಳ ಮಾತೆಂಬುವಂತೆ ಪ್ರಪಂಚಿಸುವದು ತೊಡಕಿನ ಕೆಲಸ. ಬೆಳಕಿನ ಮಾತು ಬೆಡಗಿನ ಮಾತಾಗುವವು. ಒಡಪ-ಒಗಟಗಳಂತೆ ಅರ್ಥವಿಹೀನ ಚಮತ್ಕಾರಗಳಿಂದ ತುಂಬಿದಂತೆ ತೋರುವವು. ಅಂತೆಯೆ ಅನೇಕ ಅರ್ಥಗಳಿಗೂ ಅನರ್ಥಗಳಿಗೂ ಕಾರಣವಾಗುವವು. ಅನುಭವದ ಆಳ, ಎತ್ತರ, ವಿಸ್ತಾರ, ಪದರುಪದರು, ಬಹುರೂಪಗಳೊಡನೆ ಭಾಷೆಯ ಸಂಕೇತ, ದ್ವ್ಯರ್ಥ, ಅಲಂಕಾರ, ಗೂಢತೆ, ಬೆಡಗು ಕೂಡಿದರೆ ಭಾವಾರ್ಥ ಬಿಡಿಸಿಕೊಳ್ಳುವದು ಆಗದ ಕೆಲಸ. ಅದಲ್ಲದೆ ಋಗ್ವೇದ ಅತಿಪ್ರಾಚೀನ. ಅಂದಿನ ಗೀರ್ವಾಣ ಭಾಷಾ ಇಂದಿನ ಸಂಸ್ಕೃತದಿಂದ ಬೇರೆ; ನಮ್ಮ ಪೂರ್ವದ ಹಳಗನ್ನಡಕ್ಕಿಂತಲೂ ಗಡಚು. ಆದರ ಅನುಭವದ ಸೂತ್ರ ಸಿಕ್ಕವರಿಗೆ, ಯೋಗದ ಜಾಡು ಹತ್ತಿದವರಿಗೆ ಅಷ್ಟು ಕಷ್ಟವಲ್ಲ.

ವೇದ ದಿವ್ಯಾನುಭವದ ಸೂಕ್ತಿಸಂಗ್ರಹ. ಇದರಲ್ಲಿ ಆ ಅನುಭವಿಗಳ ಸಿದ್ಧಾಂತ ಅಡಕವಾಗಿದೆ---ಹಾಲಿನಲ್ಲಿಯ ಬೆಣ್ಣೆಯಂತೆ ಅದನ್ನು ಶ್ರೀ ಅರವಿಂದರು ಮಥಿಸಿ ತೆಗೆದು 'The Doctrine of Mystics' ಎಂಬ ಪ್ರಕರಣದಲ್ಲಿ ಕೊಟ್ಟಿದ್ದಾರೆ. ಅದನ್ನೆ ಸಂಗ್ರಹವಾಗಿ 'Hymns to the Mystic Fire' ಗ್ರಂಥದ ಮುನ್ನುಡಿಯಲ್ಲೂ ಸೇರಿಸಿದ್ದಾರೆ. ಅದರ ಸಾರಾಂಶ ಹೀಗಿದೆ:- - ಸೃಷ್ಟಿಮೂಲಕ್ಕೆ ಒಂದು ತತ್ತ್ವವಿದೆ. ಅದು ತತ್, ಸತ್, ದೇವ—ಏನೂ ಎನ್ನಬಹುದು. ಅದರ ವಿವಿಧ ಮುಖಗಳು, ಶಕ್ತಿಗಳು, ರೂಪಗಳು—ಅಗ್ನಿ, ವರುಣ, ಯಮ, ಪೂಷನ್, ರುದ್ರ, ವಿಷ್ಣು, ಪ್ರಜಾಪತಿ, ಹಿರಣ್ಯಗರ್ಭ, ಸೂರ್ಯ, ಮಿತ್ರ, ಭಗ, ಸೋಮ. ಮಾನವನ ಆತ್ಮ-ಗರುಡ,— ಹಂಸ ಆ ಅಮೃತತತ್ತ್ವಕ್ಕೆ ಹಾರುತ್ತದೆ, ಹಾರಯಿಸುತ್ತದೆ. ಪುರಾಣಗಳಿಂದ ತೀರ ಬಳಕೆಯಾಗಿರುವ ಸಪ್ತಲೋಕ ಕಲ್ಪನೆ ವೈದಿಕ ವಿಚಾರಸರಣಿಯ ಬೆಂಬಲಕ್ಕಿದೆ. ಸಚ್ಚಿದಾನಂದದ ಸತ್ಯ-ತಪೋ-ಜನ-ಲೋಕಗಳು ಒಕ್ಕಟ್ಟಾಗಿವೆ. ಇತ ಕೆಳಗೆ ಭೂಲೋಕ, ಮೇಲೆ ಆಗುಹೋಗಿನ ಭುವರ್ಲೋಕ, ಆಮೇಲೆ ಬೆಳಕಿನ ಸ್ವರ್ಲೋಕ.

ಈ ಮೂರಕ್ಕೂ ಮೇಲಿನ ಸಚ್ಚಿದಾನಂದಕ್ಕೂ ಸಂಗಮವಾದ ಮಹೋಲೋಕ ಇಲ್ಲವೆ ವಿಜ್ಞಾನ ಲೋಕ— ಇಂತಿವೆ ಈ ಲೋಕಸೋಪಾನ. ಮಾನವನ ಆತ್ಮ ತನ್ನ ಚೈತ್ಯಶಕ್ತಿಗಳಿಂದ ಇವುಗಳನ್ನೇರಬಹುದು. ಅಲ್ಲಿ ಜನ್ಮ ಪಡೆಯಬಹುದು. ಅಲ್ಲಿಯ ತತ್ತ್ವಗಳನ್ನು ಮೈಗೂಡಿಸಿ ಕೊಂಡು ಬರಬಹುದು. ಪಂಚಕೋಶಗಳನ್ನೆ ಪಂಚಜನ್ಮಗಳಾಗಿ ತೆರೆಯಬಹುದು. ಮಾನವ ಸಾಮಾನ್ಯರು ಮನೋಮಯ ಕೋಶದವರು. ವಿಜ್ಞಾನಕೋಶದಲ್ಲಿ ಪ್ರತಿಷ್ಠಯಾದರೆ ಅತ್ತ ಆನಂದದ ಸಂತತ ಸಂಪರ್ಕ, ಇತ್ತ ಮನದ ಮುಖವಾಗಿ ದೇಹಪರ್ಯಂತ ಅನುಭವ ಸಾಧ್ಯ ವಾಗುವದು. ವಿಜ್ಞಾನದ ಮಹೋಲೋಕವನ್ನೆ 'ಋತಂ-ಸತ್ಯಂ-ಬೃಹತ್' ಎಂದು ವೇದದ ಋಷಿಗಳು ಕಂಡರು; ಋತಕ್ಕೆ ಮಾರುಹೋದರು. ಅದರೊಡನೆ ಸಾಮರಸ್ಯವನ್ನು ಮಾಡುವದೇ ವೇದದ ಕರ್ಮಯೋಗವಾಯಿತು ಈ ಮಾತೇ ಮರೆಮಾಚಿ, ಯಾವುದೋ ಲೌಕಿಕ ಯಜ್ಞಪ್ರಪಂಚ ಅದೃಷ್ಟ ಸ್ವರ್ಗಸಾಧನವಾಗಿ ಬೆಳೆದುಕೊಂಡಿತು. ಇದರಿಂದಲೆ ಉಪನಿಷತ್ತಿನ ಮಾರ್ಗವು ವೇದಾಂತವೆನಿಸಿಕೊಂಡು ಯಜ್ಞದ ಕರ್ಮಮಾರ್ಗವು ಕಾಮೋಪ ಭೋಗ ಬೇಡುವ ಪಶುಯಜ್ಞದ ವೇದವಾದವಾಯಿತು. ಈ ತಪ್ಪು ವೇದವಾದದೊಡನೆ ಉಪನಿಷತ್ತುಗಳೂ ಗೀತೆಯೂ ಹೋರಾಡಿವೆ. ಆದರ ಜ್ಞಾನಗರ್ಭಿತವಾದ ಕರ್ಮಯೋಗ ದಲ್ಲಿ ಭಕ್ತಿಭಾವವನ್ನು ನೆಲೆಗೊಳಿಸಲು ಹವಣಿಸಿವೆ.

'ಪುರುಷ ಏವೇದಂ ಸರ್ವಂ' ಎಂಬುದು ವೇದಸೂಕ್ತಿ. ಆ ದಿವ್ಯ ಪುರುಷನ ಬೆಳಕಿನ ಈ ತುದಿ ಅಗ್ನಿ, ಆ ತುದಿ ಶಕ್ತಿಮಂತ ಇಂದ್ರ. ಸತ್ಯದ ಆತ್ಮ ಸೂರ್ಯ. ಈ ಸೂರ್ಯನ ಆಕಾಶವೇ ವರುಣ, ಅವನ ಮೈತ್ರಿಗುಣವೆ ಮಿತ್ರ, ಅರ್ಯಮನು ಆರ್ಯಗುಣದ ತಂದೆ; ಭಗನು ಸದ್ಭೋಗದ ನೆಲೆ. ಸೋಮ ಆನಂದದ ನಿಲುವು. ಅಶ್ವಿನೀದೇವತೆಗಳೂ ಉಷೆಯೂ ಸೋಮನ ಸಹಾಯಕರು. ಇಂದ್ರನಿಗೆ ಮರುತರ ದಂಡೂ ಋಭುಗಳೆಂಬ ದಿವ್ಯ ಶಿಲ್ಪಿಗಳೂ ಸಂಗಡಿಗರು. ಇದಲ್ಲದೆ ಶಕ್ತಿಮಾತೆಯರಿದ್ದಾರೆ. ದೇವತಾಮಯಿ ಅದಿತಿಯು ಆದಿತ್ಯರ ತಾಯಿ. ದಿವ್ಯಸತ್ಯವಾದ ಋತದ ಪಂಚಪ್ರಾಣಗಳು: ೧. ಮಹಿ ಅಥವಾ ಭಾರತಿ, ದಿವ್ಯ ಶಬ್ದಶಕ್ತಿ; ೨. ಇಳೆಯು ಅದರ ದರ್ಶನ ಮಾಡಿಸುವಾಕೆ, ೩. ಸರಸ್ವತಿಯು ಸ್ಫೂರ್ತಿಯ ಝರಿ; ೪. ಸರಮಾ ಎಂಬ ಶುನಿಯು ಮೂಸಿ ಮೂಲ ಗುರುತಿಸುವ ಅಂತರ್ಜ್ಞಾನಶಕ್ತಿ, ಕೊನೆಗೆ ೫. ದಕ್ಷಿಣಾ ಎಂಬುದು ದಿವ್ಯ ವಿವೇಕ.

ಈ ಜ್ಞಾನಪ್ರಾಪ್ತಿಯ ಕುರುಕ್ಷೇತ್ರ ದ್ಯಾವಾಪೃಥಿವಿ. ಅವರು ಭೌತಿಕಕ್ಕೂ ಅಧ್ಯಾತ್ಮಕ್ಕೂ ಆಧಾರವಾಗುವರು. ವಾಯುವು ಅಂತರಿಕ್ಷದಲ್ಲಿದ್ದು ಪ್ರಾಣ-ಶಕ್ತಿಗಳ ಸಂಗಮವಾಗುವನು. ಮೂರು ಲೋಕಗಳಲ್ಲೂ ಈ ಸಂಗ್ರಾಮ ಸಾಗುವದು. ಎಲ್ಲೂ ಗೆಲ್ಲಬೇಕು. ಈ ವಿಕಾಸ ವನ್ನು ಬ್ರಹ್ಮಣಸ್ಪತಿ(ಬ್ರಹ್ಮಾ), ರುದ್ರ, ವಿಷ್ಣುಗಳು ಪ್ರಚೋದಿಸುವರು. ಪುರಾಣದಲ್ಲಿ ಈ ದೇವತೆಗಳ ಮಾಹಾತ್ಮ್ಯವೇ ಹೆಚ್ಚಾಗಿ ಇದೆ. ಇತಿಹಾಸ ಪುರಾಣಗಳೂ ವೇದ-ರಹಸ್ಯವನ್ನೆ ಒಳಗೊಂಡಿವೆ ಎಂದು ಸಾರುವವು. ಇಂತು ವೇದಗಳಲ್ಲೇನು, ಅವರಿಂದ ಉಪಜೀವನ ಮಾಡುವ—ಆ ಪ್ರಪಂಚವನ್ನೇ ವಿಸ್ತರಿಸುವ ಉಳಿದ ಸಂಸ್ಕೃತ ವಾಙ್ಮಯದಲ್ಲೇನು, ಲೌಕಿಕ ವಾಗಿ ಕಾಣುವ ಘಟನೆಗಳ ಹಿಂದೆ ಅಲೌಕಿಕದ ಜ್ಞಾನವನ್ನು ಅಡಗಿಸಿ ಇಡಲಾಗಿದೆ. ಬಾಹ್ಯ ಪ್ರಕೃತಿಯನ್ನು ಅಂತಃಪ್ರಕೃತಿಯ ಆಟವನ್ನು ರೂಪಿಸಲು ಉಪಯೋಗಿಸಲಾಗಿದೆ. ವೇದ

ದಿವ್ಯ ಜ್ಞಾನದ ಅನಂತ ಭಾವಗಳ ಮಹಾಸಾಗರ. ಅದರ ಸಿದ್ಧಿಯ ಯೋಗವನ್ನೂ ಅದು ಹೇಳುತ್ತದೆ.

ಈ ಅತ್ರಿಸೂಕ್ತಗಳಲ್ಲಿಯೇ ದಿವ್ಯಪ್ರಕಾಶದ ಅಧಿಪತಿಗಳನ್ನು, ಪಾಲಕರನ್ನು ಕುರಿತು ಸೂಚಿಸಿದ ರಹಸ್ಯಗಳನ್ನು '**ಆರ್ಯ**'ದ ಮೂರನೆಯ ಸಂಪುಟದಲ್ಲಿ ಶ್ರೀ ಅರವಿಂದರು ಸಂಗ್ರಹಿಸಿದ್ದಾರೆ. ಸೂರ್ಯನು ಆ ಪ್ರಕಾಶದ ಋಷಿ-ಕವಿ-ಕಣ್ಣು; ಉಷ ಅಲ್ಲಿಯ ಪ್ರಕಾಶ ತೆರೆಯುವ ನಟಿ; ಪೂಷನ್ ಪ್ರಕಾಶಪೋಷಕ; ಸವಿತನು ಸೃಷ್ಟಿಕರ್ತ ಈ ಬೆಳಕಿಗೆ. ಇದರ ಯೋಗವನ್ನು ಸಾಧಿಸಲು ಸಹಾಯಕರಾಗುವವರು ನಾಲ್ಕು ರಾಜರು- ವರುಣ, ಮಿತ್ರ, ಅರ್ಯಮಾ, ಭಗ.

ಇವರನ್ನೆ ಕುರಿತು ಶ್ರೀ ಅರವಿಂದರೆ 'Yoga and Skill in Works' ('ಯೋಗಃ ಕರ್ಮಸು ಕೌಶಲಂ') ಎಂಬ ಪ್ರಬಂಧದಲ್ಲಿ "By Yoga Varuna is born in us—a vast sky of spiritual living.... into that wideness Mitra rises up, Lord of Light and Love.... by this wideness and harmony Aryaman appears in us—the divine in its illumined power.... by the three comes the indwelling Bhaga—the Divine in its pure bliss"— ಎಂದು ಬರೆದಿದ್ದಾರೆ. (Arya Vol. II, page 724.) ವರುಣನ ಯೋಗನ್ನೈತಿಕ ಆಕಾಶದಲ್ಲಿ ಪ್ರೀತಿಪ್ರಕಾಶಗಳ ಮಿತ್ರನ ಉದಯವಾಗುತ್ತದೆ; ಅರ್ಯಮನ ಶಕ್ತಿಯು ನಮ್ಮಲ್ಲಿ ಮೂಡಿ ಈ ಮೂರರ ಕೂಡಲ ಸಂಗಮದಲ್ಲಿ ದಿವ್ಯಾನಂದದ ಭಗನ ಗರ್ಭ ನಿಲ್ಲುವದಂತೆ. 'This Divine Birth shall be the son of our works' – ಈ ದಿವ್ಯ ಜನ್ಮಪ್ರಾಪ್ತಿಯೇ ನಮ್ಮ ಕರ್ಮಯೋಗದ ಫಲ. ಶ್ರೀ ಅರವಿಂದರು ವೇದರಹಸ್ಯದಲ್ಲಿ ಪ್ರಕಟಿಸಿದ ದಿವ್ಯ ಯೋಗದ ಭಗವಂತನನ್ನು ನೆನೆಯುವ ಮಂತ್ರದಿಂದ ಈ ಮೊದಲ ಲೇಖನವನ್ನು ಕೊನೆಗೊಳಿಸುವಾ.

ಓಂ ತತ್ ಸವಿತುರ್ವೃಣೀಮಹೇ
ವಯಂ ದೇವಸ್ಯ ಭೋಜನಮ್ ।
ಶ್ರೇಷ್ಠಂ ಸರ್ವಧಾತಮಂ
ತುರಂ ಭಗಸ್ಯ ಧೀಮಹಿ ||

ಸವಿತಾದೇವನ ಆ ಆನಂದಭೋಗವನ್ನು ನಾವು ವರಿಸುತ್ತೇವೆ. ಅದು ಶ್ರೇಯಸ್ಸಿನ ತುದಿ; ಎಲ್ಲರನ್ನು ಸರಿಯಾಗಿ ಹೊಂದಿಸುವ ಶ್ರೇಷ್ಠ ರೀತಿ; ಜೀವದ ಕೊನೆಯ (ನಾಲ್ಕನೆಯ) ಗುರಿ-- ನಮ್ಮ ಬುದ್ಧಿಯಲ್ಲಿ ಈ ಭಗವಂತನ ಧ್ಯಾನ ಮಾಡುತ್ತೇವೆ.

--ದತ್ತ ರಾಮ ಬೇಂದ್ರೆ

# ಈಶೋಪನಿಷತ್ತು

## ಪ್ರಾಸ್ತಾವಿಕ

ಈಶೋಪನಿಷತ್ತು ಉಪನಿಷದ್-ವಾಙ್ಮಯದಲ್ಲಿ ಬಹಳ ಚಿಕ್ಕದೂ ಹಳೆಯದೂ ಆದ ಮಂತ್ರಸಮೂಹವಾಗಿದೆ. ಭಾರತೀಯ ಸಂಸ್ಕೃತಿಯ ಸಮಗ್ರ ದರ್ಶನವನ್ನು ಸಣ್ಣ ಸ್ವರೂಪದಲ್ಲಿಯೂ ಅದು ಮಾಡಿಕೊಡುತ್ತದೆ. ಅದು ಆಕಾರದಲ್ಲಿ ಕಿರಿದು, ಆಲೋಚನೆಯಲ್ಲಿ ಹಿರಿದು. ಕಾಲದ ನೋಟದಲ್ಲಿ ಹಳೆಯದು, ತಿಳಿವಿನ ಬಗೆಯಲ್ಲಿ ನಿತ್ಯವೂ ಹೊಸದು ಅದು ಕೃತಿಯಲ್ಲ, ಶ್ರುತಿ ಪರಮ ಋಷಿಗಳ ನಾಲಿಗೆಯ ಮೇಲೆ ನಾಟ್ಯವಾಡಿದ ದೈವವಾಣಿ. ಅದು ಬರಿ ಶಬ್ದಾರ್ಥಗಳ ಸಾಲಲ್ಲ, ಅಂತರ್ದೃಷ್ಟಿಯನ್ನು ತೆರೆಯಿಸಿ ಚೈತನ್ಯವನ್ನು ಸಮಗ್ರ ಜೀವನದತ್ತ ಹೊರಳಿಸಿ ಕೃತುಪ್ರೇರಕವಾಗುವ ಮಂತ್ರಪುಂಜ. ಅದಕ್ಕಿರುವ ಸಂಪೂರ್ಣವಾದ ಅರ್ಥವನ್ನು ಋಷಿಗಳೂ ಸಿದ್ಧರೂ ಅರಿಯಬಲ್ಲರು ಅವರೇ ಅಧಿಕಾರಿಗಳಾದ ಆಚಾರ್ಯರು. ನಾವು ಅರಿಯುವುದೆಲ್ಲ ಅರೆಯಾದುದು. ನಾವು ಬೆಳದಂತೆ ಅದರಲ್ಲಿ ಅಡಗಿದ ಅರ್ಥವೂ ಸಮಗ್ರ ದರ್ಶನವೂ ನಮ್ಮಲ್ಲಿ ಬೆಳೆಯುತ್ತದೆ. ಪರಿಮಿತ ಮತಿಗೆ ಅದು ಅರ್ಥರಹಿತ ಇಲ್ಲವೆ ವಿರೋಧಸಹಿತ ಎಂದು ತೋರುವುದು. ತೆರೆದ ಕಣ್ಣಿಗೆ ಹಾಗೂ ಮಾಗಿದ ಬಗೆಗೆ ಅದು ಅರ್ಥಪೂರ್ಣ ಹಾಗೂ ಸುಸಂಬದ್ಧವೆಂದು ತಿಳಿಯುವುದು.

ಈ ಲೇಖನದಲ್ಲಿ ಮಹರ್ಷಿಗಳಾದ ಶ್ರೀ ಅರವಿಂದರು ಈಶೋಪನಿಷತ್ತಿಗೆ ಬರೆದ ಭಾಷ್ಯದ ವಿವರಣೆಯನ್ನು ಕೊಡಲಾಗುವುದು. ಅವಕ್ಕೆ ಭಾಷ್ಯ ಬರೆಯಲು ಹಿಂದಿನ ಮತಾಚಾರ್ಯರಷ್ಟೇ ಅವರು ಅಧಿಕಾರಿಗಳಾಗಿದ್ದಾರೆ. ಮತಾಚಾರ್ಯರ ಹಾಗೆ ಶ್ರೀ ಅರವಿಂದರು ಈಶೋಪನಿಷತ್ತಿನಲ್ಲಿ ತಮ್ಮ ದರ್ಶನವನ್ನು ಕಂಡು ಅದನ್ನು ಬಿಡಿಬಿಡಿಯಾಗಿ ವಿಂಗಡಿಸಿ ತೋರಿದ್ದಾರೆ. ಅದರಲ್ಲಿ ಮೂರು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಪ್ರತಿ ಪದ್ಯದ ಅನುವಾದ ಮತ್ತು ವಿವರಣೆಯುಳ್ಳ ಟಿಪ್ಪಣಿಗಳಿವೆ. ಎರಡನೆಯ ಭಾಗದಲ್ಲಿ ಈ ಉಪನಿಷತ್ತಿನ ಯೋಜನೆಯಲ್ಲಿಪ್ಪ ನಾಲ್ಕು ಚಲನಗಳ ವಿಂಗಡಣೆ ಹಾಗೂ ವಿವರಣೆ ಇರುತ್ತದೆ. ಮೂರನೆಯ ಭಾಗದಲ್ಲಿ ಉಪಸಂಹಾರ ಮತ್ತು ಸಾರಾಂಶವಿರುತ್ತದೆ. ಮೂರನೆಯ ಭಾಗದ ಅನುವಾದವು ಜೀವನ ಪತ್ರಿಕೆಯ ಅರವಿಂದ ಸಂಚಿಕೆಯಲ್ಲಿ ಪ್ರಕಟವಾಗಿದೆ ಮೊದಲಿನೆರಡು ಭಾಗಗಳಲ್ಲಿ ಮೊದಲನೆಯವನ್ನು ಮಾತ್ರ ಈಗ ಎತ್ತಿಕೊಂಡಿದೆ. ಇದನ್ನು ಬರೆಯುವಾಗ ಈಶೋಪನಿಷತ್ತಿನ ಮೂಲಮಂತ್ರ, ಆಮೇಲೆ ಶ್ರೀ ಶಂಕರಾಚಾರ್ಯರ ಮತ್ತು ಶ್ರೀ ಮಧ್ವಾಚಾರ್ಯರ ಅನುವಾದ ಹಾಗೂ ವಿವರಣೆ, ತರುವಾಯ ಶ್ರೀ ಅರವಿಂದರ ಅನುವಾದ ಹಾಗೂ ವಿವರಣೆ ಈ ಕ್ರಮವನ್ನು ಅನುಸರಿಸಬೇಕೆಂದು ಮಾಡಿದೆ. ಪೂರ್ವದ ಹಲವು ಮತಾಚಾರ್ಯರ ಭಾಷ್ಯವನ್ನು

ಮತ್ತು ಶ್ರೀ ಅರವಿಂದರ ಭಾಷ್ಯವನ್ನು ಜಿಜ್ಞಾಸುಗಳು ತುಲನಾತ್ಮಕವಾಗಿ ನೋಡಲಿ ಎಂಬುದು ಇದರ ಉದ್ದೇಶ. ಅವುಗಳ ತುಲನಾತ್ಮಕವಾದ ಪರೀಕ್ಷಣೆಯನ್ನು ಮಾಡಿ ಯಾವುದು ಗ್ರಾಹ್ಯ ಎಂಬ ರೀತಿಯ ಚರ್ಚೆ ಮಾಡುವುದು ನಮ್ಮ ಉದ್ದೇಶವಲ್ಲ. ಅದು ಸಂದರ್ಭೋಚಿತವೂ ಅಲ್ಲ, ಅಧಿಕಾರಕ್ಕೆ ಅನುಗುಣವೂ ಅಲ್ಲ. ಶ್ರೀ ರಾಮಾನುಜಾಚಾರ್ಯರು ಈ ಉಪನಿಷತ್ತಿನ ಮೇಲೆ ಭಾಷ್ಯವನ್ನು ಬರೆದಿಲ್ಲ. ಇತರ ಉಪನಿಷತ್ತುಗಳ ಮೇಲೆಯೂ ಬರೆದಿಲ್ಲ. ತರುವಾಯದ ಕಾಲದಲ್ಲಿ ಅವರ ಮತಪರಂಪರೆಯಲ್ಲಿಯ ನಾರಾಯಣ, ರಂಗರಾಮಾನುಜ ಮುಂತಾದವರು ಉಪನಿಷದ್ಭಾಷ್ಯಗಳನ್ನು ಬರೆದಿದ್ದಾರೆ. ಶ್ರೀ ರಾಮಾನುಜರ ಸ್ವಂತ ಭಾಷ್ಯವಿಲ್ಲವೆಂದು ಇಲ್ಲಿ ಅವರ ಮತಪ್ರಣಾಲಿಯ ಭಾಷ್ಯವನ್ನು ಸೇರಿಸಿಲ್ಲ. ಜಿಜ್ಞಾಸುಗಳು ನಾರಾಯಣ ಪ್ರಣೀತ ಈಶಾವಾಸ್ಯ ಭಾಷ್ಯವನ್ನು ಓದಿಕೊಳ್ಳಬೇಕು.

× × × ×

**ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ ।**
**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥**
**ಓಂ ಶಾಂತಿಃ ಶಾಂತಿಃ ಶಾಂತಿಃ**

**ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।**
**ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯಸ್ವಿದ್ಧನಮ್** ॥ ೧ ॥

**ಶ್ರೀ ಶಂಕರ:** ಜಗತ್ತಿನಲ್ಲಿ ಚರಾಚರವಾದುದೆಲ್ಲವೂ ಇದು ಪರಮಾತ್ಮನಿಂದ ಹೊಚ್ಚ ಲಾಗಿದೆ ( ಆಚ್ಛಾದನೀಯವಾಗಿದೆ ). ಆದುದರಿಂದ ತ್ಯಾಗದಿಂದ ಆತ್ಮವನ್ನು ರಕ್ಷಿಸಿರಿ, ನಿಮ್ಮ ಇಲ್ಲವೆ ಹೆರವರ ಧನವನ್ನು ಕಾಂಕ್ಷಿಸಬೇಡಿರಿ.

ಜಗತ್ತಿನಲ್ಲಿ ಜಗತ್ತು ಅಂದರೆ ಚರಾಚರ ಸೃಷ್ಟಿ ಎಲ್ಲವೂ ಅನೃತ ಅಂದರೆ ಸುಳ್ಳು. ಪರ ಮಾತ್ಮನೇ ಪರಮಾರ್ಥ ಸತ್ಯ. 'ಅಹಮೇವೇದಂ ಸರ್ವಂ' ( ನಾನೇ ಇದೆಲ್ಲವೂ ಇದ್ದೇನೆ ) ಎಂಬುದಾಗಿ ತನ್ನ ಆತ್ಮದಿಂದ ಪ್ರತ್ಯಗಾತ್ಮ ( ಜೀವಾತ್ಮ ) ನಾಗಿ ತೋರುವ ಪರಮಾತ್ಮ ಅನೃತ ವಾದ ಚರಾಚರವನ್ನೆಲ್ಲ ಪರಮಾರ್ಥ ಸತ್ಯರೂಪದಿಂದ ಹೊಚ್ಚಿದ್ದಾನೆ. ಮೈಗೆ ತೊಡೆದ ಚಂದನಕ್ಕೆ ನೀರುಬೆವರಿನ ಮೂಲಕ ಉಂಟಾದ ದುರ್ಗಂಧವು ಅದರ ನಿಜವಾದ ಸುಗಂಧ ದಿಂದ ಮುಚ್ಚಲ್ಪಡುತ್ತದೆ. ಹಾಗೆಯೆ ತನ್ನಲ್ಲಿ ಆರೋಪಿತವಾದ ಈ ದ್ವೈತರೂಪವಾದ ಜಗತ್ತು ಪರಮಾತ್ಮನಿಂದ ಮುಚ್ಚಲಾಗಿದೆ. ಇದನ್ನರಿತು ಈಶ್ವರಾತ್ಮ ಭಾವನೆಯಿಂದ ಯುಕ್ತ ನಾಗಿ ಪುತ್ರ, ವಿತ್ತ, ಲೋಕ ಈ ಮೂರು ಈಷಣೆ ಅಂದರೆ ಕಾಮನೆಗಳ ತ್ಯಾಗಮಾಡಬೇಕು. ಮಿಥ್ಯಾವಿಷಯದಲ್ಲಿ ಕಾಂಕ್ಷೆಯನ್ನು ಮಾಡಬಾರದು. ಇಂಥವನಿಗೆ ಸನ್ಯಾಸದಲ್ಲಿಯೆ ಅಧಿಕಾರವಿದೆ, ಕರ್ಮದಲ್ಲಿ ಅಲ್ಲ.

**ಶ್ರೀ ಮಧ್ವ** :– ಯಾವುದೊಂದು ಈ ಪ್ರಪಂಚವು ಪರಮಾತ್ಮನ ಆವಾಸಕ್ಕೆ ಯೋಗ್ಯವು. ಇದೆಲ್ಲವೂ ಪ್ರಕೃತಿಯಲ್ಲಿ ( ಆಶ್ರಯಿಸಿಕೊಂಡಿದೆ ). ಪರಮಾತ್ಮನಿಂದ ಕೊಡಲ್ಪಟ್ಟ ದ್ರವ್ಯದಿಂದ ಭೋಗಿಸು. ಯಾವನೊಬ್ಬನ ದ್ರವ್ಯವನ್ನೂ ಇಚ್ಛಿಸಬೇಡ.

ಜಗತ್ಯಾಂ ಎಂದರೆ ಪ್ರಕೃತಿಯಲ್ಲಿ ಅಂದರೆ ಪ್ರಕೃತಿಗೆ ಅಭಿಮಾನಿಯಾದ ಮಹಾಲಕ್ಷ್ಮೀ ದೇವಿಯಲ್ಲಿ ಎಂದರ್ಥ. ಈ ಪ್ರಪಂಚಕ್ಕೆ ತಾನಾಗಿ ಕೆಲಸಮಾಡುವ ಶಕ್ತಿಯಿಲ್ಲ. ಆದುದರಿಂದ ಸರ್ವನಿಯಾಮಕನಾದ ಪರಮಾತ್ಮನು ಇದರಲ್ಲಿ ಪ್ರವೇಶಿಸಿ ಇದಕ್ಕೆ ಪ್ರವೃತ್ತಿಶಕ್ತಿಯನ್ನು ಕೊಡುತ್ತಾನೆ. ಸಮಸ್ತ ಜಗತ್ತು ತನ್ನ ಮೂಲಕಾರಣವಾದ ಪ್ರಕೃತಿಯನ್ನು ಆಶ್ರಯಿಸಿಕೊಂಡಿದೆ, ಪ್ರಕೃತಿಯೂ ಪರಮಾತ್ಮನ ಅಧೀನವೇ ಆದುದು. ಆದ್ದರಿಂದ ಪರಮಾತ್ಮನ ಪ್ರೇರಣೆಯಿಂದ ದೊರೆಯತಕ್ಕ ಧನದಿಂದಲೇ ಭೋಗಿಸಬೇಕಲ್ಲದೆ ನಿಜವಾಗಿ ಸ್ವಾಮಿಗಳಲ್ಲದ ರಾಜಾದಿಗಳ ಕಡೆಯಿಂದ ಧನವನ್ನು ಬೇಡಬಾರದು.

**ಶ್ರೀ ಅರವಿಂದ** :- ಇವೆಲ್ಲವೂ ಈಶ್ವರನ ಆವಾಸಕ್ಕಾಗಿ ಇವೆ, ವಿಶ್ವಗತಿಯಲ್ಲಿ ವ್ಯಕ್ತಿಯು ಸಮಷ್ಟಿಚಲನ ಎಂಬುದೆಲ್ಲವೂ. ಅದರಿಂದ ತ್ಯಕ್ತವಾದುದನ್ನು ನೀನು ಭುಂಜಿಸು, ಯಾರ ಸೊತ್ತಿಗಾಗಿಯೂ ಹಂಬಲಿಸಬೇಡ. 'ವಾಸ್ಯಂ' ಇದಕ್ಕೆ ಹೊಚ್ಚಲ್ಪಡುವುದು, ಬಟ್ಟೆಯಂತೆ ತೊಡಲ್ಪಡುವುದು, ವಾಸಿಸಲ್ಪಡುವುದು ಎಂದು ಮೂರು ಅರ್ಥಗಳು ಸಂಭವಿಸುತ್ತವೆ. ಮೊದಲನೆಯದು ಸಾಮಾನ್ಯವಾಗಿ ಒಪ್ಪಿತವಾದ ಅರ್ಥ. ಶುದ್ಧಬ್ರಹ್ಮನ ಕೇವಲಜ್ಞಾನದಲ್ಲಿ ಅನೃತವಾದ ಬಾಹ್ಯಪ್ರಪಂಚದ ಅರಿವನ್ನು ಕಳೆದುಕೊಳ್ಳಬೇಕೆಂಬ ಅರ್ಥದಲ್ಲಿ ಶಂಕರಾಚಾರ್ಯರು ಇದನ್ನು ವಿವರಿಸಿದ್ದಾರೆ. ಈ ವಿವರಣೆಯಿಂದ ಮೊದಲನೆಯ ಪಾದವು ಈ ಉಪನಿಷತ್ತಿನ ಸಮಗ್ರ ವಿಚಾರಸರಣಿಗೆ ವಿರೋಧಕವಾಗುತ್ತದೆ. ಯಾಕೆಂದರೆ ಈಶ ಮತ್ತು ಜಗತ್ತು, ತ್ಯಾಗ-ಭೋಗ, ಕರ್ಮ-ಆಂತರಿಕ ಸ್ವಾತಂತ್ರ್ಯ, ಒಂದು-ಹಲವು, ಇರುವಿಕೆ-ಆಗುವಿಕೆಗಳು, ತಟಸ್ಥವಾದ ನಿರ್ಗುಣಬ್ರಹ್ಮ ಹಾಗೂ ಕ್ರಿಯಾಶೀಲವಾದ ಸಗುಣಬ್ರಹ್ಮ, ವಿದ್ಯೆ-ಅವಿದ್ಯೆ, ಸಂಭೂತಿ-ಅಸಂಭೂತಿ, ಇಹಪರದಲ್ಲಿ ಜೀವನ-ಅಮೃತತ್ವ ಈ ದ್ವಂದ್ವಗಳಲ್ಲಿ ತೋರಿಕೆಗೆ ವಿಸಂಗತವೆಂದು ಕಂಡುಬರುವ ವಿರೋಧಗಳನ್ನು ಮೂಲಭೂತವಾದ ಏಕತೆಯ ಅರಿವು ಪಡೆದು ಹೇಗೆ ಹೊಂದಿಸಿಕೊಳ್ಳಬೇಕೆಂಬುದನ್ನು ಈ ಉಪನಿಷತ್ತು ಬೋಧಿಸುತ್ತದೆ. 'ಈಶಾವಾಸ್ಯಂ ಇದಂ ಸರ್ವಂ' ಇದರಲ್ಲಿಯ ಚಿತ್ರವು ಜಗತ್ತು ಒಂದು ಬಟ್ಟೆಯ ಹಾಗೆ ಎಂದಾಗಲಿ ಸರ್ವನಿಯಾಮಕವಾದ ಮತ್ತು ಪ್ರೇರಕವಾದ ಪರಮಾತ್ಮನ ಆವಾಸಸ್ಥಳವೆಂದಾಗಲಿ ಇರಬೇಕು. ಈ ಉಪನಿಷತ್ತಿನ ವಿಚಾರಸರಣಿಗೆ ಎರಡನೆಯ ಅಭಿಪ್ರಾಯವು ಹೆಚ್ಚು ಚೆನ್ನಾಗಿ ಸರಿಹೋಗುತ್ತದೆ.

**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ |**
**ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ** || ೨ ||

**ಶ್ರೀ ಶಂಕರ** :— ಈ ಲೋಕದಲ್ಲಿ ಅಗ್ನಿಹೋತ್ರಾದಿ ಕರ್ಮಗಳನ್ನು ಮಾಡಿ ನೂರು ವರುಷ ಬದುಕಲು ಬಯಸಬೇಕು. (ಅಂದರೆ ನೂರು ವರುಷ ಬದುಕುವ ಇಚ್ಛೆಯಿದ್ದಲ್ಲಿ ಶಾಸ್ತ್ರವಿಹಿತ ಕರ್ಮಗಳನ್ನು ಮಾಡಿಯೆ ಬದುಕಬಯಸಬೇಕು). ಹೀಗೆ ಬದುಕಬಯಸುವ ನರನಿಗೆ ವರ್ತಮಾನ ಪ್ರಕಾರಕ್ಕಿಂತ ಬೇರೆ ದಾರಿಯಿಲ್ಲ, ಯಾವುದರಿಂದ ಅಶುಭಕರ್ಮದ ಲೇಪವು ಅವನಿಗೆ ಉಂಟಾಗದು. ಮೊದಲನೆಯ ಮಂತ್ರವು ಸಂನ್ಯಾಸದಿಂದ ಆತ್ಮಜ್ಞಾನನಿಷ್ಠರಾಗಲು ಆತ್ಮವಿದರನ್ನು ಕುರಿತು ಹೇಳಿದ್ದು. ಈ ಎರಡನೆಯದು ಆತ್ಮಗ್ರಹಣ ಮಾಡಲು ಅಶಕ್ತರಾದ ಇತರರನ್ನು ಕುರಿತು ಇರುತ್ತದೆ. ಮೊದಲಿನ ಮಂತ್ರದಲ್ಲಿ ಸನ್ಯಾಸಿಗೆ ಜ್ಞಾನನಿಷ್ಠೆ,

ಎರಡನೆಯದರಲ್ಲಿ ಅಶಕ್ತರಿಗೆ ಕರ್ಮನಿಷ್ಠೆ ಹೇಳಿದೆಯೆಂದು ಹೇಗೆ ತಿಳಿಯಿತು? ಹೇಗೆಂದರೆ ಜ್ಞಾನ–ಕರ್ಮಗಳ ವಿರೋಧವು ಬೆಟ್ಟದಂತೆ ಅಲುಗಾಡದಂಥದು ಎಂದು ಗೊತ್ತಿಲ್ಲವೇ? ಇದಕ್ಕೆ ಬೇಕಾದಷ್ಟು ಆಧಾರವಾಕ್ಯಗಳಿವೆ. ಜ್ಞಾನಕರ್ಮಗಳ ಮಾರ್ಗಗಳು ಭಿನ್ನ. ಜ್ಞಾನ ನಿವೃತ್ತಿ ಲಕ್ಷಣ, ಕರ್ಮ ಪ್ರವೃತ್ತಿಲಕ್ಷಣ. ಆದ್ದರಿಂದ ಅವುಗಳ ಫಲವೂ ಭಿನ್ನ.

**ಶ್ರೀ ಮಧ್ವ** : ಮನುಷ್ಯಜನ್ಮದಲ್ಲಿ ನೂರು ವರ್ಷ ಪರ್ಯಂತ ಬದುಕಲಿಚ್ಛಿಸುವ ಚೇತನವರ್ಗವು ಭಗವತ್ಪೂಜೆಯ ಸ್ವರೂಪದ ತನ್ನ ಉಚಿತಕರ್ಮಗಳನ್ನು ಮಾಡಿಕೊಂಡೇ ಇರಬೇಕು. ಈ ಪ್ರಕಾರವಾಗಿ ಕರ್ಮಗಳನ್ನು ಮಾಡಿಕೊಂಡಿರುವ ಕೇವಲ ಮನುಷ್ಯನಾದ ನಿನ್ನಲ್ಲಿ ಪಾಪಕರ್ಮವು ಲೇಪಿಸುವುದಿಲ್ಲ. ಕರ್ಮಮಾಡುವುದಕ್ಕಿಂತ ಕರ್ಮಾಚರಣೆಯಿಲ್ಲ ದಿದ್ದರೆ ಪಾಪಕರ್ಮವು ಇಲ್ಲವೆಂಬುದು ಇಲ್ಲ. ( ಅದರ ಲೇಪವು ಆಗಿಯೇ ಆಗುತ್ತದೆ )

ಪರಮಾತ್ಮನ ಸೇವೆಯನ್ನು ಮಾಡದಿರುವ ಅಜ್ಞಾನಿಗೂ ಪಾಪವು ಲೇಪಿಸುತ್ತದೆ, ಜ್ಞಾನಿಗೂ ಆನಂದದಲ್ಲಿ ಕೊರತೆಯುಂಟಾಗುತ್ತದೆ. ಈ ಕಾರಣದಿಂದ ಅಲೇಪವಿಲ್ಲದಲ್ಲಿಯೂ ಲೇಪವುಂಟಾಗುವುದು ಎಂದ ಮೇಲೆ ಪೂಜಾರೂಪ ಸೇವೆ ಇಲ್ಲವೆ ಕರ್ಮವನ್ನು ಯಾವಾಗಲೂ ಮಾಡುತ್ತಲೇ ಇರಬೇಕು.

**ಶ್ರೀ ಅರವಿಂದ** : ದಿಟವಾಗಿ ಈ ಲೋಕದಲ್ಲಿ ಕರ್ಮಗಳನ್ನು ಮಾಡುತ್ತಲೇ ನೂರು ವರ್ಷ ಬಾಳಲು ಬಯಸಬೇಕು, ಹೀಗೆ ನಿನ್ನಲ್ಲಿ ಇರುವುದು, ಇದರಿಂದ ಬೇರೆಯಾಗಿ ಅಲ್ಲ. ಕರ್ಮವು ಮನುಷ್ಯನಿಗೆ ಲೇಪಿಸುವುದಿಲ್ಲ.

' ಕುರ್ವನ್ನೇವೇಹ ' ಇದರಲ್ಲಿ ' ಏವ ' ಎಂಬುದರ ಮೇಲಿನ ಅವಧಾರಣೆಯಿಂದ ' ದಿಟವಾಗಿ ಕರ್ಮಗಳನ್ನು ಮಾಡುತ್ತಲೆ, ಅವುಗಳಿಂದ ಪರಾನ್ಮುಖನಾಗದಲೆ ' ಎಂಬ ಜೋರು ಅರ್ಥಕ್ಕೆ ಬರುತ್ತದೆ. ಮೊದಲನೆಯ ಪಾದದಲ್ಲಿಯ ' ಕರ್ಮಾಣಿ ' ಎಂದರೆ ಯಜ್ಞಯಾಗಾದಿ ಕರ್ಮಗಳೆಂದೂ ಎರಡನೆಯ ಪಾದದಲ್ಲಿಯ ಕರ್ಮವೆಂದರೆ ಪಾಪಕರ್ಮವೆಂದೂ ಶಂಕರಾಚಾರ್ಯರು ಅರ್ಥವಿಸಿದ್ದಾರೆ. ಅಜ್ಞಾನಿಗಳ ಸಲುವಾಗಿ ಈ ಪದ್ಯವು ಒಂದು ಸವಲತ್ತೆಂದೂ ಜ್ಞಾನಿಗಳು ಕರ್ಮಗಳನ್ನೂ ಪ್ರಪಂಚವನ್ನೂ ಬಿಟ್ಟು ಕಾಡಿಗೆ ಹೋಗುವರೆಂದೂ ಅವರ ಅಭಿಪ್ರಾಯ. ಅವರ ಈ ಅನುವಾದದ ಅನ್ವಯ ಮತ್ತು ಪದಸರಣಿ ಕೃತಕವೆಂದೂ ಅಸ್ವಾಭಾವಿಕವೆಂದೂ ತೋರುತ್ತದೆ. ನಾವು ಮಾಡಿದ ಅನುವಾದವು ಉಪನಿಷತ್ತಿನ ಸರಳವಾದ ಅಭಿಪ್ರಾಯವನ್ನು ಮೂಡಿಸುವುದೆಂದು ನಮಗೆ ತೋರುತ್ತದೆ.

**ಅಸುರ್ಯಾ ನಾಮ ತೇ ಲೋಕಾ ಅಂಧೇನ ತಮಸಾವೃತಾಃ |**
**ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ || ೩ ||**

**ಶ್ರೀ ಶಂಕರ** ಅಜ್ಞಾನದ ಕತ್ತಲೆಯಿಂದ ಆವರಿಸಲ್ಪಟ್ಟವು ಯಾವುವೋ ಅವೇ ದೇವಾದಿ ಅಸುರರ ಲೋಕಗಳು. ಆತ್ಮಘಾತಕರಾದ ಅಜ್ಞಾನಿಗಳು ಮರಣಾನಂತರ ಆ ಲೋಕಗಳನ್ನು ಸೇರುತ್ತಾರೆ.

ಪರಮಾತ್ಮಭಾವ ಏಕ, ಅದ್ವಯ. ಈ ದೃಷ್ಟಿಯಿಂದ ದೇವಾದಿಗಳೂ ಅನೇಕ ಮತ್ತು ದ್ವೈತಭಾವವುಳ್ಳವರಾಗಿ ಅಸುರರೇ. ಅವರ ಲೋಕಗಳು ಅಸುರ್ಯ ಎಂದೆನಿಸುತ್ತವೆ. ಅಜ್ಞಾನಿಗಳಾದ ಜನರು ಅವಿದ್ಯಾದೋಷದಿಂದ, ವಿದ್ಯಮಾನವಾದ ಆತ್ಮನ ತಿರಸ್ಕಾರದಿಂದ ಆತ್ಮಘಾತವನ್ನು ನಿತ್ಯವೂ ಮಾಡುತ್ತಾರೆ. ವಿದ್ಯಮಾನ ಆತ್ಮನ ಫಲವೆಂದರೆ ಅಜರಾಮರತ್ವಾದಿ ಸಂವೇದನ ಲಕ್ಷಣ, ಅದು ಹತನಾದವನಿಗೆ ಹೇಗೊ ಹಾಗೆ ಮರೆಯಾಗುತ್ತದೆ ಎಂಬುದರಿಂದ ಪ್ರಾಕೃತರೂ ಅಜ್ಞರೂ ಆತ್ಮಹನರೆಂದು ಕರೆಯಿಸಿಕೊಳ್ಳುತ್ತಾರೆ. ಈ ಆತ್ಮಹನನ ದೋಷದಿಂದ ಅವರು ಸಂಸಾರದ ಸುಳಿಯಲ್ಲಿ ತಿರುಗುತ್ತಾರೆ.

**ಶ್ರೀ ಮಧ್ವ :**— ಮಹಾದುಃಖಪ್ರದಗಳೂ ಗಾಢಾಂಧಕಾರದಿಂದ ಆವೃತವಾದವುಗಳೂ ಆದ ಆ ಪ್ರಸಿದ್ಧಸ್ಥಾನಗಳನ್ನು ಪರಮಾತ್ಮನನ್ನು ವಿಪರೀತವಾಗಿ ತಿಳಿದುಕೊಳ್ಳುವ ಜನರು ಮೃತರಾದ ಮೇಲೆ ನಿಶ್ಚಯವಾಗಿ ಹೊಂದುತ್ತಾರೆ.

ಒಳ್ಳೆಯ ಸುಖಕ್ಕೆ ವಿರುದ್ಧವಾದ್ದರಿಂದಲೂ ಅಸುರರು ಅಂದರೆ ದೈತ್ಯರಿಂದ ಪ್ರಾಪ್ಯವಾದ್ದರಿಂದಲೂ ಅಸುರ್ಯ ಎಂದು ಆ ಲೋಕಗಳಿಗೆ ಹೆಸರು. ಪರಮಾತ್ಮಸ್ವರೂಪವನ್ನು ಇದ್ದ ಹಾಗೆ ತಿಳಿಯದೆ ವಿಪರೀತವಾಗಿ ತಿಳಿದು ಅಸತ್ತಿನ ಉಪಾಸನೆ ಮಾಡುವವರು ಆತ್ಮಹನರು. ಹೀಗೆ ಹರಿಗೆ ವಿಮುಖರಾಗಿ ಅವನ ದ್ವೇಷಿಗಳಾದವರೆಲ್ಲ ಅಂಧಂತಮಸ್ಸನ್ನು ಹೊಂದುತ್ತಾರೆ.

**ಶ್ರೀ ಅರವಿಂದ :**— ತಮ್ಮ ಆತ್ಮಗಳನ್ನು ಕೊಂದುಕೊಳ್ಳುವವರೆಲ್ಲ ಇಲ್ಲಿಂದ ಹೊರಟು ಹೋದ ಮೇಲೆ ಸೂರ್ಯರಹಿತವಾದ ಹಾಗೂ ಗಾಢವಾದ ಅಂಧಕಾರದಿಂದ ಮುಚ್ಚಿದ ಲೋಕಗಳನ್ನು ಹೊಂದುತ್ತಾರೆ.

ಇಲ್ಲಿ 'ಅಸೂರ್ಯಾ' ಎಂದರೆ ಸೂರ್ಯರಹಿತ, 'ಅಸುರ್ಯಾ' ಎಂದರೆ ಅಸುರಸಂಬಂಧಿ, ಅದಿವ್ಯ ಎಂಬರ್ಥದ ಎರಡು ಪಾಠಗಳಿವೆ. ಈ ಉಪನಿಷತ್ತಿನ ವಿಚಾರಬಂಧದಲ್ಲಿ ಕೊನೆಯ ನಾಲ್ಕು ಪದ್ಯಗಳಲ್ಲಿಯ ಅಂತಿಮ ಚಲನಕ್ಕೆ ಮೂರನೆಯ ಪದ್ಯವು ಪ್ರಾರಂಭಸ್ಥಳವಾಗಿದೆ. ಇವರಲ್ಲಿಯ ಸೂಚನೆಗಳನ್ನು ಅಲ್ಲಿ ಎತ್ತಿಕೊಂಡು ಬೆಳೆಸಲಾಗಿದೆ. ೯ ಹಾಗೂ ೧೨ನೆಯ ಪದ್ಯಗಳಲ್ಲಿ ನೆನೆಯಲಾದ ಅಸೂರ್ಯಲೋಕ ಮತ್ತು ಅವುಗಳ ಅಂಧಂತಮಸ್ಸು ಇವುಗಳನ್ನು ಸೂರ್ಯನನ್ನು ಕುರಿತ ಪ್ರಾರ್ಥನೆ ಭಾವರೂಪದಲ್ಲಿ ಅರಿಯುವಂತೆ ಮಾಡುತ್ತದೆ. ಇತರ ಉಪನಿಷತ್ತುಗಳಲ್ಲಿಯೂ ಸೂರ್ಯ ಮತ್ತು ಅವನ ಕಿರಣಗಳ ನಿಕಟಸಂಬಂಧವು ಬೆಳಕಿನ ಲೋಕದೊಡನಿದೆ. ಅವುಗಳ ಸಹಜಸಿದ್ಧವಾದ ವಿರೋಧಿಯೆಂದರೆ ಸೂರ್ಯರಹಿತವಾದ ಕತ್ತಲೆ, ಅಸುರಸಂಬಂಧಿಯಾದ ಲೋಕಗಳಲ್ಲ.

**ಅನೇಜದೇಕಂ ಮನಸೋ ಜವೀಯೋ ನೈನದ್ದೇವಾ ಆಪ್ನುವನ್ ಪೂರ್ವ-**
**ಮರ್ಷತ್ ।**
**ತದ್ಧಾವತೋಽನ್ಯಾನತ್ಯೇತಿ ತಿಷ್ಠತ್ ತಸ್ಮಿನ್ನಪೋ ಮಾತರಿಶ್ವಾ ದಧಾತಿ ॥ ೪ ॥**

**ಶ್ರೀ ಶಂಕರ :**— ಚಲನವಿಲ್ಲದೆ ಯಾವಾಗಲೂ ಏಕರೂಪವಾಗಿರುವ ಒಂದೇ ಒಂದಾದ ಆತ್ಮವು ಮನಸ್ಸಿಗಿಂತ ವೇಗವುಳ್ಳದು. (ಮನಸ್ಸಿಗಿಂತ) ಮುಂಚೆಯೆ ಗಮನ ಮಾಡಿದ ಅಂದರೆ

ಎಲ್ಲೆಡೆ ವ್ಯಾಪಿಸಿದ ಇದನ್ನು ದೇವತೆಗಳು ದೊರಕಿಸಲಿಲ್ಲ. ತಾನು ನಿಂತಲ್ಲಿ ನಿಂತು ವಿಕಾರ ಹೊಂದವಲೆ ಅದು ವೇಗದಿಂದ ಓಡುವ ಆತ್ಮವಿಲಕ್ಷಣವಾದ ಮನೋವಾಗಿಂದ್ರಿಯಾದಿಗಳನ್ನು ಮೀರುತ್ತದೆ ( ಮೀರಿಹೋಗುವಂತೆ ತೋರುತ್ತದೆ ). ಈ ಆತ್ಮತತ್ತ್ವದಲ್ಲಿ ವಾಯು ಕರ್ಮ ಗಳನ್ನು ಹಂಚಿಡುತ್ತಾನೆ.

ನಿಶ್ಚಲವಾದ ಆತ್ಮವು ಮನಸ್ಸಿಗಿಂತ ಸವೇಗ ಎಂಬುದು ವಿರುದ್ಧವಲ್ಲವೇ ಎಂದು ಕೇಳಿ ದರೆ, ಇದು ದೋಷವಲ್ಲ. ಯಾಕಂದರೆ ನಿರುಪಾಧಿಯಾದ ವಸ್ತುವಿಗೆ ಆರೋಪಿತವಾದ ಉಪಾಧಿಮತ್ತ್ವದಿಂದ ಇದರ ಉಪಪತ್ತಿಯಾಗುತ್ತದೆ. ನಿರುಪಾಧಿಕವಾದ ಅಂದರೆ ಶುದ್ಧವಾದ ತನ್ನರೂಪದಲ್ಲಿ ಆತ್ಮವು ' ಅನೇಜದೇಕಂ ' ಆಗಿದೆ. ಮನಸ್ಸು ಸಂಕಲ್ಪವಿಕಲ್ಪಲಕ್ಷಣದಿಂದ ಕೂಡಿದ್ದು, ಅಂದರೆ ತನ್ನನ್ನು ವಿಶೇಷೀಕರಿಸುವ ಉಪಾಧಿಯುಳ್ಳದು. ಈ ಮನಸ್ಸು ಬ್ರಹ್ಮ ಲೋಕಾದಿಗಳಿಗೆ ಕ್ಷಣಮಾತ್ರದಲ್ಲಿ ಹೋಗಬಲ್ಲುದೆಂದು ಲೋಕದಲ್ಲಿ ಪ್ರಸಿದ್ಧವಾಗಿದೆ. ಅದು ಅಷ್ಟು ವೇಗದಿಂದ ಹೋಗುತ್ತಿರಲು ಅದಕ್ಕಿಂತ ಮೊದಲು ತಲಪಿದುದೆನ್ನುವಂತೆ ಆತ್ಮಚೈತನ್ಯಾ ಭಾಸವು ತಿಳಿಯಲ್ಪಡುತ್ತದೆ, ಅಂತೇ ' ಮನಸೋ ಜವೀಯ ' ಅಂದದ್ದು. ಕರ್ತೃತ್ವ, ಭೋಕ್ತೃತ್ವ ಮುಂತಾದವುಗಳಿಂದ ಕೂಡಿ ನೀರಲ್ಲಿ ಕಂಡ ಸೂರ್ಯಬಿಂಬದಂತೆ ಕಲ್ಪಿತರೂಪ ವಾದ ಜೀವಾತ್ಮವೇ ಚೈತನ್ಯಾಭಾಸವು. ನಿರುಪಾಧಿಕ ಆತ್ಮವು ಸೋಪಾಧಿಕವಾದ ಮನಸ್ಸಿನ ಸಂಬಂಧದಿಂದ ವೇಗ, ಚಲನವೆಂಬ ಉಪಾಧಿಯಿಂದ ತಾನೂ ಕೂಡಿದ್ದು ಎಂಬ ಆರೋಪ ವನ್ನು ಹೊಂದುತ್ತದೆ.

ಸರ್ವವ್ಯಾಪಿಯಾದ ಆತ್ಮತತ್ತ್ವವು ಎಲ್ಲ ಸಂಸಾರಧರ್ಮವರ್ಜಿತವಾಗಿ ತನ್ನ ನಿರುಪಾಧಿಕ ಸ್ವರೂಪದಲ್ಲಿ ಅವಿಕಾರಿಯಾಗಿಯೆ ಇದ್ದು ಉಪಾಧಿಕೃತವಾದ ಎಲ್ಲ ಸಂಸಾರವಿಕ್ರಿಯೆಗಳನ್ನು ಅನುಭವಿಸುವಂತೆ ಆಗುತ್ತದೆ, ಅವಿವೇಕಿಗಳಿಗೂ ಮೂಢರಿಗೂ ಪ್ರತಿದೇಹದಲ್ಲಿ ಅನೇಕವಾಗಿ ದ್ದಂತೆ ಹೊಳೆಯುತ್ತದೆ. ಇದನ್ನು ' ತದ್ಧಾವತೋಽನ್ಯಾನ್ ' ಇತ್ಯಾದಿ ಮೂರನೆಯ ಸಾಲಿ ನಲ್ಲಿ ಹೇಳಿದೆ. ' ಅಪಃ ' ಎಂದರೆ ಎಲ್ಲ ಪ್ರಾಣಿಗಳ ಚೇಷ್ಟ ಅಂದರೆ ಚಟುವಟಿಕೆಯ ಲಕ್ಷಣವುಳ್ಳ, ಅಗ್ನಿ, ಆದಿತ್ಯ, ಪರ್ಜನ್ಯಾದಿಗಳ ವಿಶಿಷ್ಟಕಾರ್ಯಗಳ ಲಕ್ಷಣವುಳ್ಳ ಕರ್ಮಗಳು ಎಂದು ಅರ್ಥ.

**ಶ್ರೀ ಮಧ್ವ :—** ಪರಮಾತ್ಮಸ್ವರೂಪವು ಭಯರಹಿತ ( ಅನೇಜತ್ ) ಹಾಗೂ ಪ್ರಧಾನ ವಾದದ್ದು. ಮನಸ್ಸಿನಿಂದಲೂ ಅತಿವೇಗವುಳ್ಳದ್ದು. ಅದನ್ನು ದೇವತೆಗಳು ಸಂಪೂರ್ಣವಾಗಿ ತಿಳಿಯಲಿಲ್ಲ. ಪರಬ್ರಹ್ಮನು ಅನಾದಿಕಾಲದಿಂದ ಎಲ್ಲವನ್ನೂ ತಿಳಿದಿದ್ದಾನೆ. ಅವನು ಒಂದ ಕಡೆಯಲ್ಲಿದ್ದುಕೊಂಡು ಓಡತಕ್ಕ ಇತರ ಜನರನ್ನು ಅತಿಕ್ರಮಿಸಿದ್ದಾನೆ. ಅವನಲ್ಲಿ ವಾಯು ದೇವರು ( ಪುಣ್ಯ ) ಕರ್ಮಗಳನ್ನು ಸಮರ್ಪಿಸುತ್ತಾನೆ.

ಅಚಿಂತ್ಯಶಕ್ತಿಯ ಮೂಲಕ ಹಾಗೂ ಸರ್ವವ್ಯಾಪಿಯಾಗಿದ್ದ ಕಾರಣ ಒಂದೆಡೆ ಇದ್ದು ಕೊಂಡೇ ಪರಮಾತ್ಮನು ಓಡತಕ್ಕವರನ್ನು ಮೀರಿದ್ದಾನೆ. ಎಲ್ಲ ಚೇಷ್ಟ ಇಲ್ಲವೆ ವ್ಯಾಪಾರವು ವಾಯುದೇವರ ಸಂಬಂಧಿಕವಾದ್ದರಿಂದ ಅದನ್ನು ಪರಮಾತ್ಮನಿಗೋಸ್ಕರ ಸಮರ್ಪಿಸಬೇಕು.

**ಶ್ರೀ ಅರವಿಂದ :—** ಅಚಲವಾದ ಆ ಏಕವಸ್ತು ಮನಸ್ಸಿಗಿಂತ ವೇಗವುಳ್ಳದು. ಅದನ್ನು ದೇವತೆಗಳು ಮುಟ್ಟುವುದಿಲ್ಲ, ಯಾಕಂದರೆ ಅದು ಯಾವಾಗಲೂ ಮುಂದೆ ಮುಂದೆ

ಸಾಗುತ್ತದೆ. ಅದು ತಾನು ನಿಂತುಕೊಂಡು ಓಡುತ್ತಿರುವ ಇತರರನ್ನು ಮೀರಿಹೋಗುತ್ತದೆ. ಅದರಲ್ಲಿ ಜೀವನದ ಪ್ರಭು ನೀರುಗಳನ್ನು ತಂದು ನೆಲೆಗೊಳಿಸುತ್ತಾನೆ.

'ಮಾತರಿಶ್ವಾ' ಎಂದರೆ 'ಮಾತೆಯಲ್ಲಿ ಇಲ್ಲವೆ ಯಾವದಾದರೊಂದು ಆಧೇಯದಲ್ಲಿ ತನ್ನನ್ನು ವಿಸ್ತರಿಸಿಕೊಂಡವನು' ಎಂದರ್ಥವಿರಬೇಕು. ಆಧೇಯವು ಮಾತೆಯ ಅಂಶವಾದ ಅಂತರಿಕ್ಷವಾಗಲಿ ಪೃಥಿವಿಯೆಂದೂ ಮಾತೆಯೆಂದೂ ವೇದದಲ್ಲಿ ಕರೆಯಲಾದ ಭೌತಿಕ ಶಕ್ತಿಯಾಗಲಿ ಇರಬಹುದು. ವಾಯುದೇವನನ್ನು ಕುರಿತ ವೈದಿಕ ವಿಶೇಷಣವದು. ಈ ವಾಯು ಪ್ರಾಣದಲ್ಲಿಯ ದಿವ್ಯತತ್ತ್ವದ ಪ್ರತಿನಿಧಿಯಾಗಿ ಜಡದಲ್ಲಿ ವಿಸ್ತರಿಸಿಕೊಂಡು ಅದರ ರೂಪಗಳನ್ನು ಚೇತವಿಸುತ್ತಾನೆ. ವಿಶ್ವವ್ಯಾಪಾರದ ಎಲ್ಲ ರೂಪಗಳಿಗೆ ಅಧಿಷ್ಠಾನವಾದ ದಿವ್ಯಪ್ರಾಣಶಕ್ತಿಯೆಂಬ ಭಾವವನ್ನು 'ಮಾತರಿಶ್ವಾ' ಪದವು ಇಲ್ಲಿ ಸೂಚಿಸುತ್ತದೆ.

'ಅಪಃ' ಇದಕ್ಕೆ ಶುಕ್ಲ ಯಜುರ್ವೇದದಲ್ಲಿ ಒತ್ತಿ ಹೇಳಿದಂತೆ 'ನೀರುಗಳು' ಎಂದೇ ಅರ್ಥವಿರಬೇಕು. ಇದನ್ನು ಅಲಕ್ಷಿಸಿದರೆ ಏಕವಚನದಲ್ಲಿ ಕರ್ಮ, ಕ್ರಿಯೆ ಎಂಬರ್ಥದಲ್ಲಿ ತೆಗೆದುಕೊಳ್ಳಬಹುದು. ಶಂಕರರು ಇದನ್ನು ಬಹುವಚನದಲ್ಲಿ ಗ್ರಹಿಸಿದ್ದಾರೆ. ಇದರ ವೈದಿಕ ಅರ್ಥವು ಮರೆಯಾಗಿ ಪಂಚಭೂತಗಳಲ್ಲಿ ಒಂದಾದ ನೀರು ಎಂಬರ್ಥವೇ ಉಳಿದುದರಿಂದ ಮೂಲ ಅರ್ಥವನ್ನು ತಿಳಿಯುವುದು ತೊಡಕಾಗಿದೆ. ನೀರು ಎಂಬರ್ಥವು ಸಂದರ್ಭದಲ್ಲಿ ತೀರ ಅಪ್ರಸ್ತುತವಾಗಿದೆ. ನೀರುಗಳು, ಎಂದರೆ ಏಳು ಪ್ರವಾಹ ಇಲ್ಲವೆ ಏಳು ಪೋಷಕವಾದ ಗೋಗಳು ಎಂದು ಕರೆಯಲ್ಪಟ್ಟವು, ಏಳು ವಿಶ್ವತತ್ತ್ವ ಹಾಗೂ ಅವುಗಳ ಕ್ರಿಯೆಗಳಿಗೆ ವೈದಿಕ ಸಂಕೇತಗಳಾಗಿವೆ. ಅವೆಂದರೆ ದೇಹ, ಪ್ರಾಣ, ಮನ ಎಂಬ ಮೂರು ಕೆಳಗಿನ ತತ್ತ್ವ, ದಿವ್ಯ ಸತ್ಯ, ದಿವ್ಯ ಆನಂದ, ದಿವ್ಯ ಕ್ರತು ಮತ್ತು ಪ್ರಜ್ಞಾನ, ದಿವ್ಯಸತ್ತೆ ಎಂಬ ನಾಲ್ಕು ಮೇಲಿನ ತತ್ತ್ವಗಳು. ತಮ್ಮ ವಿವಿಧ ಸಾಮರಸ್ಯಗಳಿಂದ ಬೇರೆಬೇರೆಯಾಗಿ ಕಾರ್ಯಪರವಾದ ಏಳು ತತ್ತ್ವಗಳುಳ್ಳ ಸಪ್ತಲೋಕಗಳ ಪ್ರಾಚೀನ ಕಲ್ಪನೆ ಇದೇ ವಿಚಾರದ ತಳಹದಿಯ ಮೇಲೆ ನಿಂತಿದೆ. 'ಅಪಃ' ಇದರ ಸರಿಯಾದ ಅರ್ಥವು ಇದೇ ಎಂಬುದು ಸ್ಪಷ್ಟವಾಗಿದೆ.

**ತದೇಜತಿ ತನ್ನೇಜತಿ ತದ್ದೂರೇ ತದ್ವಂತಿಕೇ ।**
**ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ ॥ ೫ ॥**

**ಶ್ರೀ ಶಂಕರ :** - ಆತ್ಮತತ್ತ್ವವು ಉಪಾಧಿಚಲನದಿಂದ ಚಲಿಸುವಂತಾಗುತ್ತದೆ, ತಾನೆಂದೂ ಚಲಿಸುವುದಿಲ್ಲ. ಅದು ಅಜ್ಞಾನಿಗಳಿಗೆ ಎಂದಿಗೂ ದೊರೆಯದ ಕಾರಣ ದೂರವಿದ್ದಂತೆ, ಜ್ಞಾನಿಗಳಿಗೆ ಅತ್ಯಂತ ಸಮೀಪವಾದುದು. ಇದೆಲ್ಲದರ ಒಳಗೆ ಇರುತ್ತದೆ. ನಾಮ ರೂಪ ಕ್ರಿಯಾತ್ಮಕವಾದ ಜಗತ್ತಿನಿಂದ ಹೊರಗೆ ಇರುತ್ತದೆ.

ಮಂತ್ರಗಳಿಗೆ ಪುನರುಕ್ತಿದೋಷವಿಲ್ಲವೆಂದು ಪೂರ್ವಮಂತ್ರದಲ್ಲಿ ಹೇಳಿದ್ದನ್ನು ಇಲ್ಲಿಯೂ ಹೇಳಿದೆ.

**ಶ್ರೀ ಮಧ್ವ** : - ಪ್ರಪಂಚವು ಪರಮಾತ್ಮನ ದೆಸೆಯಿಂದ ಹೆದರಿಕೊಂಡಿದೆ. ಆ ಪರಬ್ರಹ್ಮನು ಹೆದರುವುದಿಲ್ಲ. ಅವನು ದೂರದೇಶದಲ್ಲಿದ್ದಾನೆ, ಸಮೀಪದಲ್ಲಿಯೂ ಇದ್ದಾನೆ. ಈ ಲೋಕದ ಒಳಗೆ ಇದ್ದಾನೆ, ಹೊರಗೂ ಇದ್ದಾನೆ.

ಸಮಸ್ತ ಪ್ರಪಂಚವೂ ಪರಮಾತ್ಮನ ಅಧೀನವಾದುದರಿಂದ ಅವನಿಗೆ ಭಯಪಡುತ್ತದೆ. ಅವನು ಸ್ವತಂತ್ರನಾದುದರಿಂದ ಯಾರಿಗೂ ಹೆದರುವುದಿಲ್ಲ. ಸರ್ವ ದೇಶದಲ್ಲಿ ವ್ಯಾಪಿಸಿಕೊಂಡಿರುವುದರಿಂದ ಅವನು ದ್ವೇಷಿಗಳಿಗೆ ದೂರದಲ್ಲಿಯೂ ಭಕ್ತರಿಗೆ ಸಮೀಪದಲ್ಲಿಯೂ ಪ್ರೇರಕನಾಗಿ ಸಮಸ್ತ ಪ್ರಪಂಚದ ಒಳಗೂ ಹೊರಗೂ ವ್ಯಾಪಿಸಿಕೊಂಡು ಎಲ್ಲ ಪುಣ್ಯಪಾಪಾದಿ ಕರ್ಮಗಳನ್ನು ಜೀವರಿಂದ ಮಾಡಿಸುತ್ತಾನೆ.

**ಶ್ರೀ ಅರವಿಂದ :**-- ಅದು ಚಲಿಸುತ್ತದೆ, ಚಲಿಸುವುದಿಲ್ಲ. ಅದು ದೂರವಾಗಿದೆ, ಅದೇ ಸಮೀಪವಾಗಿದೆ. ಅದು ಇದೆಲ್ಲದರ ಒಳಗಿರುತ್ತದೆ, ಅದೇ ಇದೆಲ್ಲದರ ಹೊರಗಿರುತ್ತದೆ.

**ಯಸ್ತು ಸರ್ವಾಣಿ ಭೂತಾನಿ ಆತ್ಮನ್ಯೇವಾನುಪಶ್ಯತಿ**
**ಸರ್ವಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ** || ೬ ||

**ಶ್ರೀ ಶಂಕರ :**- - ಯಾವ ಮುಮುಕ್ಷುವಾದ ಸಂನ್ಯಾಸಿಯು ಎಲ್ಲ ಭೂತಗಳನ್ನು ಆತ್ಮನಲ್ಲಿಯೇ ನೋಡುತ್ತಾನೋ ಆಯಾ ಭೂತಗಳಲ್ಲಿ ಆತ್ಮನನ್ನು ನೋಡುತ್ತಾನೋ ಅವನು ಅದನ್ನು ನಿಂದಿಸುವುದಿಲ್ಲ.

ಸರ್ವ ಭೂತಗಳು ಎಂದರೆ ಅವ್ಯಕ್ತದಿಂದ ಸ್ಥಾವರದ ವರೆಗಿನ ಎಲ್ಲ ಚರಾಚರ ಪ್ರಪಂಚ. ಅದನ್ನು ಆತ್ಮನಲ್ಲಿ ನೋಡುವುದೆಂದರೆ ಆತ್ಮನನ್ನು ಬಿಟ್ಟು ಅಂದರೆ ಆತ್ಮವ್ಯತಿರಿಕ್ತವಾಗಿ ನೋಡುವುದಿಲ್ಲ ಎಂದರ್ಥ. ಆಯಾ ಭೂತಗಳಲ್ಲಿ ಆತ್ಮನನ್ನು ನೋಡುವುದೆಂದರೆ ಅವುಗಳಲ್ಲಿ ಕೇವಲ ನಿರ್ಗುಣವಾದ ಏಕಮೇವ ಸತ್ಯವಾದ ಆತ್ಮನಿದ್ದಾನೆ ಎಂದು ತಿಳಿಯುವುದು, ದೇಹದಲ್ಲಿದ್ದ ಆತ್ಮನು ಅದೇ ತನ್ನ ಸ್ವರೂಪದಲ್ಲಿ ಪ್ರಪಂಚದಲ್ಲಿದ್ದಾನೆ ಎಂದು ನೋಡುವುದು. ವಿಜುಗುಪ್ಸೆ ಎಂದರೆ ಘೃಣೆ ಇಲ್ಲವೆ ನಿಂದೆ ಆತ್ಮನಿಂದ ಬೇರೆಯಾದ ದೂಷಿತ( ದುಷ್ಟ )ವಾದ ವಸ್ತುವನ್ನು ನೋಡಿದಾಗ ಉಂಟಾಗುತ್ತದೆ. ಆತ್ಮನನ್ನೇ ಅತ್ಯಂತ ವಿಶುದ್ಧವಾಗಿ ನಿರಂತರವಾಗಿ ನೋಡುವವನಿಗೆ ನಿಂದೆಗೆ ನಿಮಿತ್ತವಾದ ವಸ್ತುವೇ ಇಲ್ಲದಂತಾಗುತ್ತದೆ.

**ಶ್ರೀ ಮಧ್ವ :**--- ಎಲ್ಲ ಪ್ರಾಣಿಗಳು ಪರಮಾತ್ಮನಲ್ಲಿಯೇ ಆಶ್ರಯಿಸಿಕೊಂಡಿವೆಯೆಂದೂ ಎಲ್ಲ ಪ್ರಾಣಿಗಳಲ್ಲಿ ಪರಮಾತ್ಮನೇ ನಿಯಾಮಕನಾಗಿ ಇರುವನೆಂದೂ ಯಾವನು ತಿಳಿಯುತ್ತಾನೋ ಅವನು ಪರಮಾತ್ಮಸ್ವರೂಪಜ್ಞಾನಿಯಾದುದರಿಂದಲೂ ಭಯದ ಅಭಾವದಿಂದಲೂ ತನ್ನನ್ನು ರಕ್ಷಿಸಿಕೊಳ್ಳುವುದಕ್ಕೆ ಇಚ್ಛಿಸುವುದಿಲ್ಲ.

**ಶ್ರೀ ಅರವಿಂದ**: ಯಾವನು ಎಲ್ಲ ಇರುವಿಕೆಗಳಲ್ಲಿ ಎಲ್ಲ ಕಡೆ ಆತ್ಮನನ್ನು ಹಾಗೂ ಎಲ್ಲ ಇರುವಿಕೆಗಳನ್ನು ಆತ್ಮನಲ್ಲಿ ಕಾಣುತ್ತಾನೋ ಅವನು ಆ ತರುವಾಯ ಯಾವುದರಿಂದಲೂ ಹಿಂಜರಿಯುವುದಿಲ್ಲ.

**ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂದ್ವಿಜಾನತಃ ।**
**ತತ್ರ ಕೋ ಮೋಹಃ ಕಃ ಶೋಕಃ ಏಕತ್ವಮನುಪಶ್ಯತಃ** || ೭ ||

**ಶ್ರೀ ಶಂಕರ**.- ಯಾವ ಕಾಲದಲ್ಲಿ ಇಲ್ಲವೆ ಯಾವ ಆತ್ಮನಲ್ಲಿ ಆ ಎಲ್ಲ ಭೂತಗಳು ಪರಮಾರ್ಥವಾದ ಆತ್ಮದರ್ಶನದಿಂದ ಆತ್ಮವೇ ಆದವೋ, ಏಕವೆಂಬುದಾಗಿ ಪರಮಾರ್ಥವಸ್ತುವನ್ನು ತಿಳಿದ ಆ ಕಾಲದಲ್ಲಿ ಇಲ್ಲವೆ ಆ ಆತ್ಮನಲ್ಲಿ ಎಲ್ಲಿಯ ಮೋಹ, ಎಲ್ಲಿಯ ಶೋಕ ?

ಶೋಕಮೋಹಗಳು ಕಾಮುಕರ್ಮಬೀಜವನ್ನು ತಿಳಿಯದವನಿಗೆ ಆಗುತ್ತವೆ, ಆಕಾಶದಂತಿದ್ದ ವಿಶುದ್ಧವಾದ ಆತ್ಮದ ಏಕತ್ವವನ್ನು ಬಲ್ಲವನಿಗೆ ಅಲ್ಲ. ಶೋಕವೆಂದರೆ ಇಷ್ಟವಾದ ವಸ್ತುವನ್ನು ಕುರಿತು ಚಿಂತಿಸುವವನಿಗೆ ಉಂಟಾದ ಅಸುಖ, ಆ ವಸ್ತುವಿನ ಬಗ್ಗೆ ಉಂಟಾದ ತೃಷ್ಣೆಯ ಬಾಧೆಯುಳ್ಳವನ ಕಾಮುಬೀಜ. ಮೋಹವೆಂದರೆ ವಿಪರೀತ ಜ್ಞಾನದಿಂದ ಉಂಟಾದ, ಅವಿವೇಕದಿಂದ ಕೂಡಿದ ಭ್ರಮೆ. 'ಕೋ ಮೋಹಃ ಕಃ ಶೋಕಃ' ಎಂಬಲ್ಲಿ ಅವಿದ್ಯೆಯ ಫಲಗಳಾದ ಶೋಕಮೋಹಗಳ ಅಸಂಭವವನ್ನು ಆತ್ಮವಿದನಲ್ಲಿ ಪ್ರದರ್ಶಿಸಿ ಸಕಾರಣವಾದ ಸಂಸಾರದ ಅತ್ಯಂತ ಉಚ್ಛೇದವನ್ನು ಮಾಡಬೇಕೆಂಬುದು ಪ್ರದರ್ಶಿತವಾಗಿದೆ.

**ಶ್ರೀ ಮಧ್ವ**:- ಯಾವ ಪರಮಾತ್ಮನಲ್ಲಿ ಸಮಸ್ತ ಪ್ರಾಣಿಗಳು ಇರುತ್ತವೋ ಅಂಥ ಶ್ರೀಪರಮಾತ್ಮನೇ ಅವುಗಳಲ್ಲಿ ಇದ್ದಾನೆ. ಈ ಪ್ರಕಾರವಾಗಿ ಚೆನ್ನಾಗಿ ತಿಳಿಯುವವನಿಗೆ, ಐಕ್ಯವನ್ನು ತಿಳಿಯುವವನಿಗೆ ಏನು ಅಜ್ಞಾನ? ಯಾವ ದುಃಖ?

ಸರ್ವಭೂತಗಳಲ್ಲಿ ಒಬ್ಬನೇ ಪರಮಾತ್ಮನೆಂದು ಅವನ ಏಕತ್ವವನ್ನು ತಿಳಿಯುವವನಿಗೆ ಎಲ್ಲಿಯ ಮೋಹ? ಈ ಮೊದಲಿನ ಮಂತ್ರದಲ್ಲಿ ಹೇಳಿದ್ದನ್ನೇ ಇಲ್ಲಿ ಹೇಳಿದ್ದರೂ ತಿಳಿದವನಿಗೆ ಶೋಕ ಮೋಹಗಳಿಲ್ಲವೆಂಬ ಹೆಚ್ಚಿನ ಮಾತು ಇಲ್ಲಿದೆ.

**ಶ್ರೀ ಅರವಿಂದ**:-- ಯಾರಲ್ಲಿ ಆತ್ಮವೇ ಭೂತ( ಆಗುವಿಕೆ )ಗಳಾದ ಎಲ್ಲ ಇರುವಿಕೆಗಳಾಗಿರುತ್ತದೋ --ಯಾಕಂದರೆ ಅವನಿಗೆ ಪೂರ್ಣಜ್ಞಾನವಾಗಿರುತ್ತದೆ- - ಎಲ್ಲ ಕಡೆಗೆ ಏಕತ್ವವನ್ನು ಕಾಣುವ ಅಂಥವನಿಗೆ ಎಲ್ಲಿಯ ಮೋಹ, ಎಲ್ಲಿಂದ ಶೋಕ?

'ಸರ್ವಾಣಿ ಭೂತಾನಿ' ಎಂದರೆ ಶಬ್ದಶಃ 'ಆಗಿರುವ ಎಲ್ಲ ವಸ್ತುಗಳು' ಎಂಬುದು ಸ್ವಸ್ಥನೂ ಅವಿಕಾರಿಯೂ ಆದ ಆತ್ಮನಿಗೆ ವಿರುದ್ಧವಾದುದು. ಸಾಮಾನ್ಯವಾಗಿ 'ಎಲ್ಲ ಪ್ರಾಣಿಗಳು' ಎಂದದರ ಅರ್ಥ. ಆದರೆ ಅದರ ಶಬ್ದಶಃ ಇದ್ದ ಅರ್ಥವನ್ನು 'ಭೂತಾನಿ ಅಭೂತ್' ( ಆಗುವಿಕೆ ಆದವು ) ಎಂಬ ಪದದಿಂದ ಒತ್ತು ಕೊಟ್ಟು ಹೇಳಿದಂತಿದೆ. ಇದರಲ್ಲಿಯ ಭಾವಾರ್ಥವೆಂದರೆ ಯಾವುದರಿಂದ ತನ್ನಲ್ಲಿಯ ಏಕಾತ್ಮವು ಎಲ್ಲ ಭೂತವಸ್ತುಗಳನ್ನು ತನ್ನ ಒಳಗುಮಾಡಿಕೊಳ್ಳುವಂತೆ ತನ್ನ ವಿಸ್ತರಿಸಿಕೊಂಡು, ವಿಶ್ವಚಲನದಲ್ಲಿಯ ವಿವಿಧ ರೂಪಗಳಲ್ಲಿ ಏಕವಾದ ಆತ್ಮವು ತೋರುತ್ತಿರುವ ನಿತ್ಯಲೀಲೆಯನ್ನು ಅನುಭವಿಸಬಲ್ಲುದೋ ಅಂಥ ಶ್ರೇಷ್ಠ ಪ್ರಜ್ಞೆಯನ್ನು ಮನುಷ್ಯನು ಪಡೆಯಬೇಕು.

**ಸ ಪರ್ಯಗಾತ್ ಶುಕ್ರಮಕಾಯಮವ್ರಣಂ ಅಸ್ನಾವಿರಂ ಶುದ್ಧಮಪಾಪವಿದ್ಧಂ ।**
**ಕವಿರ್ಮನೀಷೀ ಪರಿಭೂಃ ಸ್ವಯಂಭೂಃ ಯಾಥಾತಥ್ಯತೋಽರ್ಥಾನ್**
**ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ ॥ ೮ ॥**

**ಶ್ರೀ ಶಂಕರ :** ಆತ್ಮನು ಆಕಾಶದಂತೆ ಸರ್ವವ್ಯಾಪಿಯಾದವನು. ಅವನು ಶುಭ್ರ ಅಂದರೆ ದೀಪ್ತಿಮಂತನು, ಶರೀರರಹಿತನು, ಅಕ್ಷತನು, ನರಗಳಿಲ್ಲದವನು, ನಿರ್ಮಲನು, ಪಾಪವರ್ಜಿತನು, ಕ್ರಾಂತದರ್ಶಿ ಅಂದರೆ ಸರ್ವದೃಕ್, ಸರ್ವಜ್ಞ ಈಶ್ವರನು, ಎಲ್ಲರ ಮೇಲೆ ಇರತಕ್ಕವನು, ತಾನೇ ತಾನಾಗಿ ಆದವನು, ಇಂಥ ನಿತ್ಯಮುಕ್ತನಾದ ಈಶ್ವರನು ನಿತ್ಯವಾದ

ಸಂವತ್ಸರಗಳಿಗೋಸ್ಕರ ಕರ್ಮವಿದ್ದಂತೆ ಫಲವೆಂಬುದಾಗಿ ಕರ್ತವ್ಯಪದಾರ್ಥಗಳನ್ನು ಗೊತ್ತು ಪಡಿಸಿದನು.

'ಅಕಾಯಂ' ಇದರಿಂದ ಆತ್ಮನು ಲಿಂಗಶರೀರವರ್ಜಿತನೆಂದೂ 'ಅವ್ರಣಮಸ್ನಾವಿರಂ' ಇದರಿಂದ ಸ್ಥೂಲಶರೀರರಹಿತನೆಂದೂ 'ಶುದ್ಧಂ' ಎಂದರೆ ಅವಿದ್ಯಾಮಲವಿಲ್ಲದಾಗಿ ಕಾರಣ-ಶರೀರವರ್ಜಿತನೆಂದೂ ಸೂಚಿಸಿದೆ. ಶುಕ್ರಂ ಮುಂತಾದ ಮೊದಲಿನ ಪಾದದ ವಿಶೇಷಣಗಳನ್ನು ಮುಂದಿನ ಪಾದಕ್ಕೆ ಅನುಸರಿಸಿ ಪುಲ್ಲಿಂಗವಾಗಿ ಗ್ರಹಿಸಬೇಕು. ಕವಿ ಎಂದರೆ ಕ್ರಾಂತದರ್ಶಿ, ದ್ರಷ್ಟಾ; ಇಂದ್ರಿಯಗಳನ್ನು ಮೀರಿ ಭೂತಭವಿಷ್ಯಕಾಲದಲ್ಲಿ ನೋಡಬಲ್ಲವನನ್ನು ದ್ರಷ್ಟಾ ಎನ್ನುವರು. ಮನೀಷಿ ಅಂದರೆ ಮನಸ್ಸಿನ ಈಶಿತಾ, ಒಡೆಯ, ಮನನಾದಿ ವ್ಯಾಪಾರದ ನಿಯಂತಾ, ಮನಸ್ಸಿಗೂ ಸಾಕ್ಷಿಯಾದವನು. ಈ ಕರ್ಮದ ಫಲವು ಇದು ನಿಶ್ಚಿತವಾಗಿ ಆಗುವುದು ಎಂಬ ನಿಯಮಗೋಚರತ್ವವೇ ಯಾಥಾತಥ್ಯ, ಆದರೆ ಅದು ಪರಮಾರ್ಥ ಸತ್ಯತೆಯಲ್ಲ. ಈ ಉಪನಿಷತ್ತಿನ ಮೊದಲನೆಯ ಮಂತ್ರ ಜ್ಞಾನನಿಷ್ಠರಿಗೆ, ಎರಡನೆಯದು ಕರ್ಮನಿಷ್ಠರಿಗೆ ಎಂದು ಹಿಂದೆ ಹೇಳಿದೆ. ಅದೇ ಸರಣಿಯಲ್ಲಿ ಪ್ರಸ್ತುತ ಮಂತ್ರವು ಅಧಿಕಾರಿಗಳಾದ ಜ್ಞಾನನಿಷ್ಠರಿಗೆ ಆತ್ಮಸ್ವರೂಪವನ್ನು ವರ್ಣಿಸಿದೆ. ಎಲ್ಲರಿಗೂ ಇದು ಅಲ್ಲವೆಂದು ಹೇಗೆ? ಹೇಗೆಂದರೆ ಅಕಾಮಿಗಳಾದ ಜ್ಞಾನನಿಷ್ಠರಿಗೆ ಸಾಧ್ಯಸಾಧನಭೇದವಳಿದು ಆತ್ಮೈಕವಿಜ್ಞಾನವುಂಟಾಗಲು ಯಾವುದೇ ಕರ್ಮವನ್ನು ಮಾಡಲು ಅವರು ಬಯಸುವುದಿಲ್ಲ. ಅಂತೇ ಅವರನ್ನು ಕುರಿತು 'ಯಸ್ಮಿನ್ ಸರ್ವಾಣಿ ಭೂತಾನಿ' ಮುಂತಾದ ಮಂತ್ರಗಳಿರುತ್ತವೆ. ಅದೇ ಕರ್ಮನಿಷ್ಠರು ಮಾಡುವ ಕರ್ಮಗಳಿಗೆ ಬೇರೆ ಫಲವನ್ನು ಹೇಳುವ ಮಂತ್ರಗಳಿರುತ್ತವೆ. ದೇವತೋಪಾಸನೆ ಎಂಬ ಕರ್ಮದಿಂದಲೂ ಮೋಕ್ಷ ಇಲ್ಲವೆ ಪರಮಾತ್ಮಜ್ಞಾನಕ್ಕಿಂತ ಭಿನ್ನವಾದ ದೇವಲೋಕಪ್ರಾಪ್ತಿಯೆಂಬ ಫಲವನ್ನು ಹೇಳಲಾಗಿದೆ.

**ಶ್ರೀ ಮಧ್ವ** :- - ಆ ಜ್ಞಾನಿಯು ಪರಮಾತ್ಮನನ್ನು ಪ್ರಾಪಿಸುವವನಾಗುತ್ತಾನೆ. ಆ ಪರಬ್ರಹ್ಮನು ಶೋಕರಹಿತ, ಲಿಂಗದೇಹರಹಿತ, ನ್ಯೂನರಹಿತ( ಪೂರ್ಣ ), ಸ್ಥೂಲದೇಹರಹಿತ, ಪವಿತ್ರ, ಪಾಪಲೇಪರಹಿತ, ಸರ್ವಜ್ಞ, ಮನಃಪ್ರೇರಕ, ಸಮಸ್ತವನ್ನು ವಶೀಕರಿಸುವವನು, ಅನ್ಯರನ್ನು ಆಶ್ರಯಿಸದಾತನು ಇದ್ದು ಅನಾದಿಯಾದ ಸಂವತ್ಸರಗಳಲ್ಲಿ ಯಥಾರ್ಥವಾದ ಪದಾರ್ಥಗಳನ್ನು ನಿರ್ಮಾಣಮಾಡಿದನು.

ಶುಕ್ರ ಎಂದರೆ ಶೋಕರಹಿತ, ಅವ್ರಣ ಎಂದರೆ ನಿತ್ಯಪೂರ್ಣ, ಕವಿಯೆಂದರೆ ಸರ್ವಜ್ಞ, ಬ್ರಹ್ಮಾದಿ ಎಲ್ಲ ಮನಸ್ಸುಗಳ ಹಾಗೂ ಪ್ರಕೃತಿಯಾದ ಲಕ್ಷ್ಮೀದೇವಿಯ ಮನಸ್ಸಿನ ಪ್ರೇರಕನಾಗಿರುವುದರಿಂದ ಮನೀಷಿ. ಈ ಪರಬ್ರಹ್ಮನು ಸತ್ಯವಾದ ಜಗತ್ತನ್ನು ಕೊನೆಮೊದಲಿಲ್ಲದ ಕಾಲಗಳಲ್ಲಿ ಪ್ರವಾಹದ ಒಂದೇ ಪ್ರಕಾರವಾಗಿ ನಿಯತವಾಗಿ ಸೃಷ್ಟಿಸಿದನು.

**ಶ್ರೀ ಅರವಿಂದ** :— ಅವನೇ ಸರ್ವತ್ರ ಹೋದವನು - ಶುಭ್ರ, ಅಶರೀರ, ಅಪೂರ್ಣತೆಯ ಕಲಂಕರಹಿತ, ನಿರಗಳಿಲ್ಲದಾತ, ಶುದ್ಧ, ಪಾಪ ಇಲ್ಲವೆ ಕೆಡುಕಿನಿಂದ ಅವಿದ್ಧನಾದ ಅವನು. ದ್ರಷ್ಟಾ, ಮನೀಷಿ, ಪರಿಭು ( ಸರ್ವತ್ರ ಆಗತಕ್ಕವನು ), ಸ್ವಯಂಭು ಆದ ಅವನು ಶಾಶ್ವತವಾದ ಕಾಲದಿಂದ ಸ್ವಭಾವಕ್ಕನುಗುಣವಾಗಿ ಪದಾರ್ಥಗಳ ವ್ಯವಸ್ಥೆಯನ್ನು ಸಂಪೂರ್ಣವಾಗಿ ಮಾಡಿದ್ದಾನೆ.

ವೈದಿಕ ವಿಚಾರಪ್ರಣಾಲಿಯಲ್ಲಿ ಕವಿ ( ದ್ರಷ್ಟಾ ) ಹಾಗೂ ಮನೀಷಿ ( ವಿಚಾರಕ ) ಇವುಗಳ ನಡುವೆ ಸ್ಪಷ್ಟವಾದ ಭೇದವಿದೆ. ಮೊದಲನೆಯದಾದ ಕವಿಪದವು ದೈವಿಕವಾದ, ಬುದ್ಧ್ಯತೀತವಾದ ಜ್ಞಾನವನ್ನು ಸೂಚಿಸುತ್ತದೆ. ಈ ಜ್ಞಾನದಿಂದ ನೇರವಾದ ದರ್ಶನ ಮತ್ತು ಪ್ರತಿಭಾನಗಳ ಮೂಲಕ ಸತ್ಯವು ಕಾಣುತ್ತದೆ, ನಿಜವಾದ ಸಂಬಂಧಗಳಲ್ಲಿ ತತ್ತ್ವಗಳೂ ವಸ್ತುರೂಪಗಳೂ ತಿಳಿಯುತ್ತವೆ. ಎರಡನೆಯ ಮನೀಷಿಪದವು ಶ್ರಮನಿಷ್ಠವಾದ ಮನೋವೃತ್ತಿಯನ್ನು ಸೂಚಿಸುತ್ತದೆ. ಈ ಮನೋವೃತ್ತಿ ಸಖಂಡವಾದ ಪ್ರಜ್ಞೆಯ ನೆಲೆಯಿಂದ ಸೃಷ್ಟವಸ್ತುಗಳ ಶಕ್ಯತೆಯನ್ನು ಅರಿತುಕೊಳ್ಳಲು ಹೆಣಗುತ್ತದೆ : ಕೆಳಗಡೆ ನಾಮರೂಪದಲ್ಲಿ ಆದ ಪ್ರತ್ಯಕ್ಷ ಅಭಿವ್ಯಕ್ತಿಯನ್ನೂ ಮೇಗಡೆ ಸ್ವಯಂಭುವಾದ ಬ್ರಹ್ಮನಲ್ಲಿಯ ಸತ್ಯತೆಯನ್ನೂ ಅರಿಯುತ್ತದೆ.

**ಅಂಧಂತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ ।**
**ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಂ ರತಾಃ ॥ ೯ ॥**

**ಶ್ರೀ ಶಂಕರ**:— ಯಾರು ಅವಿದ್ಯೆಯೆಂದರೆ ಕೇವಲ ಅಗ್ನಿಹೋತ್ರಾದಿ ಲಕ್ಷಣವಾದ ಕರ್ಮವನ್ನು ಉಪಾಸಿಸುವರೊ ಅವರು ಅದರ್ಶನರೂಪವಾದ ತಮಸ್ಸನ್ನು ಸೇರುತ್ತಾರೆ. ಕರ್ಮವನ್ನು ಬಿಟ್ಟು ಯಾರು ವಿದ್ಯೆಯೊಂದರಲ್ಲಿಯೆ ಅಂದರೆ ದೇವತಾಜ್ಞಾನದಲ್ಲಿ ರತರಾಗಿರುತ್ತಾರೊ ಅವರು ಅದಕ್ಕೂ ಹೆಚ್ಚಿನ ತಮಸ್ಸನ್ನು ಸೇರುತ್ತಾರೆ.

ವಿದ್ಯೆಯಿಂದ ಬೇರೆಯಾದದ್ದು ಅವಿದ್ಯೆ ಅಂದರೇ ಕರ್ಮ. ಕರ್ಮವು ವಿದ್ಯೆಗೆ ವಿರೋಧಿಯಾದುದು. ಕರ್ತೃತ್ವಬುದ್ಧಿಯುಕ್ತನಾದವನಿಗೆ ಕರ್ಮ, ಕರ್ತೃತ್ವಬುದ್ಧಿಯಿಲ್ಲದವನಿಗೆ ಜ್ಞಾನ ಎಂದಿದ್ದರಿಂದ ಕರ್ಮಕ್ಕೂ ವಿದ್ಯೆಗೂ ವಿರೋಧ. ವಿದ್ಯೆಯೆಂದರೆ ದೇವತೋಪಾಸನೆ ಎಂಬ ವಿಶೇಷಾರ್ಥದಲ್ಲಿ ಎರಡನೆಯ ಪಾದದಲ್ಲಿ ಗ್ರಹಿಸಬೇಕು. ಇವರಲ್ಲಿ ತೊಡಗಿದವರು ' ನಾನು ನನ್ನದು ' ಎಂಬ ಅಭಿಮಾನರೂಪವಾದ ತಮಸ್ಸನ್ನು ಸೇರುತ್ತಾರೆ.

**ಶ್ರೀ ಮಧ್ವ** .— ಯಾರು ಪರಮಾತ್ಮನ ಯಥಾರ್ಥ ಸ್ವರೂಪವನ್ನು ಬಿಟ್ಟು ತದ್ವಿರುದ್ಧವಾದ ಆಕಾರವನ್ನು ಧ್ಯಾನ ಮಾಡುತ್ತಾರೋ ಅವರು ಅಂಧಂತಮಸ್ಸನ್ನು ಪ್ರವೇಶಿಸುತ್ತಾರೆ. ಯಾರು ತತ್ತ್ವಜ್ಞಾನದಲ್ಲಿಯೇ ಆಸಕ್ತರಾಗಿರುವರೋ ಅಂದರೆ ಮಿಥ್ಯಾಜ್ಞಾನಿಗಳ ನಿಂದಕರಾಗುವುದಿಲ್ಲವೋ ಅವರು ಮಿಥ್ಯಾಜ್ಞಾನಿಗಳು ಹೊಂದತಕ್ಕ ತಮಸ್ಸಿಗಿಂತಲೂ ಅಧಿಕವಾದ ಅಂಧಂತಮಸ್ಸನ್ನು ನಿಸ್ಸಂಶಯವಾಗಿ ಪ್ರವೇಶಮಾಡುತ್ತಾರೆ.

**ಶ್ರೀ ಅರವಿಂದ** :- - ಅವಿದ್ಯೆ ಇಲ್ಲವೆ ಅಜ್ಞಾನವನ್ನು ಯಾರು ಅನುಸರಿಸುತ್ತಾರೋ ಅವರು ಅಂಧಕಾರಮಯವಾದ ಕತ್ತಲೆಯಲ್ಲಿ ಸೇರುತ್ತಾರೆ ಯಾರು ವಿದ್ಯೆ ಇಲ್ಲವೆ ಜ್ಞಾನವೊಂದರಲ್ಲಿಯೆ ರತರಾಗಿರುತ್ತಾರೋ ಅವರು ಅದಕ್ಕೂ ಹೆಚ್ಚಿನ ಕತ್ತಲೆಯಲ್ಲಿ ಎಂಬಂತೆ ಸೇರುತ್ತಾರೆ.

**ಅನ್ಯದೇವಾಹುರ್ವಿದ್ಯಯಾ ಅನ್ಯದಾಹುರವಿದ್ಯಯಾ ।**
**ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚಚಕ್ಷಿರೇ ॥ ೧೦ ॥**

**ಶ್ರೀ ಶಂಕರ** :— ವಿದ್ಯೆಯ ಫಲ ಬೇರೆ, ಅವಿದ್ಯೆಯ ಫಲ ಬೇರೆ ಎಂದು ಕರ್ಮ ಮತ್ತು ಜ್ಞಾನವನ್ನು ನಮಗೆ ವ್ಯಾಖ್ಯಾನ ಮಾಡಿ ಹೇಳಿದ ಧೀರರಿಂದ ಕೇಳಿದ್ದೇವೆ. 'ವಿದ್ಯಯಾ ದೇವಲೋಕಃ' ಮುಂತಾದ ಶ್ರುತಿವಾಕ್ಯಗಳಿಂದ ವಿದ್ಯೆಯೆಂದರೆ ದೇವತೋಪಾಸನೆಯ ಫಲವೂ, 'ಕರ್ಮಣಾ ಪಿತೃಲೋಕಃ' ಮುಂತಾದ ವಾಕ್ಯಗಳಿಂದ ಅವಿದ್ಯೆಯ ಅಂದರೆ ಕರ್ಮದ ಫಲವೂ ಬೇರೆಬೇರೆಯಾಗಿ ಹೇಳಲಾಗಿದೆ.

**ಶ್ರೀ ಮಧ್ವ** :— ವಿದ್ಯೆಯೆಂದರೆ ತತ್ತ್ವಜ್ಞಾನದಿಂದ ಮೋಕ್ಷರೂಪಫಲದಲ್ಲಿ ಏಕದೇಶವೇ (ಒಂದು ಭಾಗವೇ) ಹೊಂದತಕ್ಕುದೆಂದೂ ಅವಿದ್ಯೆಯೆಂದರೆ ಅನ್ಯಥಾಜ್ಞಾನಿನಿಂದೆಯಿಂದಲೂ ಅದರ ಏಕದೇಶವೇ ಹೊಂದತಕ್ಕುದೆಂದೂ ಯಾರು ನಮಗೆ ಮೋಕ್ಷಸಾಧನವನ್ನು ಸ್ಪಷ್ಟವಾಗಿ ಹೇಳಿದ್ದಾರೋ ಆ ಜ್ಞಾನಿಗಳ ಮುಖದಿಂದ ಕೇಳಿದ್ದೇವೆ.

**ಶ್ರೀ ಅರವಿಂದ** :— ವಿದ್ಯೆ ಇಲ್ಲವೆ ಜ್ಞಾನದಿಂದ ಬರುವಂಥದು ದಿಟವಾಗಿ ಬೇರೆ, ಅವಿದ್ಯೆ ಇಲ್ಲವೆ ಅಜ್ಞಾನದಿಂದ ಬರುವಂಥದು ಬೇರೆ ಎಂದು ಹೇಳುತ್ತಾರೆ. ನಮ್ಮ ಬುದ್ಧಿಗೆ ಇದು ಹೊಳೆಯುವಂತೆ ಮಾಡಿದ ಜಾಣರಿಂದ ಈ ಜ್ಞಾನವನ್ನು ಪಡೆದಿದ್ದೇವೆ.

'ಅನ್ಯದೇವ' ಇಲ್ಲಿ 'ಅನ್ಯದ್' ಇದಕ್ಕೆ 'ಏವ' ಇದರಿಂದ ಜೋರು ಬರುತ್ತದೆ. 'ಈ ಮೊದಲಿನ ಪದ್ಯದಲ್ಲಿ ವರ್ಣಿತವಾದ ಫಲಕ್ಕಿಂತ ತೀರ ಬೇರೆಯಾದ ಫಲವು ವಿದ್ಯೆ ಮತ್ತು ಅವಿದ್ಯೆಯಿಂದ ಉಂಟಾಗುತ್ತದೆ.' ಮುಂದಿನ ಪದ್ಯದಲ್ಲ 'ಅನ್ಯದ್' ಇದರ ವಿವರಣೆ ದೊರೆಯುತ್ತದೆ. 'ವಿದ್ಯೆಗೆ ಫಲವೊಂದು, ಅವಿದ್ಯೆಗೆ ಇನ್ನೊಂದು' ಎಂಬ ಸಾಮಾನ್ಯವಾದ ಅನುವಾದವು ಬಣ್ಣಬಳಿದ ಬೆಡಗಿನಿಂದ ಹೇಳಿದ ತೀರ ಪರಿಚಿತ ಅರ್ಥವೆಂದು ಎದ್ದು ಕಾಣುತ್ತದೆ. ಅದರಿಂದ ಇಲ್ಲಿಯ ವಿಚಾರಪ್ರಣಾಲಿಗೆ ಹೊಸಮಾತೇನೂ ದೊರೆಯುವುದಿಲ್ಲ ಹಾಗೂ ವಿಚಾರಕ್ರಮದಲ್ಲಿ ಅದಕ್ಕೆ ಯಾವ ಸ್ಥಾನವೂ ಲಭಿಸುವುದಿಲ್ಲ.

**ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಂ ಸಹ ।**
**ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽಮೃತಮಶ್ನುತೇ ॥ ೧೧ ॥**

**ಶ್ರೀ ಶಂಕರ** :— ವಿದ್ಯೆ (ದೇವತಾಜ್ಞಾನ) ಮತ್ತು ಅವಿದ್ಯೆ (ಕರ್ಮ) ಇವು ಒಬ್ಬನೇ ಪುರುಷನಿಂದ ಅನುಷ್ಠೇಯ ಅಂದರೆ ಆಚರಿಸಲ್ಪಡತಕ್ಕುವು ಎಂದು ಯಾವನು ತಿಳಿಯುವನೋ ಅವನು ಅಗ್ನಿಹೋತ್ರಾದಿ ಕರ್ಮದಿಂದ ಸ್ವಾಭಾವಿಕವಾದ ಅಂದರೆ ಅಶಾಸ್ತ್ರವಿಹಿತವಾದ ಕರ್ಮ ಮತ್ತು ಜ್ಞಾನವೆಂಬ ಮೃತ್ಯುವನ್ನು ದಾಟಿ ವಿದ್ಯೆ ಅಂದರೆ ದೇವತಾಜ್ಞಾನದಿಂದ ಅಮೃತಂ ಅಂದರೆ ದೇವತಾತ್ಮಭಾವವನ್ನು ಹೊಂದುತ್ತಾನೆ.

ದೇವತಾತ್ಮಗಮನ ಇಲ್ಲವೆ ದೇವತಾತ್ಮದಲ್ಲಿ ಒಂದಾಗುವುದಕ್ಕೆ ಅಮೃತವೆನ್ನುತ್ತಾರೆ. ಅದು ಬಹುಕಾಲ ನಿಲ್ಲುವುದರಿಂದ ಗೌಣವೃತ್ತಿಯಿಂದ ಅಮೃತ ಎನ್ನುವುದುಂಟು.

**ಶ್ರೀ ಮಧ್ವ** : ಪರಮಾತ್ಮನ ಯಥಾರ್ಥಜ್ಞಾನವನ್ನೂ ಮಿಥ್ಯಾಜ್ಞಾನದ ನಿಂದನವನ್ನೂ ಒಂದೇ ಮೋಕ್ಷಾಖ್ಯ ಪುರುಷಾರ್ಥಕ್ಕೆ ಸಾಧನವೆಂಬುದಾಗಿ ಯಾವಾತನು ತಿಳಿಯು

ತ್ತಾನೋ ಅವನು ಅವಿದ್ಯೆ ಅಂದರೆ ಅನ್ಯಥಾಜ್ಞಾನದ ನಿಂದನದಿಂದ ದುಃಖ ಅಜ್ಞಾನ ಮುಂತಾದ ಅನಿಷ್ಟವನ್ನು ದಾಟಿ, ವಿದ್ಯೆ ಅಂದರೆ ಸಮ್ಯಕ್ ಜ್ಞಾನದಿಂದ ಆನಂದಾನುಭವರೂಪವಾದ ಮೋಕ್ಷವನ್ನು ಹೊಂದುತ್ತಾನೆ.

ಸಮ್ಯಕ್ ಜ್ಞಾನಕ್ಕೆ ಆನಂದಾನುಭವವೂ ಅನ್ಯಥಾಜ್ಞಾನನಿಂದನಕ್ಕೆ ದುಃಖಾದ್ಯನಿಷ್ಟ ನಿವೃತ್ತಿಯೂ ಫಲವಾಗಿರುವದರಿಂದ ಈ ಎರಡೂ ಫಲಗಳಿಂದ ಕೂಡಿರುವ ಮೋಕ್ಷಕ್ಕಾಗಿ ಸಮ್ಯಕ್ ಜ್ಞಾನವೂ ಅನ್ಯಥಾಜ್ಞಾನನಿಂದನವೂ ಆವಶ್ಯಕವು. ಅನ್ಯಥಾಜ್ಞಾನವನ್ನು ನಿಂದಿಸುವುದೆಂದರೆ, ಅನ್ಯಥಾಜ್ಞಾನಿಗಳನ್ನು ಬಯ್ಯುವುದೆಂತಲ್ಲ. ಅನ್ಯಥಾಜ್ಞಾನದಲ್ಲಿ ಅಸಹ್ಯವು, ಅನಾದರವು ತನಗೂ ಇತರರಿಗೂ ಉಂಟಾಗುವಂತೆ ತಿಳಿಯುವುದೂ ಬೋಧಿಸುವುದೂ ಅನ್ಯಥಾಜ್ಞಾನದ ದೂಷಣೆಯಾಗಿರುತ್ತದೆ.

**ಶ್ರೀ ಅರವಿಂದ** :— ಒಂದರಲ್ಲಿಯ ಎರಡೆಂದು ವಿದ್ಯೆ, ಅವಿದ್ಯೆಯನ್ನು ಯಾವನು ತಿಳಿಯುತ್ತಾನೋ ಅವಿದ್ಯೆಯಿಂದ ಮೃತ್ಯುವನ್ನು ದಾಟಿ ವಿದ್ಯೆಯಿಂದ ಅಮೃತಪದವಿಯನ್ನು ಅನುಭವಿಸುತ್ತಾನೆ. ವಿದ್ಯೆಯೆಂದರೆ ಏಕತ್ವದ ಪ್ರಜ್ಞೆ, ಅವಿದ್ಯೆ ಅನೇಕತ್ವದ ಪ್ರಜ್ಞೆ, ಇವರ ವಿಸ್ತಾರವಿವರಣೆ ಮೂರನೆಯ ಚಲನದಲ್ಲಿದೆ. ಈ ಲೇಖನದ ಎರಡನೆಯ ಭಾಗದಲ್ಲಿ ಅದು ಬರುವುದು.

**ಅಂಧಂ ತಮಃ ಪ್ರವಿಶಂತಿ ಯೇಽಸಂಭೂತಿಮುಪಾಸತೇ |**
**ತತೋ ಭೂಯ ಇವ ತೇ ತಮೋ ಯ ಉ ಸಂಭೂತ್ಯಾಂ ರತಾಃ || ೧೨ ||**

**ಶ್ರೀ ಶಂಕರ**:— ಪ್ರಕೃತಿಯೂ ಕಾರಣವೂ ಆದ ಅವಿದ್ಯೆಯನ್ನು ಯಾರು ಉಪಾಸಿಸುವರೋ ಅವರು ಅದರ್ಶನಾತ್ಮಕವಾದ ತಮಸ್ಸನ್ನು ಸೇರುತ್ತಾರೆ. ಹಿರಣ್ಯಗರ್ಭನೆಂಬ ಹೆಸರಿನ ಕಾರ್ಯಬ್ರಹ್ಮನನ್ನು ಯಾರು ಭಜಿಸುತ್ತಾರೋ ಅವರು ಅದಕ್ಕೂ ಹೆಚ್ಚಿನ ತಮಸ್ಸನ್ನು ಸೇರುತ್ತಾರ.

ಸಂಭೂತಿಯೆಂದರೆ ಯಾವದಾದರೂ ಕಾರ್ಯದ ಸಂಭವನ, ಆಗುವಿಕೆ, ಅದರಿಂದ ಬೇರೆಯಾದದ್ದು ಅಸಂಭೂತಿ ಎಂದರೆ ಪ್ರಕೃತಿ, ಕಾರಣ, ಅವಿದ್ಯೆ, ಅವ್ಯಾಕೃತವೆಂಬ ಹೆಸರಿನದು. ಸಾಧ್ಯಸಾಧನರೂಪದಲ್ಲ ವ್ಯಕ್ತವಾದ ಜಗತ್ತು ವ್ಯಾಕೃತ ಎಂಬುದು. ಅವ್ಯಾಕೃತವೆಂದರೆ ಹಾಗೆ ಅಭಿವ್ಯಕ್ತವಾಗದೆ ಪೂರ್ವಾವಸ್ಥೆಯಲ್ಲಿದ್ದುದು, ಅದು ಅವಿದ್ಯೆಯಿಂದ ಕಲ್ಪಿತವಾದ್ದರಿಂದ ಅದಕ್ಕೇ ಅವಿದ್ಯೆಯೆಂದು ಕರೆದಿದೆ. ಅವ್ಯಾಕೃತವಾದ ಅವಿದ್ಯೆಯು ಕಾಮುಕರ್ಮಗಳಿಗೆ ಮೂಲ. ಅದಿಲ್ಲದಿದ್ದರೆ ವ್ಯಾಕೃತವಾದ ಜಗತ್ತಿಲ್ಲ, ಅದಿಲ್ಲದೆ ಕಾಮುಕರ್ಮಗಳಿಲ್ಲ. ಅಂತೇ ಕಾಮುಕರ್ಮಗಳ ಬೀಜವೆಂದರೆ ಅವ್ಯಾಕೃತ.

**ಶ್ರೀ ಮಧ್ವ** :— ಪರಮಾತ್ಮನನ್ನು ಜಗತ್ತಿಗೆ ಸೃಷ್ಟಿಕರ್ತನಲ್ಲದವನನ್ನಾಗಿ ತಿಳಿದುಕೊಂಡು ಯಾರು ಉಪಾಸಿಸುತ್ತಾರೋ ಅವರು ಮೊದಲು ಹೇಳಿದ ನರಕವನ್ನೇ ಪ್ರವೇಶಿಸುತ್ತಾರೆ. ಯಾರು ಸೃಷ್ಟಿಕರ್ತೃತ್ವದಲ್ಲಿ ಮಾತ್ರ ಆಸಕ್ತರಾಗಿರುತ್ತಾರೋ ಅವರು ಅದಕ್ಕಿಂತಲೂ ಅಧಿಕವಾಗಿ ತೋರುವ ನರಕವನ್ನು ಸೇರುತ್ತಾರೆ.

**ಶ್ರೀ ಅರವಿಂದ**:— ಯಾರು ಜನ್ಮರಾಹಿತ್ಯ ಇಲ್ಲವೆ ಜನ್ಮಮುಕ್ತಿಯನ್ನು ಅನುಸರಿಸುತ್ತಾರೋ ಅವರು ಅಂಧಕಾರಮಯವಾದ ಕತ್ತಲೆಯಲ್ಲಿ ಹೊಗುತ್ತಾರೆ. ಜನ್ಮವೊಂದರಲ್ಲಿಯೇ ಯಾರು ತೊಡಗುತ್ತಾರೋ ಅವರು ಇನ್ನೂ ಹೆಚ್ಚಿನ ಕತ್ತಲೆಯಲ್ಲಿ ಎಂಬಂತೆ ಹೊಗುತ್ತಾರೆ.

**ಅನ್ಯದೇವಾಹುಃ ಸಂಭವಾದನ್ಯದಾಹುರಸಂಭವಾತ್ ।**
**ಇತಿ ಶುಶ್ರುಮ ಧೀರಾಣಾಂ ಯೇನಸ್ತದ್ವಿಚಚಕ್ಷಿರೇ ॥ ೧೩ ॥**

**ಶ್ರೀ ಶಂಕರ**:— ಕಾರ್ಯಬ್ರಹ್ಮದ ಉಪಾಸನೆಯ ಫಲ ಬೇರೆ, ಅವ್ಯಾಕೃತ ಪ್ರಕೃತಿಯ ಉಪಾಸನೆಯ ಫಲ ಬೇರೆ ಎಂದು ಇದನ್ನು ವ್ಯಾಖ್ಯಾನಿಸಿ ನಮಗೆ ಹೇಳಿದ ಧೀರರಿಂದ ಕೇಳಿದ್ದೇವೆ.

ಕಾರ್ಯಬ್ರಹ್ಮದ ಉಪಾಸನೆಯಿಂದ ಅಣಿಮಾ, ಗರಿಮಾ ಮುಂತಾದ ಎಂಟು ಐಶ್ವರ್ಯಗಳ ಫಲವಿದೆ. ಅವ್ಯಾಕೃತ ಪ್ರಕೃತಿಯ ಉಪಾಸನೆಯಿ ಅಂಧಂತಮದಲ್ಲಿ ಪ್ರವೇಶವೆಂಬುದೇ ಫಲ. ಇದನ್ನೇ ಪೌರಾಣಿಕರು ಪ್ರಕೃತಿಲಯವೆನ್ನುತ್ತಾರೆ. ಸಂಸಾರದಲ್ಲಿಯ ಸುಖದುಃಖಾನುಭವದಿಂದ ಗಾಢನಿದ್ರೆಯಂತೆ ಪ್ರಕೃತಿಲಯವೂ ಪುರುಷನಿಂದ ಬಯಸಲ್ಪಡುವುದರಿಂದ ಇದು ಸಿದ್ಧವಾಗುತ್ತದೆ.

**ಶ್ರೀ ಮಧ್ವ**:— ಪರಮಾತ್ಮನ ಸೃಷ್ಟಿಕರ್ತೃತ್ವಜ್ಞಾನದಿಂದ ಮೋಕ್ಷದಲ್ಲಿ ಏಕದೇಶವೇ ಫಲವೆಂದೂ ಸಂಹಾರಕರ್ತೃತ್ವಜ್ಞಾನದಿಂದಲೂ ಹಾಗೇ ಬೇರೆ ಏಕದೇಶವೇ ಫಲವೆಂದೂ ಯಾರು ನಮಗೆ ಮೋಕ್ಷಸಾಧನವನ್ನು ಸ್ಪಷ್ಟವಾಗಿ ಹೇಳಿದ್ದಾರೋ ಅಂಥ ಜ್ಞಾನಿಗಳ ಮುಖದಿಂದ ಕೇಳಿದ್ದೇವೆ.

**ಶ್ರೀ ಅರವಿಂದ**: – ಜನ್ಮದಿಂದ ಬರತಕ್ಕುದು ದಿಟವಾಗಿ ಬೇರೆಯದು, ಜನ್ಮಮುಕ್ತಿಯಿಂದ ಬರತಕ್ಕುದು ಬೇರೆಯೆಂದು ಹೇಳಿದ್ದಾರೆ. ನಮ್ಮ ಮತಿಗೆ ಇದು ಹೊಳೆಯುವಂತೆ ಮಾಡಿದ ಜಾಣರಿಂದ ನಾವು ಪಡೆದ ಜ್ಞಾನವಿದು.

**ಸಂಭೂತಿಂ ಚ ವಿನಾಶಂ ಚ ಯಸ್ತದ್ವೇದೋಭಯಂ ಸಹ ।**
**ವಿನಾಶೇನ ಮೃತ್ಯುಂ ತೀರ್ತ್ವಾಸಂಭೂತ್ಯಾಮೃತಮಶ್ನುತೇ ॥ ೧೪ ॥**

**ಶ್ರೀ ಶಂಕರ**: – ಸಂಭೂತಿ ಮತ್ತು ವಿನಾಶವನ್ನು ಯಾವನು ಎರಡನ್ನೂ ಒಟ್ಟುಗೂಡಿಸಿ ತಿಳಿಯುತ್ತಾನೋ ಅವನು ವಿನಾಶದ ಉಪಾಸನೆಯಿಂದ ಮೃತ್ಯುವನ್ನು ದಾಟಿ ಅಸಂಭೂತಿ ಇಲ್ಲವೆ ಅವ್ಯಾಕೃತದ ಉಪಾಸನೆಯಿಂದ ಪ್ರಕೃತಿಲಯಲಕ್ಷಣವಾದ ಅಮೃತವನ್ನು ಪಡೆಯುತ್ತಾನೆ.

ವಿನಾಶವು ಯಾವ ಕಾರ್ಯದ ಧರ್ಮವೋ ಆ ಧರ್ಮಿಯೊಡನೆ ಅಭೇದವಾಗಿ ಹಿಡಿದು 'ವಿನಾಶ' ಎಂಬ ಪದವನ್ನು ಬಳಸಿದೆ. ಅದರ ಉಪಾಸನೆಯಿಂದ ಅನೈಶ್ವರ್ಯ, ಅಧರ್ಮ-ಕಾಮ ಮುಂತಾದ ದೋಷದಿಂದ ಒದಗಿದ ಮೃತ್ಯುವನ್ನು ದಾಟುವನು. ಹಿರಣ್ಯಗರ್ಭನ ಉಪಾಸನೆಯಿಂದಲೂ ಅಣಿಮಾದಿ ಐಶ್ವರ್ಯಪ್ರಾಪ್ತಿಯು ಫಲ, ಅದರಿಂದ ಅನೈಶ್ವರ್ಯಾದಿ

ಮೃತ್ಯುವನ್ನು ದಾಟುವನು. ' ಸಂಭೂತಿಂ ಚ ವಿನಾಶಂ ಚ ' ಇದರಲ್ಲಿ ' ಸಂಭೂತಿ 'ಯ ಹಿಂದಿನ ' ಅ ' ವರ್ಣ ಲೋಪವಾಗಿದೆ. ' ಅಸಂಭೂತಿ ' ಎಂದೇ ತಿಳಿಯಬೇಕು. ಯಾಕಂದರೆ ಪ್ರಕೃತಿಲಯವೆಂಬ ಫಲವನ್ನು ಶ್ರುತಿಯಲ್ಲಿ ಅಸಂಭೂತಿಗೆ ಮಾತ್ರ ಹೇಳಿದೆ.

**ಶ್ರೀ ಮಧ್ವ** :— ಸೃಷ್ಟಿಕರ್ತೃತ್ವ, ಸಂಹಾರಕರ್ತೃತ್ವ ಈ ಎರಡನ್ನೂ ಒಂದೇ ಮೋಕ್ಷಾಖ್ಯ ಪುರುಷಾರ್ಥಕ್ಕೆ ಸಾಧನೆ ಎಂಬುದಾಗಿ ಯಾವನು ತಿಳಿಯುತ್ತಾನೋ ಅವನು ಸಂಹಾರಕರ್ತೃತ್ವಜ್ಞಾನದಿಂದ ದುಃಖ, ಅಜ್ಞಾನ ಮುಂತಾದ ಅನಿಷ್ಟವನ್ನು ದಾಟಿ ಸೃಷ್ಟಿ ಕರ್ತೃತ್ವಜ್ಞಾನದಿಂದ ಮೋಕ್ಷೈಕದೇಶವನ್ನು ಹೊಂದುತ್ತಾನೆ.

**ಶ್ರೀ ಅರವಿಂದ** :- ಜನ್ಮ ಮತ್ತು ಜನ್ಮಮುಕ್ತಿ ಇವೆರಡನ್ನೂ ಒಂದರಲ್ಲಿಯ ಎರಡೆಂದು ಯಾವನು ತಿಳಿಯುತ್ತಾನೋ ಅವನು ಜನ್ಮಮುಕ್ತಿಯಿಂದ ಮೃತ್ಯುವನ್ನು ದಾಟಿ ಜನ್ಮದಿಂದ ಅಮೃತತ್ವವನ್ನು ಹೊಂದುತ್ತಾನೆ.

**ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಽಪಿಹಿತಂ ಮುಖಂ |**
**ತತ್ ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ || ೧೫ ||**

**ಶ್ರೀ ಶಂಕರ** : ಹೇ ಆತ್ಮನ್, ಜ್ಯೋತಿರ್ಮಯವಾದ ಪಾತ್ರದಿಂದ ಮುಚ್ಚಿದಂತಿರುವ ಸತ್ಯದ ಅಂದರೆ ಆದಿತ್ಯಮಂಡಲದಲ್ಲಿಯ ಬ್ರಹ್ಮನ ದ್ವಾರವು ಆಚ್ಛಾದಿತವಾಗಿದೆ. ಸತ್ಯಧರ್ಮಿಯಾದ ನನಗೆ ಸತ್ಯಾತ್ಮನಾದ ನಿನ್ನನ್ನು ಪಡೆಯುವುದಕ್ಕಾಗಿ ಅದನ್ನು ಬದಿಗೆ ಸರಿಸು.

ಅಧ್ಯಾತ್ಮ ಮತ್ತು ಅಧಿದೈವತರೂಪವಾದ ಉಭಯಸತ್ಯದ ಬ್ರಹ್ಮವನ್ನು ಉಪಾಸಿಸುವವನೂ ಶಾಸ್ತ್ರೋಕ್ತಕರ್ಮ ಮಾಡುವವನೂ ತನ್ನ ಅಂತಕಾಲವು ಬರಲು ಆತ್ಮನ ಪ್ರಾಪ್ತಿ ದ್ವಾರವೇನೆಂದು ಆತ್ಮನನ್ನು ಈ ಪದ್ಯದಲ್ಲಿ ಬೇಡಿಕೊಂಡಿದ್ದಾನೆ.

**ಶ್ರೀ ಮಧ್ವ** : - ಸುವರ್ಣದಂತೆ ಪ್ರಕಾಶಮಾನವಾದ, ಭೂಮಿಯ ರಸಗಳನ್ನು ಪಾನ ಮಾಡಿ ರಕ್ಷಿಸುವುದರಿಂದ ಪಾತ್ರವೆನಿಸಿಕೊಳ್ಳುವ ಸೂರ್ಯಮಂಡಲದಿಂದ ಸದ್ಗುಣಪೂರ್ಣನಾದ ( ಸೂರ್ಯಮಂಡಲಸ್ಥನಾದ ) ನಿನ್ನ ಶರೀರವು ಮುಚ್ಚಿಕೊಂಡಿರುವುದು. ಹೇ ಪೂರ್ಣನಾದ ಪರಮಾತ್ಮನೇ, ಸದ್ಗುಣಪೂರ್ಣನಾದ ನಿನ್ನನ್ನು ಧರಿಸಿದ ನನಗೋಸ್ಕರ, ನಿನ್ನ ಸಂದರ್ಶನಕ್ಕೋಸ್ಕರ ತೆರೆ.

**ಶ್ರೀ ಅರವಿಂದ** : - ಸತ್ಯದ ಮುಖವು ಹೊಳೆಹೊಳೆಯುವ ಬಂಗಾರದ ಮುಚ್ಚಳದಿಂದ ಮುಚ್ಚಲಾಗಿದೆ ; ಓ ಪೋಷಕನೆ, ಸತ್ಯಧರ್ಮಕ್ಕಾಗಿ, ದೃಷ್ಟಿಗಾಗಿ ಅದನ್ನು ತೆಗೆದೊಗೆ.

ವೇದದ ರಹಸ್ಯಾರ್ಥದಲ್ಲಿ ಸೂರ್ಯನೆಂದರೆ ಶುದ್ಧ ಸ್ವಪ್ರಕಾಶರೂಪವಾದ, ಸೃಷ್ಟಿಯ ಸತ್ಯವಾಗಿ ಮನದಾಚೆಗಿರುವ, ಕವಿಯ ದಿವ್ಯ ಪ್ರತಿಭಾನವನ್ನು ಸಂಕೇತಿಸುತ್ತಾನೆ. ವೇದದಲ್ಲಿ ' ದೃಷ್ಟಿ 'ಯೆಂದಿರುವ ಸ್ವಯಂಪ್ರಕಾಶಮಾನವಾದ ಜ್ಞಾನವೇ ಅವನ ಪ್ರಧಾನಶಕ್ತಿಯಾಗಿದೆ. ಸತ್ಯ, ಧರ್ಮ, ಭೂಮ ಇದು ಅವನ ರಾಜ್ಯ. ಮನುಷ್ಯನ ಕತ್ತಲೆಗವಿದ ಅಲ್ಪಜೀವನವನ್ನು ವಿಸ್ತರಿಸಿ ಬೆಳಕಿನ ಅನಂತ ಪ್ರಜ್ಞೆಯಾಗಿ ಮಾಡುವುದರಿಂದ ಅವನು ಪೂಷನ್ ಅಂದರೆ

ಪೋಷಕ ಇಲ್ಲವೆ ವರ್ಧಕನಾಗಿದ್ದಾನೆ. ಅವನು ಕೇವಲ ದ್ರಷ್ಟಾರನು, ಏಕತ್ವದ ದ್ರಷ್ಟಾರ ಮತ್ತು ಆತ್ಮವಿದನು. ಮನುಷ್ಯನನ್ನು ಅವನು ಅತ್ಯುಚ್ಚವಾದ ದೃಷ್ಟಿ ಪಡೆಯಲು ದಾರಿ ತೋರುತ್ತಾನೆ. ಅವನು ಯಮ, ನಿಯಾಮಕ, ನಿಯಂತ; ಸತ್ಯಧರ್ಮದಿಂದ ಮನುಷ್ಯನ ಕರ್ಮವನ್ನೂ ಅಭಿವ್ಯಕ್ತ ಜೀವನವನ್ನೂ ಆಳುತ್ತಾನೆ. ಆದುದರಿಂದಲೇ ನಮ್ಮ ಸ್ವಭಾವದ ಯೋಗ್ಯತತ್ವಕ್ಕನುಸರಿಸಿ (ಯಾಥಾತಥ್ಯತಃ), ಜಗತ್ಪಿತನ ಪ್ರಕಾಶಮಾನ ಶಕ್ತಿಯಾಗಿ, ಎಲ್ಲ ಪ್ರಾಣಿಗಳು ಯಾವನ ಅಭಿವ್ಯಕ್ತಿಗಳೋ ಆ ದಿವ್ಯಪುರುಷನನ್ನು ತನ್ನಲ್ಲಿ ತೋರುತ್ತಾನೆ. ಅವನ ಕಿರಣಗಳೆಂದರೆ ಸತ್ಯ-ಭೂಮದಿಂದ ಹೊಳೆಯುತ್ತ ಹೊರಟ ವಿಚಾರಗಳು. ಆದರೆ ಅವು ಪ್ರತಿಬಿಂಬ ಮೂಡಿಸುವ ಹಾಗೂ ಭೇದಕಾರಕವಾದ ಮನಸ್ತತ್ತ್ವದಿಂದ ಒಡೆದು ದಿಕ್ಕು ತಪ್ಪಿ ವಿಕೃತವಾಗುತ್ತವೆ. ಹೀಗೆ ಅವು ಸತ್ಯದ ಮುಖವನ್ನು ಮುಚ್ಚುವ ಬಂಗಾರದ ಮುಚ್ಚಳ ವಾಗುತ್ತವೆ. ಅವನ್ನು ಯೋಗ್ಯ ಕ್ರಮ ಮತ್ತು ಸಂಬಂಧದಲ್ಲಿ ಇರಿಸಿ ಪ್ರಕಾಶಿತ ಸತ್ಯದ ಏಕತ್ವದಲ್ಲಿ ಅವನ್ನು ಒಂದುಗೂಡಿಸಬೇಕೆಂದು ಕವಿ ಸೂರ್ಯನನ್ನು ಬೇಡುತ್ತಾನೆ. ಈ ಅಂತರ ಪ್ರಕ್ರಿಯೆಯ ಪರಿಣಾಮವಾಗಿ ವಿಶ್ವಾತ್ಮದಲ್ಲಿ ಎಲ್ಲ ಪ್ರಾಣಿಗಳ ಏಕತೆಯ ಅರಿವು ಉಂಟಾಗುತ್ತದೆ.

**ಪೂಷನ್ನೇಕರ್ಷೇ ಯಮ ಸೂರ್ಯ ಪ್ರಾಜಾಪತ್ಯ ವ್ಯೂಹ ರಶ್ಮೀನ್ ಸಮೂಹ**
**ತೇಜೋ ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ ।**
**ಯೋಽಸಾವಸೌ ಪುರುಷಃ ಸೋಽಹಮಸ್ಮಿ ॥ ೧೬ ॥**

**ಶ್ರೀ ಶಂಕರ** :— ಹೇ ರವಿಯೆ, ಒಬ್ಬನೇ ಹೋಗುತ್ತಿರುವವನಾದ್ದರಿಂದ ಏಕರ್ಷಿಯೆ, ಎಲ್ಲದರ ಸಂಯಮನ ಮಾಡುವುದರಿಂದ ಯಮನೆ, ರಶ್ಮಿ, ಪ್ರಾಣ, ರಸಗಳ ಸ್ವೀಕರಣದಿಂದ ಸೂರ್ಯನೆ, ಪ್ರಜಾಪ್ರತಿಸುತನೆ, ನಿನ್ನ ಕಿರಣಗಳನ್ನು ಒಯ್ದು ಮುಟ್ಟಿಸು. ನಿನ್ನ ತೇಜಸ್ಸನ್ನು ಏಕೀಕರಿಸು. ಅತ್ಯಂತ ಶುಭವಾದ ನಿನ್ನ ರೂಪವನ್ನು ಆತ್ಮನ ಕೃಪೆಯಿಂದ ನಾನು ಕಾಣುತ್ತೇನೆ. ಆದಿತ್ಯಮಂಡಲದಲ್ಲಿದ್ದ ಆ ಪುರುಷನು ನಾನು ಆಗುತ್ತೇನೆ.

**ಶ್ರೀ ಮಧ್ವ** :— ಎಲೈ ಪೂರ್ಣನೆ, ಪ್ರಧಾನಜ್ಞಾನವುಳ್ಳವನಾಗಿ ಏಕರ್ಷಿ ಮುನಿಯಲ್ಲಿ ಅಂತರ್ಯಾಮಿಯೆ, ಯಮನಾಮಕನಾಗಿ ಯಮನಲ್ಲಿ ಅಂತರ್ಯಾಮಿಯೆ, ಸೂರ್ಯಾಂತರ್ಗತ ನಾಗಿ ಸೂರ್ಯಶಬ್ದವಾಚ್ಯನೆ, ಬ್ರಹ್ಮದೇವರಿಗೆ ಪ್ರಾಪ್ಯನಾದ್ದರಿಂದ ಪ್ರಾಜಾಪತ್ಯನೆ, ನಮ್ಮ ಸ್ವರೂಪಜ್ಞಾನವನ್ನು ವಿಸ್ತರಿಸು, ಬಾಹ್ಯಜ್ಞಾನವನ್ನು ವಿಸ್ತರಿಸು. ನಿನ್ನ ಅತ್ಯಂತ ಮಂಗಳ ವಾದ ಸ್ವರೂಪವನ್ನು ನಿನ್ನ ಕೃಪೆಯಿಂದ ನೋಡುತ್ತೇನೆ.

ಯಾವನು ಪ್ರಸಿದ್ಧ ಮುಖ್ಯವಾಯುದೇವರಲ್ಲಿ ಇರತಕ್ಕ ಪರಮಾತ್ಮನೋ ಅವನು ಹೇಯನಲ್ಲವಾದುದರಿಂದ 'ಅಹಂ' ಶಬ್ದವಾಚ್ಯನು; ಸದಾ ಇರತಕ್ಕವನೂ ಜ್ಞಾನವಿಷಯನೂ ಆದುದರಿಂದ 'ಅಸ್ಮಿ' ಶಬ್ದವಾಚ್ಯನು. (ಅಥವಾ 'ಪ್ರಸಿದ್ಧನಾದ ಪುರುಷನು ಪ್ರಾಣಾದಿ ಸರ್ವ ಪ್ರತೀಕಗಳಲ್ಲಿಯೂ ನನ್ನಲ್ಲಿಯೂ ಅಂತರ್ಯಾಮಿಯಾಗಿರುವ ಒಬ್ಬನೇ ಪರಮಾತ್ಮ ನಾಗಿದ್ದಾನೆ').

**ಶ್ರೀ ಅರವಿಂದ** :— ಹೇ ಪೋಷಕನೆ, ಕೇವಲ ದ್ರಷ್ಟಾರನೆ, ನಿಯಾಮಕನೆ, ಪ್ರಕಾಶ ಮಾನನಾದ ಸೂರ್ಯನೆ, ಪ್ರಜಾಪತಿಯ ಶಕ್ತಿಸ್ವರೂಪನೆ, ನಿನ್ನ ಕಿರಣಗಳನ್ನು ಓರಣಗೊಳಿಸು,

ನಿನ್ನ ಬೆಳಕನ್ನು ಒಂದುಗೂಳಿಸು. ನಿನ್ನ ಕಲ್ಯಾಣತಮವಾದ ಕಾಂತಿಯನ್ನು ನಿನ್ನಲ್ಲಿ ನಾನು ನೋಡುತ್ತೇನೆ. ಅಲ್ಲಿ-ಅಲ್ಲಿಯ ಪುರುಷ, ಅವನೇ ನಾನು.

**ವಾಯುರನಿಲಮಮೃತಮಥೇದಂ ಭಸ್ಮಾಂತಂ ಶರೀರಂ |**
**ಓಂ ಕ್ರತೋ ಸ್ಮರ ಕೃತಂ ಸ್ಮರ ಕ್ರತೋ ಸ್ಮರ ಕೃತಂ ಸ್ಮರ || ೧೭ ||**

**ಶ್ರೀ ಶಂಕರ**:— ಈಗ ಸಾಯುತ್ತಿರುವ ನನ್ನ ಪ್ರಾಣವು ಅಧ್ಯಾತ್ಮಪರಿಚ್ಛೇದವನ್ನು ಬಿಟ್ಟು ಅಧಿದೈವತಾತ್ಮನಾದ ಸರ್ವಾತ್ಮಕನಾದ ಅಮೃತ ಅನಿಲನನ್ನು ಸ್ವೀಕರಿಸಲಿ. ಹಾಗೂ ಈ ಶರೀರವು ಅಗ್ನಿಹುತವಾಗಿ ಭಸ್ಮಾಂತವಾಗಲಿ. ಓಂ ಅಗ್ನಿಯೆಂಬ ಹೆಸರಿನ ಬ್ರಹ್ಮವೆ, ಕ್ರತುವೆ, ಸ್ಮರ್ತವ್ಯವಾದದ್ದನ್ನು ಸ್ಮರಿಸು. ಬಾಲ್ಯದಿಂದ ನಾನು ಆಚರಿಸಿದ ಕರ್ಮವನ್ನು ಸ್ಮರಿಸು.

ಪ್ರಣವವೇ ಅಗ್ನಿಯೆಂಬ ಹೆಸರಿನ ಬ್ರಹ್ಮ. ಹೀಗೆ ಅಬ್ರಹ್ಮವಾಗಿದ್ದರೂ ಬ್ರಹ್ಮವೆಂದು ಉಪಾಸ್ಯವಾದದ್ದು ಓಂಕಾರ. ಮನಸ್ಸಿನಲ್ಲಿ ವ್ಯವಸ್ಥಿತವಾದ್ದರಿಂದ ಅಗ್ನಿದೇವತೆಗೆ ಕ್ರತುವೆಂಬ ಸಂಬೋಧನವು.

**ಶ್ರೀ ಮಧ್ವ**:— ಈ ದೇಹವು ವಿಭೂತಿಯು ಅಂತವುಳ್ಳದ್ದು. (ಆದಾಗ್ಯೂ ತದಂತರ್ಗತ ಪರಮಾತ್ಮನಿಗೆ ಮರಣಾದಿ ದೋಷವಿಲ್ಲ.) ಅದು ಹೇಗೆಂದರೆ ಪರಬ್ರಹ್ಮನೇ ಆಶ್ರಯವಾಗುಳ್ಳ ವಾಯುದೇವರು ಕೂಡ ಮೃತಿರಹಿತನೆಂದಮೇಲೆ ಪರಮಾತ್ಮನು ಅಮೃತನೆಂದು ಹೇಳಬೇಕೆ? ಗುಣಪೂರ್ಣನಾದ್ದರಿಂದ ಓಂಕಾರಶಬ್ದವಾಚ್ಯನಾದ, ಜ್ಞಾನರೂಪನಾದ ಪರಮಾತ್ಮನೇ (ಕ್ರತೋ,) ಅನುಗ್ರಹಿಸು, ನನ್ನ ಧ್ಯಾನಾದಿ ಕರ್ಮವನ್ನು ಸ್ಮರಿಸು (ನನ್ನಿಂದ ಮಾಡಲ್ಪಟ್ಟ ಧ್ಯಾನಾದಿ ಕರ್ಮದಿಂದ ನನ್ನಲ್ಲಿ ಅನುಗ್ರಹೋನ್ಮುಖನಾಗು.)

**ಶ್ರೀ ಅರವಿಂದ**: - ವಾಯು ಅನಿಲನು ಅಮೃತಜೀವನನು. ಆದರ ಶರೀರಕ್ಕೆ ಭಸ್ಮವೇ ಕೊನೆ. ಓಂ ಕ್ರತುವೆ (ಸಂಕಲ್ಪವೆ), ಮಾಡಿದ್ದನ್ನು ನೆನೆ, ಮಾಡಿದ್ದನ್ನೆಲ್ಲ ನೆನೆ.

ವಾಯು (ಹಿಂದೆ 'ಮಾತರಿಶ್ವನ್' ಎಂದು ಕರೆಯಲ್ಪಟ್ಟವನು) ವಿಶ್ವದಲ್ಲಿಯ ಪ್ರಾಣಶಕ್ತಿ. ಸೂರ್ಯಪ್ರಕಾಶದಲ್ಲಿ ಜೀವನದ ಅಮೃತತತ್ತ್ವವಾಗಿ ಅವನು ಪ್ರಕಟಗೊಳ್ಳುತ್ತಾನೆ. ಜನ್ಮ-ಮೃತ್ಯು, ಶರೀರ-ಪ್ರಾಣ ಇವು ಅದರ ವಿಶಿಷ್ಟ ಹಾಗೂ ಬಾಹ್ಯ ಪ್ರಕ್ರಿಯೆಗಳು ಮಾತ್ರ. ಕ್ರತು ಎಂಬ ವೈದಿಕ ಪದಕ್ಕೆ ಒಮ್ಮೊಮ್ಮೆ ಕರ್ಮವೆಂದೂ, ಒಮ್ಮೊಮ್ಮೆ ಮನಃಪ್ರಜ್ಞೆಯಲ್ಲಿ ಸಂಕಲ್ಪವೆಂದು ತಿಳಿಯಲಾಗಿದ್ದ ಕರ್ಮದ ಹಿಂದಿನ ಪರಿಣಾಮಕಾರಿಯಾದ ಶಕ್ತಿಯೆಂದೂ ಅರ್ಥವಿವೆ. ಅಗ್ನಿಯೇ ಈ ಶಕ್ತಿ. ಮೊದಲು ಜಡದಲ್ಲಿ ಬೆಂಕಿ-ಬೆಳಕು, ಭೌತಿಕ ಶಕ್ತಿಯಾಗಿ ವ್ಯಕ್ತವಾಗುವ ದೈವಿಕ ಶಕ್ತಿಯದು. ಅದು ಆ ಮೇಲೆ ಮನುಷ್ಯಪ್ರಜ್ಞೆಯ ಇತರ ತತ್ತ್ವಗಳಲ್ಲಿ ಭಿನ್ನ ರೂಪಗಳನ್ನು ತಾಳುತ್ತದೆ. ಸತ್ಯ ಮತ್ತು ಆನಂದಗಳತ್ತ ಕ್ರಮಬದ್ಧವಾದ ಅಭಿವ್ಯಕ್ತಿಯಿಂದ ಮೇಲೆಮೇಲಕ್ಕೆ ಕರೆದೊಯ್ಯುತ್ತದೆ.

**ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ ವಿಶ್ವಾನಿ ದೇವ ವಯುನಾನಿ ವಿದ್ವಾನ್ ।**
**ಯುಯೋಧ್ಯಸ್ಮಜ್ಜುಹುರಾಣಮೇನೋ ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ ॥ ೧೮ ॥**

**ಶ್ರೀ ಶಂಕರ**:— ಹೇ ಅಗ್ನೇ, ಎಲ್ಲ ಕರ್ಮಗಳನ್ನೂ ( ಪ್ರಜ್ಞಾನಗಳನ್ನೂ ) ಬಲ್ಲ ನೀನು ಕರ್ಮಫಲಭೋಗಕ್ಕಾಗಿ ಶೋಭನವಾದ ಮಾರ್ಗದಿಂದ ನಮ್ಮನ್ನು ಕರೆದೊಯ್ಯು. ಹಾಗೂ ಕುಟಿಲ ಮತ್ತು ವಂಚನಾತ್ಮಕವಾದ ಪಾಪವನ್ನು ವಿನಾಶಗೊಳಿಸು. ನಿನ್ನನ್ನು ಈಗ ಬಹುತರವಾಗಿ ನಮಸ್ಕಾರ ವಚನದಿಂದ ಸೇವಿಸುತ್ತೇವೆ.

ಸುಪಥಾ ಎಂಬುದರಿಂದ ಪುನರಾವೃತ್ತಿರಹಿತವಾದ ಶುಕ್ಲವಾದ ಉತ್ತರ ಮಾರ್ಗದಿಂದ ಎಂದರ್ಥ. ಹೋಗುಬರುವುದುಳ್ಳ ದಕ್ಷಿಣ ಮಾರ್ಗ ಬೇಡವೆಂಬ ಸೂಚನೆಯಿದೆ.

**ಶ್ರೀ ಮಧ್ವ** : — ಅಗ್ನಿಯಲ್ಲಿ ವಿದ್ಯಮಾನ ಪರಮಾತ್ಮನೇ, ನಮ್ಮನ್ನು ಶೋಭನವಾದ ಅರ್ಚಿರಾದಿ ಮಾರ್ಗದಿಂದ ಮೋಕ್ಷಾಖ್ಯವಿತ್ತಕ್ಕೋಸ್ಕರ ಕರೆದುಕೊಂಡು ಹೋಗು. ಸಂಪೂರ್ಣಗಳಾದ ಜ್ಞಾನಗಳನ್ನು ನೀನು ತಿಳಿದವನು. ನಮ್ಮನ್ನು ಅಲ್ಪರನ್ನಾಗಿ ಮಾಡುವ ಪಾಪವನ್ನು ನಮ್ಮ ದೆಸೆಯಿಂದ ವಿಯೋಜಿಸು. ನಿನಗೋಸ್ಕರ ಭಕ್ತಿಜ್ಞಾನೋಪೇತವಾದ ನಮಸ್ಕಾರ ವಚನವನ್ನು ಮಾಡುತ್ತೇವೆ.

ವಯುನ ಇದಕ್ಕೆ ಕರ್ಮವಲ್ಲ, ಜ್ಞಾನವೆಂದು ಅರ್ಥ. ಜುಹುರಾಣ ಎಂದರೆ ಅಲ್ಪರನ್ನಾಗಿ ಮಾಡುವುದು.

**ಶ್ರೀ ಅರವಿಂದ**:— ಹೇ ಅಗ್ನಿದೇವನೇ, ಅಭಿವ್ಯಕ್ತವಾದ ಎಲ್ಲ ವಸ್ತುಗಳನ್ನು ಬಲ್ಲ ನೀನು ಒಳ್ಳೆಯ ದಾರಿಯಿಂದ ನಮ್ಮನ್ನು ಆನಂದದತ್ತ ಕರೆದೊಯ್ಯು ; ಪಾಪದ ವಕ್ರ ವಿಲೋಭನವನ್ನು ನಮ್ಮಿಂದ ದೂರವಾಗಿಸು. ನಾವು ನಿನಗೆ ಸಂಪೂರ್ಣವಾದ ವಿನತಿಯ ವಚನವನ್ನು ಸಲ್ಲಿಸುತ್ತೇವೆ.

ವೈದಿಕ ಕಲ್ಪನೆಯಲ್ಲಿ, ಇಂದ್ರಿಯಾದಿಗಳನ್ನು ಕ್ಷೋಭಗೊಳಿಸಿ ಒಳ್ಳೆಯ ದಾರಿಯಿಂದ ಅವನ್ನು ಲಗುಬಗೆಯಿಂದ ಹೊರಳಿಸುವಂಥದೇ ಪಾಪ ಎಂಬುದು. ನೇರವಾದ ದಾರಿಯೊಂದಿದೆ. ಅದು ಋಜುಃ ಪಂಥಾ, ಋತಸ್ಯ ಪಂಥಾ. ಅದರಲ್ಲಿ ಸಹಜವಾಗಿ ಪ್ರಕಾಶ ಮತ್ತು ಸತ್ಯ ಹೆಚ್ಚುತ್ತ ಹೋಗುತ್ತವೆ, ಅನಂತ ಭೂಮಿಕೆಗಳಲ್ಲಿ ಅನಂತ ವಿಸ್ತಾರಗಳ ಕಡೆ ( ವಿತಾನಿ ಪೃಷ್ಠಾನಿ ) ಅದು ಒಯ್ಯುತ್ತದೆ. ಅದರಿಂದ ನಮ್ಮ ಸ್ವಭಾವಧರ್ಮವು ಸಾಮಾನ್ಯವಾಗಿ ನಮ್ಮನ್ನು ಸಿದ್ಧಿಯತ್ತ ಒಯ್ಯುತ್ತದೆ. ಪಾಪವು ಮಾತ್ರ ಹುರುಬರಕಾದ ಮತ್ತು ಇಟಕರೆಯಾದ ನೆಲದಲ್ಲಿ, ಸುತ್ತುಸುಳಿಗಳಲ್ಲಿ ( ದುರಿತಾನಿ, ವೃಜಿನಾನಿ ) ಹಾಯ್ದು ತಡವರಿಸುತ್ತ ನಡೆಯುವಂತೆ ಬಲುಮೆ ಮಾಡುತ್ತದೆ. ' ವಿಧೇಯ ' ಈ ಪದವು ಯಜ್ಞವ್ಯವಸ್ಥೆ, ದೇವತೆಗಳಿಗೆ ಹವಿಸ್ಸಮರ್ಪಣ ಹಾಗೂ ಸಾಮಾನ್ಯವಾಗಿ ಯಜ್ಞ ಇಲ್ಲವೆ ಪೂಜೆ ಇವಕ್ಕೆ ಸಂಬಂಧಿಸಿ ಬಳಸಲಾಗಿದೆ. ವೈದಿಕ ' ನಮಃ ' ಇದು ಆಂತರಿಕ, ಬಾಹ್ಯ ನಮಸ್ಕಾರವಾಗಿದ್ದು

ನಮ್ಮಲ್ಲಿ ಹಾಗೂ ಜಗತ್ತಿನಲ್ಲಿ ವಾಸಿಸುವ ದೈವೀಸತ್ಯಕ್ಕೆ ವಿನತಿಯನ್ನೂ ಶರಣಾಗತಿಯನ್ನೂ ತೋರುವುದಕ್ಕೆ ಗುರುತಾಗಿದೆ. ದಿವ್ಯ ಸಂಕಲ್ಪಶಕ್ತಿಯಾದ ಅಗ್ನಿಗೆ ಕೆಳಗಿನ ಅಹಂಕಾರಿಕ ಪ್ರಕೃತಿಯು ಎಲ್ಲ ಶಕ್ತಿಗಳ ಸ್ವಾರ್ಪಣ ಮತ್ತು ಸಂಪೂರ್ಣ ವಿನತಿಯೆಂಬುದೇ ಇಲ್ಲಿಯ ಅಭಿಪ್ರಾಯವಾಗಿದೆ. ಈ ಸಮರ್ಪಣದಿಂದ ಆಂತರಿಕ ವಿರೋಧವಿಲ್ಲದಾಗಿ ಆ ಅಗ್ನಿ ಸತ್ಯ ಮೂಲಕ ಆಧ್ಯಾತ್ಮಿಕ ಐಶ್ವರ್ಯ( ರಾಯೆ )ವುಳ್ಳ ಆನಂದದ ಕಡೆಗೆ ಮಾನವನ ಆತ್ಮನನ್ನು ಕರೆದೊಯ್ಯಬಹುದು. ಶುದ್ಧವಾದ ಪ್ರೀತಿ ಮತ್ತು ಆನಂದವನ್ನು ವೈದಿಕ ಕಾಲದಲ್ಲಿಯ ದೀಕ್ಷಾಬದ್ಧರು ವಿಶ್ವದಲ್ಲಿಯ ದಿವ್ಯ ಇರುವಿಕೆಯ ಉಗಮವೆಂದೂ ಮನುಷ್ಯವ್ಯಕ್ತಿಯಲ್ಲಿಯ ದಿವ್ಯಜೀವನಕ್ಕೆ ತಳಹದಿಯೆಂದೂ ತಿಳಿದಿದ್ದರು. ಅಹಂಕಾರದಿಂದ ಈ ತತ್ತ್ವದ ವಿಕೃತಿಯೇ ಕಾಮ ಎಂಬುದು, ಕೆಳಗಿನ ಲೋಕಗಳಲ್ಲಿ ತೋರುವ ಸೊತ್ತಿನ ಲೋಭ ಇಲ್ಲವೆ ದುರಾಸೆ ಎಂಬುದು.

[ ಈ ಲೇಖನವನ್ನು ಬರೆಯುವಾಗ ಶ್ರೀ ಶಂಕರಭಾಷ್ಯಕ್ಕಾಗಿ ಶ್ರೀ. ಸುಬ್ರಹ್ಮಣ್ಯಶರ್ಮರಿಂದ ಸಂಪಾದಿತವಾದ ಅಧ್ಯಾತ್ಮಪ್ರಕಾಶ ಕಾರ್ಯಾಲಯ, ಬೆಂಗಳೂರು ಇವರ ' ಈಶಾವಾಸ್ಯೋಪನಿಷತ್ ' ಎಂಬ ಪುಸ್ತಕವನ್ನೂ ಶ್ರೀ ಮಧ್ವಭಾಷ್ಯಕ್ಕಾಗಿ ಮಧ್ವಮುನಿ ಸೇವಾ ಸಂಘ, ಉಡುಪಿ ಇವರ ' ಶ್ರೀಮನ್ಮಧ್ವಾಚಾರ್ಯರ ಸಭಾಷ್ಯ ಅಷ್ಟೋಪನಿಷತ್ತುಗಳು ಮತ್ತು ಸಪ್ತ ಪ್ರಕರಣಗಳು ' ಇದನ್ನೂ ಕೃತಜ್ಞತಾಪೂರ್ವಕವಾಗಿ ಉಪಯೋಗಿಸಲಾಗಿದೆ. ]

**— ರಂ. ಶ್ರೀ. ಮುಗಳಿ**

ಶಾಂತಿಯೂ ಸ್ಥಿರತೆಯೂ ಬೇನೆಗಳಿಗೆ ಪರಮೌಷಧಗಳಾಗಿವೆ.

ನಮ್ಮ ಜೀವಾಣುಗಳಲ್ಲಿ ಶಾಂತಿಯನ್ನು ತಂದುಕೊಳ್ಳಲು ಶಕ್ತರಾಗುವಂದು ನಾವು ರೋಗಮುಕ್ತರಾಗುವೆವು.

× × × ×

ನಮ್ಮ ಬುದ್ಧಿಯೊಳಗಿಂದ ನಾವು ಅಸತ್ಯವನ್ನು ದೃಢತರವಾಗಿ ಹೊರದೂಡುವಷ್ಟೇ, ನಮ್ಮ ದೇಹವು ತನ್ನೊಳಗಿನ ಅನಾರೋಗ್ಯವನ್ನು ಅಷ್ಟೇ ದೃಢತರವಾಗಿ ಹೊರದೂಡಬೇಕು.

× × × ×

ಈ ಜಗತ್ತಿನಲ್ಲಿ ಸುಖವೂ ಆನಾರೋಗ್ಯವೂ ಈ ವರೆಗೂ ಸ್ವಾಭಾವಿಕ ಅವಸ್ಥೆಗಳಾಗಿಲ್ಲ. ಆದುದರಿಂದ ಅವುಗಳನ್ನು ನಾವು ಅವುಗಳಿಗೆ ಪ್ರತಿಕೂಲವಾದ ಸಂಗತಿಗಳ ( ಅಸುಖ–ಅನಾರೋಗ್ಯಗಳ) ದಾಳಿಯಿಂದ ರಕ್ಷಿಸತಕ್ಕದ್ದು.

— ತಾಯಿಯವರು

# ಸಂದೇಶಗಳು

## ಹದಿನೈದನೆಯ ಅಗಸ್ಟ ೧೯೪೭

### ( ಶ್ರೀ ಅರವಿಂದರ ಸಂದೇಶ )

ಆಗಸ್ಟ ೧೫ ಸ್ವತಂತ್ರ ಭಾರತದ ಜನ್ಮದಿನ. ಇಂದು ಭಾರತದ ಇತಿಹಾಸದಲ್ಲಿ ಒಂದು ಹಳೆಯ ಯುಗವು ಕೊನೆಗೊಂಡು ಹೊಸ ಮನ್ವಂತರವು ಪ್ರಾರಂಭವಾಗುತ್ತಿದೆ. ಈ ದಿನವು ನಮಗಷ್ಟೇ ಅಲ್ಲದೆ ಏಶಿಯಾಖಂಡಕ್ಕೆ ಮತ್ತು ಇಡೀ ಜಗತ್ತಿಗೇ ಮಹತ್ವದ್ದಾಗಿದೆ. ಏಕೆಂದರೆ, ಜಗತ್ತಿನ ದೊಡ್ಡ ರಾಷ್ಟ್ರಗಳ ಮಾಲಿಕೆಯಲ್ಲಿ, ಅಖಿಲ ಮಾನವಕುಲದ ರಾಜಕೀಯ-ಸಾಮಾಜಿಕ-ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಭವಿಷ್ಯವನ್ನು ರೂಪಿಸುವ ಕಾರ್ಯದಲ್ಲಿ ಒಳ್ಳೇ ಪ್ರಭಾವಶಾಲಿಯಾದ ಅವ್ಯಕ್ತ ಸಾಮರ್ಥ್ಯಗಳನ್ನೊಳಗೊಂಡ ಒಂದು ಹೊಸ ಶಕ್ತಿಸಂಪನ್ನ ರಾಷ್ಟ್ರದ ಪದಾರ್ಪಣವನ್ನು ಇಂದಿನ ದಿನವು ಸೂಚಿಸುತ್ತಿದೆ. ಇದುವರೆಗೆ ಈ ದಿನಾಂಕವು ನನ್ನ ಜನ್ಮದಿನವಾದುದರಿಂದ ನನಗೆ ವೈಯಕ್ತಿಕವಾಗಿ ಮಹತ್ತ್ವದ್ದಿತ್ತು, ನನ್ನ ಬಾಳ ಬಟ್ಟೆಯನ್ನು ಅನುಸರಿಸುವ ಅನೇಕ ಜನರು ಪ್ರತಿವರ್ಷ ಆಚರಿಸುತ್ತ ಬಂದಿರುವ ನನ್ನ ಜಯಂತಿಯೆಂದು ಮಾತ್ರ ಇದುವರೆಗೆ ಮಹತ್ತ್ವದ್ದಾದ ಈ ದಿನಕ್ಕೆ ಈ ಹೊಸ ವಿಶಾಲಾರ್ಥವು ಬಂದುದು ನನಗೆ ಹೆಚ್ಚಿನ ಸಂತೋಷದ ಸಂಗತಿಯೆನಿಸುವುದು ಸಹಜ. ಇವೆರಡೂ ಹುಟ್ಟುಹಬ್ಬಗಳು ಒಂದೇ ದಿನ ಕೂಡಿ ಬಂದುದು, ಅನುಭಾವಿಯಾದ ನನ್ನ ದೃಷ್ಟಿಯಲ್ಲಿ ಆಕಸ್ಮಿಕ ಇಲ್ಲವೆ ಅಕಾರಣ ಘಟನೆಯೇನೂ ಅಲ್ಲ. ಆದರೆ ಇದು ನನ್ನ ಜೀವನಧ್ಯೇಯಪಥದಲ್ಲಿ ಜನ್ಮದಾರಭ್ಯ ನನ್ನನ್ನು ಹೆಜ್ಜೆಹೆಜ್ಜೆಗೂ ನಡೆಸಿಕೊಂಡು ಬರುತ್ತಿರುವ ದೈವೀಶಕ್ತಿಯ ವರಪ್ರಸಾದದ ಅಂಕಿತವೆಂದು ನಾನು ತಿಳಿಯುತ್ತೇನೆ. ಅಷ್ಟೇ ಏಕೆ, ನಾನು ಹಿಂದೆ ಯಾವ ಯಾವ ಮಹತ್ತರವಾದ ಜಾಗತಿಕ ಆಂದೋಲನಗಳ ಸಫಲತೆಯನ್ನು— ಆಗ ಅವು ಅಸಂಭಾವ್ಯ ಸ್ವಪ್ನಗಳೆಂದೆನಿಸಿದ್ದರೂ— ನನ್ನ ಜೀವನದಲ್ಲಿಯೇ ಕಾಣಬಹುದೆಂದು ಎಣಿಸಿದ್ದೆನೋ ಅವುಗಳಲ್ಲಿ ಕೆಲವು ಇಂದು ಪರಿಪೂರ್ಣತೆಯನ್ನು ತೀರಾ ಸಮೀಪಿಸುತ್ತಿದ್ದುದನ್ನು ಮತ್ತು ಇನ್ನು ಕೆಲವು ಇದೀಗ ಪ್ರಾರಂಭವಾಗಿ ಸಾಫಲ್ಯದ ಮಾರ್ಗದಲ್ಲಿ ಇರುವವೆಂಬುದನ್ನು ಸ್ಪಷ್ಟವಾಗಿ ಕಾಣುತ್ತಲಿದ್ದೇನೆ.

ಈ ಘನಸಂದರ್ಭದಲ್ಲಿ ಒಂದು ಸಂದೇಶ ಕೊಡಲು ನನ್ನನ್ನು ಕೇಳಲಾಗಿದೆ. ಹಾಗೆ ನೋಡಿದರೆ ನಾನು ಅಂಥದೊಂದು ಸಂದೇಶವನ್ನು ಕೊಡುವ ಪರಿಸ್ಥಿತಿಯಲ್ಲಿ ಇಲ್ಲವೆಂದೇ ಹೇಳಬೇಕು. ಆದ್ದರಿಂದ ನಾನು ನನ್ನ ಬಾಲ್ಯ ಮತ್ತು ಯೌವನ ಕಾಲಗಳಲ್ಲಿ ಇರಿಸಿ

ಕೊಂಡಿದ್ದ ಮತ್ತು ಈಗ ಸಿದ್ಧಿಹೊಂದುತ್ತಿದ್ದ ವೈಯಕ್ತಿಕ ಧ್ಯೇಯ ಮತ್ತು ಆದರ್ಶಗಳನ್ನು ಪ್ರಕಟವಾಗಿ ಘೋಷಿಸುವುದು ಮಾತ್ರ ಈಗ ನನಗೆ ಸಾಧ್ಯ. ಏಕೆಂದರೆ ಅವು ಭಾರತದ ಸ್ವಾತಂತ್ರ್ಯಕ್ಕೆ ಸಂಬಂಧಿಸಿವೆ; ಭಾರತದ ಮುಂದಿನ ಕಾರ್ಯದಲ್ಲಿ ಅವುಗಳಿಗಾಗಿ ವಿಶಿಷ್ಟ ನಿಯಮಿತ ಸ್ಥಾನವಿದೆ; ಮತ್ತು ಆ ಕಾರ್ಯದಲ್ಲಿ ಭಾರತವು ನೇತೃತ್ವವನ್ನು ವಹಿಸುವುದು ಅನಿವಾರ್ಯವಾಗಿದೆಯೆಂದು ನಾನು ನಂಬಿದ್ದೇನೆ. ನಾನು ಅನೇಕ ಸಲ ಆಡಿತೋರಿಸಿದಂತೆ ಭಾರತದ ಪುನರುಜ್ಜೀವನವು ಬರಿ ತನ್ನ ಭೌತಿಕ ಆಸ್ಥೆಗಳನ್ನು ಪೂರೈಸಿಕೊಳ್ಳುವುದಕ್ಕಷ್ಟೇ ಅಲ್ಲ; ರಾಜ್ಯವಿಸ್ತಾರ, ಘನತೆ, ಶಕ್ತಿ, ಸಮೃದ್ಧಿಗಳಿಗಾಗಿ ಮಾತ್ರವಲ್ಲ; —ಇವುಗಳನ್ನಾದರೂ ಅದು ಅಲಕ್ಷಿಸತಕ್ಕದ್ದಲ್ಲವೆಂಬುದು ನಿಜ—-ಪರಕೀಯರ ಮೇಲೆ ತನ್ನ ಆಧಿಪತ್ಯವನ್ನು ಹೇರುವದಕ್ಕಂತೂ ಅಲ್ಲವೇ ಅಲ್ಲ; ಆದರೆ ಅಖಿಲ ಮಾನವಕೋಟಿಯ ಧುರೀಣತೆಯನ್ನು ವಹಿಸಿ ಜಾಗತಿಕ ಕಲ್ಯಾಣಕ್ಕಾಗಿ ವಿಶ್ವನಿಯಾಮಕನ ಸಂಕಲ್ಪಸಿದ್ಧಿಯಲ್ಲಿ ಸಹಕರಿಸುವದೇ ಭಾರತದ ಪುನರುಜ್ಜೀವನದ ಉದ್ದಿಶ್ಯವಾಗಿದೆ. ಆ ಧ್ಯೇಯ ಮತ್ತು ಆದರ್ಶಗಳು ಸ್ವಾಭಾವಿಕ ವಾಗಿ ಈ ಕ್ರಮದಲ್ಲಿದ್ದವು: ಭಾರತದ ಸ್ವಾತಂತ್ರ್ಯ ಮತ್ತು ಐಕ್ಯ ಸಾಧಿಸುವ ಕ್ರಾಂತಿ; ಏಶಿಯಾದ ಬಂಧವಿಮೋಚನೆ ಹಾಗು ಪುನಃಶಕ್ತಿಸಂಪಾದನೆಯಾಗಿ ಅದು ಮಾನವ ಸಂಸ್ಕೃತಿಯ ಪ್ರಗತಿಯಲ್ಲಿ ತಾನು ಹಿಂದೊಮ್ಮೆ ವಹಿಸಿದ ಮಹತ್ತ್ವದ ಪಾತ್ರವನ್ನು ಪುನಃ ಧರಿಸುವಂತಾಗುವದು: ಜಗತ್ತಿನ ವಿವಿಧ ಜನಾಂಗಗಳ ರಾಷ್ಟ್ರೀಯ ಜೀವನ-ವೈವಿಧ್ಯವನ್ನು ಉಳಿಸಿಕೊಂಡೂ ಅವುಗಳನ್ನೆಲ್ಲಾ ಒಂದೇ ಸಾರ್ವತ್ರಿಕಸಾಮರಸ್ಯವುಳ್ಳ ಐಕ್ಯತೆಯಲ್ಲಿ ಹೆಣೆದು, ಅಂತರ್ರಾಷ್ಟ್ರೀಯ ಏಕೀಕರಣವನ್ನು ಸಾಧಿಸಿ, ಆ ತಳಹದಿಯ ಮೇಲೆ ಒಂದು ನವೀನ ಮಹತ್ತರ ಉಜ್ಜ್ವಲ ಹಾಗು ಉದಾತ್ತ ಜೀವನವನ್ನು ಅಖಿಲ ಮಾನವತೆಗಾಗಿ ರಚಿಸುವದು: ಭಾರತದಿಂದ ಇಡೀ ಮಾನವಕುಲಕ್ಕೇ ಅಧ್ಯಾತ್ಮಜ್ಞಾನ ಮತ್ತು ಜೀವನದಲ್ಲಿ ಆಧ್ಯಾತ್ಮಿಕ ಪರಿವರ್ತನೆ ಮಾಡುವ ಸಾಧನಗಳ ಪ್ರದಾನ: ಕೊನೆಯದಾಗಿ, ವೈಯಕ್ತಿಕ ಪರಿಪೂರ್ಣತೆಯ— ಪರಿಪೂರ್ಣ ಸಮಾಜದ ಆದರ್ಶಗಳು ಮಾನವನಲ್ಲಿ ತಲೆದೋರಿದಂದಿನಿಂದ ಅವನನ್ನು ಕಾಡುತ್ತಿರುವ ಮತ್ತು ಸಂಶಯಗ್ರಸ್ತನನ್ನಾಗಿ ಮಾಡಿದ ಅನೇಕ ಜೀವನಸಮಸ್ಯೆಗಳ ಪರಿಹಾರ ಸಾಧನೆಯನ್ನು ಪ್ರಾರಂಭಿಸುವಂತೆ ಮಾನವನ ಚಿಚ್ಛಕ್ತಿಯು ವಿಕಾಸಮಾರ್ಗದಲ್ಲಿ ಒಂದು ಹೊಸ ಹೆಜ್ಜೆಯನ್ನು ಇಟ್ಟು ಮೇಲ್ಮಟ್ಟವನ್ನು ಮುಟ್ಟುವದು.

ಭಾರತವು ಸ್ವತಂತ್ರವಾಗಿದೆ; ಆದರೆ ಅಖಂಡತೆಯನ್ನು ಸಾಧಿಸಿಲ್ಲ; ಅದು ಗಳಿಸಿದ ಸ್ವಾತಂತ್ರ್ಯವು ಬಿರುಕು-ಮುರುಕುಗಳಿಂದ ಕೂಡಿದ ಸ್ವಾತಂತ್ರ್ಯವಾಗಿದೆ. ಬ್ರಿಟಿಶರು ಭಾರತವನ್ನು ವಶಪಡಿಸಿಕೊಳ್ಳುವ ಮೊದಲು ಇದ್ದಂತೆ ಅನೇಕ ಸಂಸ್ಥಾನಗಳ ಗೊಂದಲವೆದ್ದು ಇತಿಹಾಸದ ಪುನರಾವೃತ್ತಿಯಾಗುವದೋ ಏನೋ ಎಂದು ಒಮ್ಮೊಮ್ಮೆ ಎನಿಸುತ್ತಿತ್ತು. ಸುದೈವದಿಂದ ಈಗ ಆ ಭಯಂಕರ ವಿಪತ್ತು ತಪ್ಪಿಹೋಗುವದೆನ್ನುವಂತಹ ಪರಿಸ್ಥಿತಿಯು ಖಂಡಿತವಾಗಿಯೂ ಭಾರತದಲ್ಲಿ ಉಂಟಾಗಿದೆ. ಪ್ರಬಲ ಪರಿಣಾಮಕರ ನೀತಿಯನ್ನು ಅನುಸರಿಸಿದ ಘಟನಾಸಮಿತಿಯ ಜಾಣ್ಮೆಯ ಮೂಲಕ ಯಾವದೇ ಒಡಕುತೊಡಕುಗಳಿಲ್ಲದೆ ದಲಿತ ವರ್ಗದ ಸಮಸ್ಯೆಯು ಪರಿಹಾರಗೊಳ್ಳಬಹುದಾಗಿದೆ. ಆದರೆ ಹಿಂದೂ ಮತ್ತು ಮುಸ್ಲಿಂ ಎಂಬ ಹಳೆಯ ಜಾತಿಭೇದವು ದೇಶದ ಶಾಶ್ವತ ರಾಜಕೀಯ ವಿಭಜನೆಯಲ್ಲಿ ಮೂರ್ತಿಗೊಂಡಂತಾಗಿದೆ. ಕಾಂಗ್ರೆಸ್ ಸಂಸ್ಥೆಯಾಗಲಿ ರಾಷ್ಟ್ರವಾಗಲಿ ಈ ವಿಭಜನೆಯನ್ನು ಶಾಶ್ವತವಾಗಿ ನಿಶ್ಚಯಿ

ಸಲ್ಪಟ್ಟ ಸಂಗತಿಯೆಂದು ತಿಳಿಯದೆ ಅದು ಒಂದು ತಾತ್ಪೂರ್ತಿಕ ಯೋಜನೆಯೆಂಬುದಾಗಿ ಗ್ರಹಿಸಬಹುದೆಂದೂ ಆಶಿಸಬಹುದಾಗಿದೆ. ಏಕೆಂದರೆ ಈ ವಿಭಜನೆಯು ಶಾಶ್ವತವಾಗಿ ಉಳಿದರೆ ಭಾರತವು ಅತಿಶಯವಾಗಿ ಅಶಕ್ತವಾಗುವದು; ಹೆಳವನಂತಾಗುವದು; ಯಾವಾಗಲೂ ದೇಶದಲ್ಲಿ ಯಾದವೀ ಕಲಹದ ಸಂಭವನೀಯತೆ ಉಳಿಯುವದು; ಹೊಸ ದಾಳಿಯೂ, ಅಷ್ಟೇ ಏಕೆ, ಪರರಾಷ್ಟ್ರದಿಂದ ಭಾರತದ ಆಕ್ರಮಣವೂ ಶಕ್ಯವಾಗಬಹುದು. ಭಾರತದ ವಿಭಜನೆಯು ಅಳಿಯಲೇಬೇಕು. ದ್ವೇಷವು ಕಡಿಮೆಯಾದಂತೆ, ಶಾಂತತೆ ಮತ್ತು ಸಾಮರಸ್ಯಗಳ ಅರಿವು ಹೆಚ್ಚುಹೆಚ್ಚಾಗಿ ಬೆಳೆದುಬಂದಂತೆ, ಪರಸ್ಪರ ಸಹಕಾರದಿಂದ ಕೈಕೊಳ್ಳಲೇಬೇಕಾದ ಕಾರ್ಯಕ್ರಮುಗಳು ಮೇಲಿಂದಮೇಲೆ ಒದಗಿದಂತೆ, ಒಂದು ಪ್ರಕಾರದ ಐಕ್ಯ-ಸಂಘಟನೆಯನ್ನು ಒಪ್ಪಂದದ ಮೂಲಕವಾಗಿ ಸಹ ದೃಢಗೊಳಿಸಬೇಕಾಗಬಹುದು. ಹೀಗಾಗಿ, ಯಾವದೇ ರೂಪದಲ್ಲಿ ಒಕ್ಕಟ್ಟು ಉಂಟಾಗಬಹುದು;-- ಅದರ ತಾತ್ಕಾಲಿಕ ಸ್ವರೂಪಕ್ಕೆ ವ್ಯಾವಹಾರಿಕ ಮಹತ್ತ್ವವಿರಬಹುದೇ ವಿನಾ ಮೂಲಭೂತ ಮಹತ್ತ್ವವಿರಲಾರದು. ಆದರೆ ಯಾವದೇ ರೀತಿಯಲ್ಲಾದರೂ ಈ ಕೃತ್ರಿಮ ವಿಭಜನೆಯು ಹೋಗಲೇಬೇಕು; ಅದು ಹೋಗಿಯೇ ಹೋಗುವದು. ಇಲ್ಲದಿದ್ದರೆ ಭಾರತದ ಭವಿತವ್ಯವೇ ಕುಗ್ಗುವದು; ಅದರ ಈಶಸಂಕಲ್ಪಿತ ಕರ್ತವ್ಯವೇ ಸಿದ್ಧಿಸದೆ ಹೋಗಬಹುದು. ಆದರೆ ಹೀಗೆ ಎಂದಿಗೂ ಆಗಕೂಡದು.

ಏಶಿಯಾಖಂಡವು ಎಚ್ಚತ್ತಿದೆ; ಅದರ ಬಹುಭಾಗಗಳು ಸ್ವತಂತ್ರವಾಗಿವೆ; ಕೆಲವು ಇದೀಗ ಸ್ವತಂತ್ರವಾಗುತ್ತಲಿವೆ; ಇನ್ನೂ ದಾಸ್ಯದಲ್ಲಿದ್ದ ಹಲವು ಪ್ರದೇಶಗಳು ಒಂದಿಲ್ಲೊಂದು ಬಗೆಯ ಹೋರಾಟದ ಮೂಲಕ ಸ್ವಾತಂತ್ರ್ಯಾಭಿಮುಖವಾಗಿ ಮುನ್ನಡೆಯತೊಡಗಿವೆ. ಈ ಬಗ್ಗೆ ಪ್ರಯತ್ನ ಮಾಡುವದು ಕೇವಲ ಸ್ವಲ್ಪವೇ ಉಳಿದಿದೆ. ಅದು ಕೂಡ ಇಂದು ನಾಳೆ ಇಷ್ಟರಲ್ಲಿಯೇ ಮುಗಿಯಬಹುದು. ಆ ಪ್ರಯತ್ನದಲ್ಲಿ ಭಾರತವು ವಿಶಿಷ್ಟ ಪಾತ್ರವನ್ನಾಡಬೇಕಾಗಿದೆ; ಭಾರತವು ಈಗಾಗಲೇ ಆಡಲು ಪ್ರಾರಂಭಿಸಿದ ಈ ಪಾತ್ರದ ಉತ್ಸಾಹ-ಸಾಮರ್ಥ್ಯಗಳನ್ನು ನೋಡಿದರೆ ರಾಷ್ಟ್ರಗಳ ಮೇಳದಲ್ಲಿ ಅದು ಎಂತಹ ಸ್ಥಾನಮಾನಗಳನ್ನು ಪಡೆಯುವ ಶಕ್ಯತೆ ಇದೆ ಎಂಬುದು ಸೂಚಿತವಾಗುವದು.

ಅಖಿಲ ಮಾನವಕುಲದ ಐಕ್ಯವು ರೂಪುಗೊಳ್ಳುವದರಲ್ಲಿದೆ. ಈ ಕಾರ್ಯದ ಪ್ರಾರಂಭವು ಅತೃಪ್ತಿಕರವೆಂದೆನಿಸುವಂತಿದ್ದರೂ, ಅದಕ್ಕೆ ಅಡ್ಡಬರುವ ಪರ್ವತಪ್ರಾಯ ಆತಂಕಗಳ ವಿರುದ್ಧ ಸಂಘಟಿತ ಹೋರಾಟವೇ ನಡೆದುದು ಕಂಡುಬರುತ್ತದೆ. ಈ ದಿಶೆಯಲ್ಲಿ ಅದರ ಗತಿಯಿರುವಾಗ, ಐತಿಹಾಸಿಕ ಅನುಭವದ ಅನುರೋಧದಿಂದ, ಐಕ್ಯವು ಸಾಧಿಸುವ ವರೆಗೆ ಆ ಗತಿಯು ಹೆಚ್ಚುತ್ತಲೇ ಹೋಗುವದು ಅನಿವಾರ್ಯವೆಂದೂ ಅಂತಿಮ ಜಯವು ನಿಶ್ಚಿತವೆಂದೂ ಹೇಳಬಹುದು. ಈ ಕ್ಷೇತ್ರದಲ್ಲಿಯೂ ಭಾರತವು ಪ್ರಮುಖಪಾತ್ರವನ್ನು ವಹಿಸಲಾರಂಭಿಸಿದೆ; ಆದರೆ, ಸದ್ಯದ ಹಾಗೂ ಕೂಡಲೇ ಸಂಭವಿಸಬಹುದಾದ ಘಟನೆಗಳಿಗೆ ಮಾತ್ರ ದೃಷ್ಟಿಯನ್ನು ಸಂಕುಚಿತಗೊಳಿಸದ, ಭವಿಷ್ಯತ್ತಿನ ಸ್ಪಷ್ಟ ನೋಟವುಳ್ಳ ಮತ್ತು ಅದನ್ನು ಸಮೀಪಕ್ಕೆ ತರಬಲ್ಲ, ಮೇಲ್ತರಗತಿಯ ಮುತ್ಸದ್ದಿತನವನ್ನು ಭಾರತವು ಬೆಳೆಸಿಕೊಂಡರೆ ಅದು ತನ್ನ ಸಾನ್ನಿಧ್ಯಮಾತ್ರದಿಂದಲೇ ಮಾನವತೆಯ ಐಕ್ಯದತ್ತ ಈಗ ನಡೆದಿರುವ ಭೀತಿಯುಕ್ತವಾದ ಮಂದಗಮನವನ್ನು ಧೈರ್ಯಶಾಲಿಯಾದ ತೀವ್ರಗತಿಯನ್ನಾಗಿ ಮಾರ್ಪಡಿಸಬಲ್ಲದು. ಈ ಮಾನವ್ಯದ **ಐಕ್ಯಸಾಧನೆಯಲ್ಲಿ**

ಕುತ್ತುಗಳು ಅಡ್ಡ ಬರಬಹುದು, ಅಡ್ಡಿಗಳು ಏಳಬಹುದು; ಕೈಕೊಂಡ ಕಾರ್ಯವು ಅವುಗಳಿಂದ ಹಾಳಾಗಲೂ ಬಹುದು; ಆದರೂ ಅಂತಿಮ ಪರಿಣಾಮವು ನಿಶ್ಚಿತ. ಏಕೆಂದರೆ, ಎಂತಹ ಸಂದರ್ಭದಲ್ಲಿಯೂ ನಿಸರ್ಗಕ್ರಮದಲ್ಲಿ ಐಕ್ಯವು ಅವಶ್ಯವಾದುದು; ಅದು ಒಂದು ಅನಿವಾರ್ಯ ಕ್ರಿಯೆ ಮತ್ತು ಅದರ ಸಫಲತೆಯೂ ನಿರ್ವಿವಾದವಾದುದು ಎಂದು ನಿರ್ಭಯದಿಂದ ಮುನ್ನು ಡಿಯಬಹುದು. ರಾಷ್ಟ್ರಗಳಿಗೆ ಈ ಐಕ್ಯದ ಆವಶ್ಯಕತೆ ಸ್ಪಷ್ಟವಾಗಿದೆ. ಏಕೆಂದರೆ ಅದಿಲ್ಲದೆ ಚಿಕ್ಕಪುಟ್ಟ ರಾಷ್ಟ್ರಗಳ ಸ್ವಾತಂತ್ರ್ಯವು ಇನ್ನು ಮುಂದೆ ಸುರಕ್ಷಿತವಾಗಿ ಉಳಿಯಲಾರದು. ಅಷ್ಟೇ ಅಲ್ಲದೆ, ದೊಡ್ಡ ದೊಡ್ಡ ಹಾಗೂ ಸಮರ್ಥ ರಾಷ್ಟ್ರಗಳಾದರೂ ಸುಭದ್ರವಾಗಿ ಉಳಿಯ ಲಾರವು. ಭಾರತವು ಇಬ್ಭಾಗವಾಗಿಯೇ ಉಳಿದರೆ ಅದಕ್ಕೂ ತನ್ನ ಭದ್ರತೆಯ ಬಗ್ಗೆ ನಿಶ್ಚಿಂತತೆ ಉಳಿಯಲಿಕ್ಕಿಲ್ಲ. ಆದ್ದರಿಂದ ಎಲ್ಲರ ಸುರಕ್ಷಿತತೆಗಾಗಿಯೇ ಭಾರತವು ಒಂದು ಗೂಡಲೇಬೇಕು; ಮಾನವೀಯ ಬುದ್ಧಿಶೂನ್ಯತೆಯು ಮತ್ತು ಹುಚ್ಚು ಸ್ವಾರ್ಥವು ಮಾತ್ರ ಇದನ್ನು ತಡೆಯಬಹುದು. ಅದರ ವಿರುದ್ಧ ದೇವರ ಪ್ರಯತ್ನವು ಕೂಡ ವ್ಯರ್ಥವಾಗುವ ದುಂಟು; ಆದರೆ ಈ ವಿಭಜನೆಯು ನೈಸರ್ಗಿಕ ಆವಶ್ಯಕತೆ ಹಾಗು ಈಶ್ವರೇಚ್ಛೆಗಳ ವಿರುದ್ಧ ವಾಗಿ ಬಾಳಲಾರದು. ಆಗ—ಭಾರತವು ಪುನಃ ಅಖಂಡವಾದಾಗ—ಮಾತ್ರ ರಾಷ್ಟ್ರೀಯ ತೆಯು ಸಾಫಲ್ಯ ಪಡೆದೀತು. ಅಂತರ್-ರಾಷ್ಟ್ರೀಯ ವೃತ್ತಿ, ದೃಷ್ಟಿ, ಪದ್ಧತಿ ಮತ್ತು ಸಂಸ್ಥೆ ಗಳು ಬೆಳೆದು ಬರಬೇಕು; ದ್ವಿವಿಧ ಅಥವಾ ವಿವಿಧ ನಾಗರಿಕತೆಯು ರೂಪುಗೊಂಡು ಈ ಸ್ಥಿತ್ಯಂತರದ ಕಮ್ಮಟದಲ್ಲಿ ಸ್ವಯಂಪ್ರೇರಿತ ಸಾಂಸ್ಕೃತಿಕ ಸಾಮರಸ್ಯವು ಕಾಣಿಸಿಕೊಳ್ಳಬಹುದು. ಆಗ ಉಗ್ರತೆಯನ್ನು ತ್ಯಜಿಸಿದ ರಾಷ್ಟ್ರೀಯವೃತ್ತಿಗೆ ಇವೆಲ್ಲ ಸಂಗತಿಗಳು (ಅದರ ದೃಷ್ಟಿಕೋನದ ಸಮಗ್ರತೆಗೆ) ಅವಿರೋಧವಾಗಿಯೇ ತೋರಬಹುದು. ಐಕ್ಯದ ಈ ಹೊಸ ಭಾವನೆಯೇ ಮಾನವಕುಲದ ಮನಸ್ಸನ್ನು ಸೂರೆಗೊಳ್ಳುವದು.

ಜಗತ್ತಿಗೆ ತನ್ನ ಅಧ್ಯಾತ್ಮದ ಕಾಣಿಕೆಯನ್ನು ಭಾರತವು ಈಗಾಗಲೇ ಕೊಡಲಾರಂಭಿಸಿದೆ. ಭಾರತದ ಅಧ್ಯಾತ್ಮ ತತ್ತ್ವವು ಹೆಚ್ಚಿನ ಪ್ರಮಾಣದಲ್ಲಿ ಯುರೋಪ-ಅಮೇರಿಕೆಗಳಲ್ಲಿ ಪ್ರವೇಶಿ ಸುತ್ತಲಿದೆ. ಅದರ ಗತಿ ಇನ್ನೂ ತೀವ್ರವಾಗುವದು. ಸದ್ಯದ ಆಪತ್ಕಾಲದಲ್ಲಿ, ಹೆಚ್ಚು ಹೆಚ್ಚು ಜನರ ದೃಷ್ಟಿಗಳು ಆಸೆಗಣ್ಣಿನಿಂದ ಭಾರತದ ಕಡೆಗೆ ನೋಡಹತ್ತಿವೆ. ಅದರ ತತ್ತ್ವಾಭ್ಯಾಸ ಕ್ಕಷ್ಟೇ ಅಲ್ಲದೆ ಅದರ ಚೇತನಾತ್ಮಕ ಮತ್ತು ಆಧ್ಯಾತ್ಮಿಕ ಸಾಧನೆಗಾಗಿ ಭಾರತದ ಆಶ್ರಯ ಪಡೆಯುವವರ ಸಂಖ್ಯೆ ಬೆಳೆಯುತ್ತಲಿದೆ.

ಉಳಿದುದೆಲ್ಲ ಇನ್ನೂ ಕೇವಲ ವೈಯಕ್ತಿಕ ಬಯಕೆಯಾಗಿದ್ದು ಈ ವಿಚಾರ ಹಾಗೂ ಆದರ್ಶಗಳು ಭಾರತದಲ್ಲಿ ಮತ್ತು ಪಾಶ್ಚಾತ್ಯ ದೇಶಗಳಲ್ಲಿ ಮುನ್ನೋಟವುಳ್ಳ ಜನರನ್ನು ಆಕರ್ಷಿಸ ಲಾರಂಭಿಸಿವೆ. ಇದಕ್ಕೆ ಅಡ್ಡಬರುವ ಸಂಕಟಗಳು ಉಳಿದ ಕ್ಷೇತ್ರಗಳಲ್ಲಿಯ ಪ್ರಯತ್ನಗಳಿಗೆ ಒದಗುವ ವಿಘ್ನಗಳಿಗಿಂತ ಬಹು ಭಯಪ್ರದವಾಗಿವೆ. ಆದರೆ ನಾವು ಅವುಗಳನ್ನು ಗೆಲ್ಲಬೇಕೆಂದೇ ಸಂಕಟಗಳು ಬರುವದುಂಟು. ಈಶ್ವರೇಚ್ಛೆಯ ಬಲದಿಂದ ಈ ಸಂಕಟಗಳು ನಿವಾರಣೆಯಾಗು ವವು. ಇಲ್ಲಿ ಕೂಡ ಈ ಉತ್ಕ್ರಾಂತಿಯು ಆಗಬೇಕಾದರೆ, ಆಧ್ಯಾತ್ಮವೃತ್ತಿಯು ಮತ್ತು ಅಂತಃ ಪ್ರಜ್ಞೆಯ ವಿಕಾಸದ ದಾರಿಯಿಂದಲೇ ಅದು ಆಗಬೇಕಾದೀತು. ಈ ಉಪಕ್ರಮವೂ ಭಾರತ ದಿಂದಲೇ ಆಗಬಲ್ಲದು; ಈ ಉಪಕ್ರಮದ ವ್ಯಾಪ್ತಿಯು ಜಗದಗಲವಾಗಬೇಕಿದ್ದರೂ ಅದರ ಶಕ್ತಿಕೇಂದ್ರವು ಮಾತ್ರ ಭಾರತದಲ್ಲಿಯೇ ನೆಲೆಸೀತು.

ಭಾರತದ ಸ್ವಾತಂತ್ರ್ಯದ ಈ ದಿನಾಂಕದಲ್ಲಿ ಇಷ್ಟೆಲ್ಲದರ ಅಂಕಿತವುಂಟೆಂದು ನಾನು ಭಾವಿಸುತ್ತೇನೆ. ಈ ಸಂಕೇತವು ಸಾರ್ಥಕತೆ ಪಡೆದೀತೋ ಇಲ್ಲವೋ, ಪಡೆವುದಾದರೆ ಎಷ್ಟರ ಮಟ್ಟಿಗೆ ಮತ್ತು ಎಷ್ಟು ಬೇಗನೆ—ಇವೇ ಮೊದಲಾದವು ಹೊಸ ಹಾಗು ಸ್ವತಂತ್ರ ಭಾರತವನ್ನೇ ಅವಲಂಬಿಸಿವೆ.

- **ದತ್ತಮೂರ್ತಿ ದೇಸಾಯಿ** ಮತ್ತು **ವಸಂತ ಕುಲಕರ್ಣಿ**
(ಅನುವಾದಕರು)

# ಆಂಧ್ರ ವಿಶ್ವವಿದ್ಯಾನಿಲಯಕ್ಕೆ ಶ್ರೀ ಅರವಿಂದರ ಸಂದೇಶ

ನೀವು ನನಗೆ ಒಂದು ಸಂದೇಶವನ್ನು ಕೊಡಲು ಕೇಳಿದ್ದೀರಿ. ನಾನೇನು ಬರೆದರೂ ಅದೀಗ ಆಂಧ್ರ ವಿಶ್ವವಿದ್ಯಾನಿಲಯಕ್ಕೆ. ಸಂದೇಶ ಎಂದು ಕರೆಯಬಹುದಾದರೆ ಅದು ನಿಮ್ಮ ವಿಶ್ವವಿದ್ಯಾನಿಲಯದ ಕರ್ತವ್ಯ, ಗುಣ ಮತ್ತು ಮಾಡಬೇಕಾದ ಕಾರ್ಯ ಇವುಗಳಿಗೆ ಸಂಬಂಧಿಸಿರ ಬೇಕು. ಆದರೆ ಈ ನಾಡಿನ ಸರಕಾರ-ಆಡಳತೆಗಳ ರೂಪ ರೀತಿಗಳನ್ನು, ರಾಷ್ಟ್ರದ ರಚನೆ-ವೇಷ-ಗುಣಗಳನ್ನು, ಮಿಕ್ಕ ರಾಷ್ಟ್ರಗಳ ನಡುವಣ ಆದರ ಸ್ಥಾನವನ್ನು, ತಾನೇನಾಗ ಬೇಕೆಂಬ ಬಗ್ಗೆ ಮಾಡುವ ಅದರ ಆಯ್ಕೆಯನ್ನು -ನಿರ್ಧರಿಸಬಹುದಾದ ಮಹಾ ನಿರ್ಣಯ ಗಳನ್ನು ತೆಗೆದುಕೊಳ್ಳಲಿರುವ ಈ ಸಂದರ್ಭದಲ್ಲಿ ಆ ದಿಶೆಯತ್ತ ಲಕ್ಷ್ಯಹಾಕದಿರುವುದು ನನಗೆ ಕಠಿಣವೆನಿಸುತ್ತದೆ. ನಮಗೆ ಸಂಬಂಧಿಸಿದಂತಿರುವ ಒಂದು ಸಮಸ್ಯೆ ದೇಶಕ್ಕೆದುರಾಗಿದೆ. ಅದರ ಕಡೆಗೆ ಹೊರಳಿ ನಾನೀಗ, ಎಷ್ಟೇ ಅಸಮಗ್ರವಾಗಿಯೊಗಲಿ, ಅದನ್ನು ವಿವೇಚಿಸುತ್ತೇನೆ. ಅದೆಂದರೆ, ಕೃತಕವಾಗಿ ಬ್ರಿಟಿಶರು ರಚಿಸಿದ ಪ್ರಾಂತಗಳನ್ನು ಹಿಂದೆ ಭಾರತ ಪ್ರಯತ್ನಿಸಿದಂತೆ ಹೊಸದಾದರೂ ಐಕ್ಯಗತ ವೈವಿಧ್ಯದ ತತ್ತ್ವವನ್ನು ಆಧರಿಸಿ ನೈಸರ್ಗಿಕವಾಗಿ ವಿಭಜಿಸಿ ಹೊಸ ಪದ್ಧತಿಯಾಗಿ ಮಾರ್ಪಡುವಂತೆ ಮಾಡಬೇಕೆಂಬ ಪುನಾರಚನೆಯ* ಬೇಡಿಕೆ. ಹಿಮಾಲಯ ದಿಂದಲೂ ಸಾಗರಗಳಿಂದಲೂ ಆವೃತವಾಗಿ ಪ್ರತ್ಯೇಕ ಅಸ್ತಿತ್ವವನ್ನು ಪಡೆದ ಭಾರತವು ಎಂದಿ ನಿಂದಲೂ ಮಿಕ್ಕವುಗಳಿಂದ ಪ್ರಕಟವಾಗಿ ಬೇರೆಯೆಂದು ಗುರುತಿಸಲಾಗುವ ತನ್ನದೇ ಆದ ಲಕ್ಷಣಗಳಿಂದಲೂ ತನಗೇ ವಿಶಿಷ್ಟವಾದ ಪ್ರತ್ಯೇಕ ನಾಗರಿಕತೆಯಿಂದಲೂ ಬಾಳಬಗೆಯಿಂದಲೂ ಆಧ್ಯಾತ್ಮಿಕ ಮಾರ್ಗದಿಂದಲೂ ಪ್ರತ್ಯೇಕವಾದ ಸಂಸ್ಕೃತಿಯಿಂದಲೂ ಕಲೆಗಳಿಂದಲೂ ಸಮಾಜ ರಚನೆಯಿಂದಲೂ ಕೂಡಿದ ಒಂದು ವಿಲಕ್ಷಣ ಜನತೆಯ ತವರೆನಿಸಿದೆ. ಅದು ತನ್ನಲ್ಲಿ ಹೊಕ್ಕ ಎಲ್ಲವನ್ನೂ ಹೀರಿಕೊಂಡು, ಅದರ ಮೇಲೆ ಭಾರತೀಯ ಮುದ್ರೆಯನ್ನೊತ್ತಿ, ಅತ್ಯಂತ ಭಿನ್ನ ವಾದ ಅಂಶಗಳನ್ನೂ ತನ್ನ ಮೂಲಭೂತ ಐಕ್ಯರೂಪಕ್ಕೆ ಪರಿವರ್ತಿಸಿದೆ. ಆದರೆ ಎಂದಿನಿಂದಲೂ ವಿವಿಧಜನಾಂಗಗಳ, ಪ್ರದೇಶಗಳ, ರಾಜ್ಯಗಳ ರಾಶಿಯಿಂದ ಮತ್ತು ಇನ್ನೂ ಹಿಂದೆ ಗಣರಾಜ್ಯಗಳ

* ಪುನಾರಚನೆ = ಪುನರ್ + ರಚನೆ

ಮೂಲಕ ಕೂಡ, ನಾನಾ ಕುಲಗಳಿಂದ, ಉಪರಾಷ್ಟ್ರಗಳಿಂದ ಕೂಡಿ- ಅದು ಆಯಾ ಕುಲ ಮತ್ತು ಉಪರಾಷ್ಟ್ರಗಳಲ್ಲಿ ವಿಶಿಷ್ಟ ಲಕ್ಷಣಗಳೊಂದಿಗೆ ಬೆಳೆದ ಸಂಸ್ಕೃತಿ-ನಾಗರಿಕತೆಗಳ ವಿವಿಧರೂಪ ಗಳನ್ನು ಭಾರತೀಯ ಸಂಸ್ಕೃತಿ-ನಾಗರಿಕತೆಗಳ ಸಾಮಾನ್ಯ ಅಚ್ಚಿನಲ್ಲಿ ಹೊಂದಿಕೊಳ್ಳುವಂತೆ ಎರಕ ಹೊಯ್ಯಲು ಶಕ್ತವಾಯಿತು. ಯಾವಾಗಲೂ ಭಾರತದ ಇತಿಹಾಸವು ಈ ಎಲ್ಲ ನಾನಾಂಶ ಗಳನ್ನೂ ಭಾರತವು ರಾಜಕೀಯವಾಗಿಯೂ ಸಾಂಸ್ಕೃತಿಕವಾಗಿಯೂ ಒಂದಾಗುವಂತೆ ಒಂದು ಕೇಂದ್ರ ಸಾರ್ವಭೌಮ ಶಾಸನದಡಿಯಲ್ಲಿ ಒಂದೇ ಒಂದಾದ ರಾಜಕೀಯ ಇಡಿಯನ್ನಾಗಿ ರೂಪಿಸಲು ಪದೇ ಪದೇ ಪ್ರಯತ್ನಿಸುತ್ತ ಬಂದಿದೆ. ತಮ್ಮ ಬಹಳ ಭಿನ್ನವಾದ ಧರ್ಮ ಮತ್ತು ಸಮಾಜರಚನೆಗಳಿಂದ ಮಹಮ್ಮದೀಯ ಜನರು ಉರಿದೆದ್ದು ಆ ಮೂಲಕ ಒಡಕು ಹುಟ್ಟಿದ ಮೇಲೂ ರಾಜಕೀಯ ಏಕೀಕರಣಕ್ಕಾಗಿ ಪ್ರತಿ ಪದದಲ್ಲಿಯೂ ಪ್ರಯತ್ನ ನಡೆಯಿತು. ಮತ್ತು ಸಂಸ್ಕೃತಿಗಳ ಮಿಲನದ ಪರಸ್ಪರ-ಪ್ರಭಾವ-ಪ್ರಸರಣದ ಪ್ರವೃತ್ತಿ ತಲೆದೋರಿತು. ಒಂದು ಉಭಯಸಾಧಾರಣವಾದ ಧರ್ಮವನ್ನು ಹುಡುಕಲು ಅಥವಾ ಹುಟ್ಟಿಸಲು ಕೂಡ ಕೆಲ ಧೀರ ಪ್ರಯತ್ನಗಳು ನಡೆದವು; ಅವುಗಳಲ್ಲೂ ಪರಸ್ಪರ ಪ್ರಭಾವಗಳು ಪ್ರಸರಿಸಿದವು. ಆದರೆ ಭಾರತದ ಇತಿಹಾಸದಲ್ಲೆಲ್ಲಿಯೂ ರಾಜಕೀಯ ಐಕ್ಯವು ಎಂದೂ ಸಂಪೂರ್ಣವಾಗಿ ಸಾಧಿಸಲ್ಪಡಲಿಲ್ಲ. ಇದಕ್ಕೆ ಅನೇಕ ಕಾರಣಗಳಿದ್ದವು: ಮೊದಲನೆಯದಾಗಿ, ನೆಲದ ವಿಸ್ತಾರವೂ ಸಂಪರ್ಕಸೌಕರ್ಯ ಗಳು ಸಾಕಷ್ಟಿಲ್ಲದುದೂ ಬೇರೆ ಬೇರೆ ಜನಗಳು ಹತ್ತಿರ ಸೇರದಂತೆ ಮಾಡಿದವು; ಎರಡನೆಯ ದಾಗಿ, ಒಂದು ಜನಾಂಗ ಅಥವಾ ಸಾರ್ವಭೌಮ ರಾಜವಂಶವು ದೇಶದ ಮಿಕ್ಕ ಭಾಗದ ಮೇಲೆ ಸೈನಿಕ ಪ್ರಭುತ್ವವನ್ನು ಹೇರಿ ಆ ಮೂಲಕ ಚಕ್ರಾಧಿಪತ್ಯಗಳ ಪರಂಪರೆಯನ್ನು ಕಟ್ಟಿದ್ದೂ ಆ ಚಕ್ರಾಧಿಪತ್ಯಗಳಲ್ಲ ಯಾವುದೂ ಚಿರಸ್ಥಾಯಿಯಾಗದುದೂ ಮತ್ತೊಂದು ಕಾರಣ; ಕೊನೆಯ ದಾಗಿ, ಈ ಎಲ್ಲ ವಿವಿಧ ರಾಜ್ಯಗಳನ್ನು ನಿರ್ಮೂಲ ಮಾಡಿ ಈ ವಿವಿಧ ಜನಾಂಗಗಳನ್ನು ಸಮರಸ ಗೊಳಿಸಿ ಒಂದು ಮೂಲದ್ರವ್ಯ, ಒಂದು ಆಕೃತಿ ಎಂಬಂತೆ ರೂಪಿಸುವ ಇಚ್ಛಾಶಕ್ತಿಯ ಅಭಾವ. ಅನಂತರ ಭಾರತದಲ್ಲಿ ಬ್ರಿಟಿಶ್ ಚಕ್ರಾಧಿಪತ್ಯ ಬಂದು ತನ್ನ ಅನುಕೂಲಕ್ಕಾಗಿ ಪ್ರಾದೇಶಿಕ ಜನಾಂಗಗಳನ್ನಾಗಿ ವಿಭಜಿಸುವ ತತ್ತ್ವವನ್ನು ಬದಿಗೊತ್ತಿದರೂ ಆ ವಿಭಜನೆಯನ್ನು ಕಿತ್ತೊಗೆ ಯದೆ ಕೃತಕವಾಗಿ ಇಡೀ ನಾಡನ್ನು ಪ್ರಾಂತಗಳನ್ನಾಗಿ ಪುನಾರಚಿಸಿತು. ಏಕೆಂದರೆ, ಮೂಲ ಅಂಗಗಳಿಂದ ಪ್ರತ್ಯೇಕ ಭಾಷೆ, ಸಾಹಿತ್ಯ ಮತ್ತು ಸ್ವಕೀಯವಾದ ಇತರ ಪರಂಪರೆಗಳುಳ್ಳ, ದ್ರಾವಿಡ ಜನರು, ಬಂಗಾಳಿಗಳು, ಮಹಾರಾಷ್ಟ್ರೀಯರು, ಗುಜರಾಥಿಗಳು, ಪಂಜಾಬಿಗಳು, ಸಿಂಧೀಯರು, ಅಸ್ಸಾಮಿಗಳು, ಉತ್ಕಲದವರು, ನೇಪಾಳಿಗಳು ಮತ್ತು ರಜಪುತಾನ ಬಿಹಾರಾದಿ ಉತ್ತರ ದೇಶಗಳ ಹಿಂದೀ ಮಾತನಾಡುವ ಜನರು ಉಪರಾಷ್ಟ್ರೀಯರಾಗಿ ಬೆಳೆದುಬಂದರು. ಬ್ರಿಟಿಶರ ಆಳಿಕೆಯು ತನ್ನ ಪ್ರಾಂತೀಯ ಆಡಳಿತೆಯ ಮೂಲಕ ಈ ಜನರನ್ನು ಒಂದುಗೂಡಿಸ ಲಿಲ್ಲ; ಆದರೆ ಅದು ಅವರ ಮೇಲೆ ಸರ್ವಸಾಧಾರಣ ಮಾದರಿಯ ಆಡಳಿತೆಯ ಅಭ್ಯಾಸವನ್ನೂ ಆಂಗ್ಲಭಾಷೆಯ ಮುಖಾಂತರ ಹೆಚ್ಚಿನ ನಿಕಟ ಅಂತಃಸಂಪರ್ಕವನ್ನೂ ಹೇರಿತು. ಅದು ಮಾಡಿದ ವಿದ್ಯಾದಾನದ ಮೂಲಕ ದೇಶದಲ್ಲಿ ದೇಶಭಕ್ತಿಯ ಒಂದು ಯುಯುತ್ಸುರೂಪವು ಹರಡಿತು. ಬಂಧವಿಮೋಚನೆಯ ಇಚ್ಛೆಯೂ ಅದನ್ನು ಸಾಧಿಸಿಕೊಳ್ಳುವ ಹೋರಾಟದಲ್ಲಿ ಐಕ್ಯದ ಆವಶ್ಯಕತೆಯೂ ಹುಟ್ಟಿಕೊಂಡವು. ಬಿಡುಗಡೆಯನ್ನು ಗೆಲ್ಲಲು ಸಾಕಾಗುವಷ್ಟು ಹೋರಾಟದ ಬಗ್ಗೆ ಐಕ್ಯವೂ ಉಂಟಾಯಿತು; ಆದರೆ ಲಭಿಸಿದ ಬಿಡುಗಡೆಯು ತನ್ನೊಡನೆ ದೇಶದ ಸಂಪೂರ್ಣ ಐಕ್ಯವನ್ನು ತರಲಿಲ್ಲ. ತದ್ವಿರುದ್ಧವಾಗಿ, ದ್ವಿರಾಷ್ಟ್ರತತ್ತ್ವಾನುಸಾರವಾಗಿ

ಭಾರತವನ್ನು ಬುದ್ಧಿಪೂರ್ವಕವಾಗಿ ಪಾಕಿಸ್ತಾನ-ಹಿಂದುಸ್ತಾನಗಳೆಂದು ಒಡೆದಾಯಿತು; ಅದರಿಂದಾದ ಭಯಂಕರ ಪರಿಣಾಮಗಳು ನಮ್ಮ ಅರಿವಿಗೆ ಬಂದುದೂ ಆಯಿತು.

ಬ್ರಿಟನ್ನಿನಿಂದ ಆಡಳತೆಯನ್ನು ವಹಿಸಿಕೊಳ್ಳುವಾಗ ನಾವು ಅನಿವಾರ್ಯವಾಗಿ ಅಪ್ರತಿಭಟನಾ ಸೂತ್ರವನ್ನು ಅನುಸರಿಸಬೇಕಾಗಿ ಬಂದು ತಾತ್ಕಾಲಿಕವಾಗಿಯಾದರೂ ಬ್ರಿಟಿಶರು ಕೃತಕವಾಗಿ ರಚಿಸಿದ ಪ್ರಾಂತಗಳ ತಳಹದಿಯನ್ನೇ ಅವಲಂಬಿಸಿ ವರ್ತಿಸಬೇಕಾಯಿತು; ಈ ಪ್ರಾಂತೀಯ ವ್ಯವಸ್ಥೆಯೀಗ ಸ್ಥೂಲವಾಗಿಯಾದರೂ ಸ್ಥಿರವಾಗಿ ಉಳಿಯುವ ಬೆದರಿಕೆಯುಂಟಾಗಿದೆ; ಮತ್ತು ಕೆಲವರು ಈ ಸ್ಥಿರತೆಯಲ್ಲಿ ಲಾಭವನ್ನೂ ಕಾಣುತ್ತಾರೆ. ಏಕೆಂದರೆ, ಅದು ದೇಶದ ಏಕೀಕರಣಕ್ಕೆ ಸಹಾಯಕವಾಗಿ, ಹಿಂದೆ ದೇಶವನ್ನು ಸಂಪೂರ್ಣವೂ ಸಮಗ್ರವೂ ಆಗಿ ಏಕೀಕರಣ ಮತ್ತು ಏಕರೂಪತೆ ಹೊಂದದಂತೆ ತಡೆದಿಟ್ಟ ಪ್ರಾದೇಶಿಕ ಉಪರಾಷ್ಟ್ರಗಳನ್ನು ಉಳಿಸಿಕೊಂಬ ಆವಶ್ಯಕತೆಯಿಂದ ನಮ್ಮನ್ನು ಸಂರಕ್ಷಿಸುತ್ತದೆ. ಉಗ್ರವಾದ ಒಂದಿಕೆಯಲ್ಲಿಯೇ ಅವರು ನಿಜವಾದ ಐಕ್ಯವನ್ನು ಕಾಣುತ್ತಾರೆ; ಒಂದೇ ಒಂದು ರಾಷ್ಟ್ರಭಾಷೆಯ ಮೂಲಕ ಪ್ರಮಾಣೀಕೃತವಾದ ಮತ್ತು ಏಕರೂಪದ ಆಡಳತೆಯಿಂದಲೂ ಭಾಷೆ, ಸಾಹಿತ್ಯ, ಸಂಸ್ಕೃತಿ, ಕಲೆ, ವಿದ್ಯೆಗಳಿಂದಲೂ ಒಬ್ಬಗೆಯ ರಾಷ್ಟ್ರವನ್ನು ಅವರು ಕಟ್ಟಬಯಸುತ್ತಾರೆ. ಅಂಥ ಕಲ್ಪನೆಯನ್ನು ಎಷ್ಟರಮಟ್ಟಿಗೆ ಮುಂದೆ ಆಚರಣೆಗೆ ತರಲು ಸಾಧ್ಯವಾದೀತೆಂಬುದನ್ನು ಹೇಳಲು ಬರದು: ಆದರೆ ಈಗ ಮಾತ್ರ ಸ್ಪಷ್ಟವಾಗಿ ಅದು ಅವ್ಯವಹಾರ್ಯ; ಮತ್ತು ಭಾರತಕ್ಕೆ ಅದು ನಿಜವಾಗಿಯೂ ಅಪೇಕ್ಷಣೀಯವೆಂಬುದು ಸಂದೇಹಾಸ್ಪದವಾಗಿದೆ. ದೇಶದ ಪ್ರಾಚೀನ ವೈವಿಧ್ಯಗಳಿಂದ ಲಾಭವೂ ಇತ್ತು, ಹಾನಿಯೂ ಇತ್ತು. ಈ ಭೇದಗಳಿಂದ ನಾಡು ಚೈತನ್ಯಮಯ ಚಟುವಟಿಕೆಗಳುಳ್ಳ ಜೀವನ ಕಲೆ ಸಂಸ್ಕೃತಿಗಳ ಅನೇಕ ಕೇಂದ್ರಗಳಿಗೆ ತವರಾಯಿತು; ವೈಭವಪೂರ್ಣವಾಗಿಯೂ ಪ್ರಕಾಶಮಯ ವರ್ಣರಂಜಿತವಾಗಿಯೂ ತೋರುವ ಐಕ್ಯಾಂತರ್ಗತ ವೈವಿಧ್ಯಕ್ಕೆ ಆಶ್ರಯವೆನಿಸಿತು. ಮಿಕ್ಕೆಲ್ಲ ಪಟ್ಟಣಗಳನ್ನೂ ಪ್ರದೇಶಗಳನ್ನೂ ಅವೈಶಿಷ್ಟ್ಯಪೂರ್ಣವಾಗಿ ಅಥವಾ ಸಾಂಸ್ಕೃತಿಕವಾಗಿ ನಿದ್ರಿಸುವಂತೆ ಕೂಡ ಅಂಕೆಯಲ್ಲಿಟ್ಟುಕೊಂಡು ಕೆಲವೇ ಪ್ರಾಂತಿಕ ರಾಜಧಾನಿಗಳೂ ಚಕ್ರವರ್ತಿವಿಭವಸಂಪನ್ನ ಮಹಾನಗರಗಳೂ ಅಂದು ಮೆರೆದಾಡುತ್ತಿದ್ದಿಲ್ಲ. ಇಡೀ ರಾಷ್ಟ್ರವೂ ತನ್ನ ಅನೇಕ ಭಾಗಗಳಲ್ಲಿ ತುಂಬು ಬಾಳನ್ನು ನಡೆಸಿಕೊಂಡಿತ್ತು; ಮತ್ತು ಈ ಕಾರಣದಿಂದ ಅದರ ಸರ್ಗಶಕ್ತಿ ಬಹಳವಾಗಿ ಹೆಚ್ಚುವಂತಾಯಿತು. ಈ ವೈವಿಧ್ಯವು ಇನ್ನೆಂದಾದರೂ ಭಾರತದ ಐಕ್ಯವನ್ನು ಕಡಿಮೆ ಮಾಡುವ ಇಲ್ಲವೆ ಅದಕ್ಕೆ ಅಪಾಯವನ್ನೊಡ್ಡುವ ಸಂಭವವಿಲ್ಲ. ವಿಜ್ಞಾನದ ಆಗಮನವೂ ಸಂಪರ್ಕಸೌಕರ್ಯಗಳ ತೀವ್ರತೆಯೂ ಇಂದು ಭಾರತದ ಜನತೆಯನ್ನು ಹತ್ತಿರಕ್ಕೆ ತಂದಿವೆ; ಹಿಂದಾದರೆ ಹೀಗೆ ನಿಕಟಸಂಪರ್ಕವನ್ನು ಇಟ್ಟುಕೊಳ್ಳಲೂ ಸಂಪೂರ್ಣ ಸಮರಸದ ಬಾಳನ್ನು ಬಾಳಲೂ ಅವಕಾಶವಿರಲಿಲ್ಲ. ಒಕ್ಕೂಟದ ಮತ್ತು ಅದು ಸರಿಯಾಗಿ ನಡೆಯಲು ಬೇಕಾದ ಆಡಳತೆಯ ಕ್ರಮದ ಕಲ್ಪನೆ ಶೋಧಿಸಲ್ಪಟ್ಟಿದೆ. ಎಲ್ಲಕ್ಕಿಂತ ಹೆಚ್ಚಾಗಿ ಜನರಲ್ಲಿ ದೇಶವಾತ್ಸಲ್ಯನಿರ್ಭರವಾದ ಐಕ್ಯದ ಭಾವನೆ ಭದ್ರವಾಗಿ ಬೇರೂರಿದೆ; ಅದನ್ನು ಸುಲಭವಾಗಿ ಯಾರೂ ಅಳಿಸಲಾರರು ಅಥವಾ ಕಡಿಮೆ ಮಾಡಲಾರರು. ಉಪರಾಷ್ಟ್ರಗಳ ನ್ಯಾಯ್ಯವಾದ ಅಪೇಕ್ಷೆಗಳನ್ನು ಪೂರಯಿಸಿಕೊಡುವುದಕ್ಕಿಂತ ಹೆಚ್ಚಾಗಿ ಅವುಗಳ ನೈಸರ್ಗಿಕ ಚಟುವಟಿಕೆಗಳಿಗೆ ಅವಕಾಶ ಕೊಡದಿರುವುದರಿಂದಲೇ ಆ ಐಕ್ಯಭಾವನೆಗೆ ಭಂಗ ಬಂದಿತು. ಬಿಡುಗಡೆ ಬರುವ ಮುನ್ನ ಸ್ವತಃ ಕಾಂಗ್ರೆಸ್ಸೇ ಭಾಷಾನುಗುಣವಾಗಿ ಪ್ರಾಂತ

ರಚನೆ ಮಾಡುವ ವಚನವನ್ನು ಕೊಟ್ಟಿತ್ತು; ಆದುದರಿಂದ ಈಗಲೇ ಅಲ್ಲದಿದ್ದರೂ ಅನುಕೂಲವಾದ ಕೂಡಲೇ ಆ ವಚನವನ್ನು ಪೂರಯಿಸುವುದು ಬಹಳ ವಿವೇಕದ ಮಾರ್ಗ ಎಂದು ಹೇಳಬಹುದು. ಆಗ ಭಾರತದ ರಾಷ್ಟ್ರೀಯ ಜೀವನವನ್ನು ಅದರ ಸ್ವಾಭಾವಿಕ ಸಾಮರ್ಥ್ಯದ ಮೇಲೆಯೂ ವೈವಿಧ್ಯಾಂತರ್ಗತ ಏಕತ್ವದ ತತ್ತ್ವದ ಮೇಲೆಯೂ ಸ್ಥಾಪಿಸಿದಂತಾಗುವುದು. ' ಸೂತ್ರೇ ಮಣಿಗಣಾ ಇವ ' ಎಂಬ ತತ್ತ್ವವು ಭಾರತಕ್ಕೆ ಸಹಜವಾದುದು; ಅದರ ಸಾಫಲ್ಯವು ಭಾರತದ ಸ್ವಭಾವ–ಸ್ವರೂಪಗಳ ಮೂಲಭೂತ ಮಾರ್ಗ. ಈ ತತ್ತ್ವಾಚರಣೆಯಿಂದ ಭಾರತವನ್ನು ಅದರ ಸ್ವಭಾವ ಸ್ವಧರ್ಮಗಳ ಮೇಲೆ ನಿಲ್ಲಿಸಿದಂತಾಗುವುದು.

ಈ ಬೆಳವಣಿಗೆಯನ್ನು ಭಾರತದ ಭವಿತವ್ಯದ ಅನಿವಾರ್ಯವಾದ ಪ್ರವೃತ್ತಿಯೆಂದು ಗಣಿಸಬಹುದು. ಏಕೆಂದರೆ ದ್ರಾವಿಡ ಪ್ರಾದೇಶಿಕ ಜನಾಂಗಗಳು ಸ್ವರಾಜ್ಯಸತ್ತೆಯ ತಮ್ಮ ಪ್ರತ್ಯೇಕವಾದ ಹಕ್ಕನ್ನು ಬೇಡುತ್ತಿವೆ; ಮಹಾರಾಷ್ಟ್ರ ಕೂಡ ಅಂಥ ಸೌಲಭ್ಯವನ್ನು ನಿರೀಕ್ಷಿಸುತ್ತಿದೆ. ಇದರಿಂದ ಗುಜರಾತಿನಲ್ಲಿಯೂ ಇಂಥದೇ ನಿರೀಕ್ಷೆಯೇಳಬೇಕಾಗುತ್ತದೆ. ಅನಂತರ ಮುಂಬಯಿ ಮದ್ರಾಸು ಪ್ರಾಂತಗಳೇ ಮಾಯವಾಗುವವು. ಹಳೆಯ ಬಂಗಾಲ ಪ್ರಾಂತವು ಆಗಲೇ ವಿಭಕ್ತವಾಗಿದೆ; ಮತ್ತು ಉತ್ಕಲ, ಬಿಹಾರ, ಅಸ್ಸಾಮುಗಳು ಈಗ ಸ್ವಾಯತ್ತ ರಾಜ್ಯಭಾರ ಪಡೆದ ಪ್ರಾದೇಶಿಕ ಜನತೆಗಳಾಗಿಬಿಟ್ಟಿವೆ. ಮಧ್ಯ ಮತ್ತು ಉತ್ತರ ಪ್ರದೇಶಗಳ ಹಿಂದೀ ಮಾತಾಡುವ ವಿಭಾಗಗಳನ್ನು ಒಂದು ಪ್ರಾಂತವಾಗುವಂತೆ ಕೂಡಿಸಿಬಿಟ್ಟರ ಭಾಷಾನುಗುಣ ಪ್ರಾಂತರಚನೆಯ ವಿಧಾನ ಪೂರ್ಣವಾಗುತ್ತದೆ. ಭಾರತ ವಿಭಜನೆಯನ್ನು ನಿರಸನಗೊಳಿಸಿದರೂ ಈ ಭಾಷಾನುಗುಣ ವರ್ಗೀಕರಣದ ಪ್ರವೃತ್ತಿಯ ಫಲಿತವನ್ನು ವಸ್ತುತಃ ಬದಲಿಸಿದಂತಾಗದು. ಅದು ಕೇವಲ ಅಲ್ಪಸ್ವಲ್ಪ ತಿದ್ದುಪಡಿಯಾದೀತು, ಅಷ್ಟೆ. ಸಂಸ್ಥಾನ ಮತ್ತು ಪ್ರಾಂತಗಳ ಜನಗಳನ್ನು ಕೂಡಿಸಿದರೆ ಅದೂ ಒಂದು ಬಗೆಯ ಸಂಯುಕ್ತಭಾರತವಾದೀತು.

ಈ ಹೊಸ ರಾಜ್ಯಶಾಸನದಲ್ಲಿ ನಿಮ್ಮ ವಿಶ್ವವಿದ್ಯಾನಿಲಯವು ತನ್ನ ಕರ್ತವ್ಯವನ್ನೂ ಸಾರ್ಥಕ್ಯವನ್ನೂ ಕಾಣುವುದು. ಇದರ ಹುಟ್ಟು ಇತರ ಭಾರತೀಯ ವಿಶ್ವವಿದ್ಯಾನಿಲಯಗಳ ಹುಟ್ಟಿನಿಂದ ಬೇರೆಯಾಗಿರುವುದು; ತನ್ನ ನಾಗರಿಕತೆಯನ್ನು ಭಾರತದಲ್ಲಿ ಪ್ರವೇಶಗೊಳಿಸಲೆಂದು ವಿದೇಶೀಯ ಸರಕಾರವೊಂದರಿಂದ ಅವು ಸ್ಥಾಪಿಸಲ್ಪಟ್ಟವು; ಅವುಗಳಿರುವುದು ಪ್ರಾಂತಗಳ ರಾಜಧಾನಿಗಳಲ್ಲಿ; ಅವು ಕೇವಲ ಕಲಿಸುವ ಮತ್ತು ಪರೀಕ್ಷೆ ಮಾಡುವ ಪಾಂಡಿತ್ಯಪರ ಗುರಿಗಳುಳ್ಳವೆನಿಸಿವೆ; ಕಾಶಿಯ ಮತ್ತು ಅಲಿಘಡದ ವಿಶ್ವವಿದ್ಯಾನಿಲಯಗಳ ಹುಟ್ಟು ಭಿನ್ನ ರೀತಿಯದಾಗಿದೆ, ಅವು ಎರಡು ಮುಖ್ಯ ಧಾರ್ಮಿಕ ಜಾತಿಗಳ ಹಿತಸಂವರ್ಧಕಗಳಾದ ಅಖಿಲ ಭಾರತ ಸಂಸ್ಥೆಗಳಾಗಿವೆ.ಆಂಧ್ರ ವಿಶ್ವವಿದ್ಯಾನಿಲಯವು ದೇಶಭಕ್ತಿಯುತವಾದ ಆಂಧ್ರ ಆರಂಭಪಟುತ್ವದಿಂದ ಜನಿಸಿತು; ಇದು ಪ್ರಾಂತದ ರಾಜಧಾನಿಯಲ್ಲಿಲ್ಲ; ಒಂದು ಪ್ರಾದೇಶಿಕ ಜನದ ಜೀವನಕ್ಕೆ ಉದ್ದೇಶಪೂರ್ವಕವಾಗಿ ನೀರೆರೆಯುತ್ತ ಒಂದು ಆಂಧ್ರಪಟ್ಟಣದಲ್ಲಿದೆ. ಆಂಧ್ರಪ್ರಾಂತವು ಗಂಡುಗಲಿತನದ, ಪೂರ್ಣಾರೋಗ್ಯಸಂಪನ್ನ, ಬಲಿಷ್ಠಕುಲದ ತವರು; ಅದರ ಪೂರ್ವೇತಿಹಾಸ ಮಹತ್ತರವಾದುದು; ಪೂರ್ವದ ರಾಜಕೀಯ ಕ್ಷೇತ್ರದಲ್ಲಿ ಅದು ಮಹತ್ವದ ಪಾತ್ರವಹಿಸಿತ್ತು. ಕಲೆ, ಶಿಲ್ಪ, ವಾಸ್ತುವಿದ್ಯೆ, ಸಂಗೀತಗಳಲ್ಲಿ ಆಂಧ್ರದೇಶಕ್ಕೀಗ ಚಕ್ರವರ್ತಿ ವೈಭವದ ನೆನಪುಗಳುಂಟಾಗುತ್ತಿವೆ. ಚಕ್ರಾಧಿಪತ್ಯದ ಪರಂಪರೆಯಲ್ಲಿ ಅದಕ್ಕೊಂದು ಸ್ಥಾನವಿದೆ. ಅಲ್ಲಿಯ ಸಾರ್ವಭೌಮ ರಾಜವಂಶಗಳು ಪ್ರಸಿದ್ಧವಾದವು; ಅವು ದೇಶದ ಬಹು

ಭಾಗವನ್ನು ಆಳಿದವು. ಬಹಳ ಇತ್ತೀಚಿನ ಕಡೆಯ ಹಿಂದು ಚಕ್ರಾಧಿಪತ್ಯವೆನಿಸಿದ ವಿಜಯ ನಗರ ಸಾಮ್ರಾಜ್ಯದ ವೈಭವ ಅದರ ಕಣ್ಣೆದುರಿದೆ. ಅದು ಎಂಥ ಜನತೆಗಾದರೂ ಒಂದು ಮಹೇತಿಹಾಸವೇ ಸರಿ. ನಿಮ್ಮ ವಿಶ್ವವಿದ್ಯಾನಿಲಯವು ತಮ್ಮ ಪೂರ್ವಜರ ಕೀರ್ತಿಗೆ ತಕ್ಕವರಾಗುವಂತೆ ಆಂಧ್ರಯುವಕರನ್ನು ತರಬೇತು ಮಾಡುತ್ತ ಜ್ಞಾನಜ್ಯೋತಿಯ, ಪಾಂಡಿತ್ಯದ, ವಿಷಯವಿಶಾರದತೆಯ ಮತ್ತು ಸಂಸ್ಕೃತಿಯ ಕೇಂದ್ರವಾಗಬಲ್ಲುದು; ಮಹತ್ತ್ವದ ಗತೇತಿಹಾಸವು ಅಷ್ಟೇ ಮಹತ್ತ್ವದ ಅಥವಾ ಅದಕ್ಕೂ ಮಹತ್ತರವಾದ ಭವಿತವ್ಯದತ್ತ ಒಯ್ಯಬೇಕು. ಕೇವಲ ವಿಜ್ಞಾನ, ಕಲೆ, ಪುಸ್ತಕಜ್ಞಾನ ಮತ್ತು ವಿಷಯಾವಗಮನಗಳಷ್ಟೇ ಅಲ್ಲ; ಸಂಸ್ಕೃತಿ ಗುಣಗಳ ಬೆಳೆವಣಿಗೆಯೂ ನಿಜಶಿಕ್ಷಣದ ಒಂದು ಅಂಗ; ನಾಳಿನ ವಿಚಾರವಂತರನ್ನೂ ನವನಿರ್ಮಾಣ ಪ್ರತಿಭಾಸಂಪನ್ನರನ್ನೂ ದಾರ್ಶನಿಕರನ್ನೂ ಕರ್ಮವೀರರನ್ನೂ ರೂಪಿಸಲು ಮತ್ತು ವ್ಯಕ್ತಿಗೆ ತನ್ನ ಶಕ್ತಿಗಳನ್ನು ಬೆಳೆಸಿಕೊಳ್ಳಲು ನೆರವಾಗುವುದು ನಿಮ್ಮ ವಿಶ್ವವಿದ್ಯಾನಿಲಯದ ಕಾರ್ಯದ ಒಂದು ಭಾಗ. ಇಷ್ಟರ ಮೇಲೆ, ಈ ಪ್ರಾದೇಶಿಕ ಜನದ ಜೀವನವನ್ನು ಪ್ರದೇಶದ ಗಡಿಯೊಳಗೇ ದಿಗ್ಬಂಧಿಸಿ ಇಡಕೂಡದು; ಇಲ್ಲಿಯ ಯುವಕರು ಭಾರತದ ಇಂಥ ಇತರ ಜನಗಳೊಡನೆ ಸಂಪರ್ಕ ಬೆಳೆಸಿಕೊಂಡು ಉದ್ಯಮ, ವಾಣಿಜ್ಯ ಮತ್ತು ಇತರ ವ್ಯಾವಹಾರಿಕ ಜೀವನಕ್ಷೇತ್ರಗಳಲ್ಲಿಯೂ ಮನಸ್ಸು ಆತ್ಮಗಳ ಸಂಬಂಧವಾದ ಸಂಗತಿಗಳಲ್ಲಿಯೂ ಸಮ್ಮಿಳಿತರಾಗಿ ಕೆಲಸ ಮಾಡಬೇಕು. ಅಲ್ಲದೆ, ಆಂಧ್ರಯುವಕರು ಆಂಧ್ರದ ನಾಗರಿಕರಷ್ಟೇ ಅಲ್ಲದೆ, ಭಾರತದ ನಾಗರಿಕರಾಗಲೂ ಕಲಿಯಬೇಕು. ರಾಷ್ಟ್ರದ ಜೀವನವೇ ಅವರ ಜೀವನವು. ದೊಡ್ಡ ದೊಡ್ಡ ರಾಷ್ಟ್ರೀಯ ವ್ಯವಹಾರಗಳನ್ನೂ ಸಮಸ್ಯೆಗಳನ್ನೂ ತಿಳಿದುಕೊಳ್ಳಬಲ್ಲ, ರಾಷ್ಟ್ರದ ಸಮಿತಿಗಳಲ್ಲಿ ಆಂಧ್ರವನ್ನು ಪ್ರತಿನಿಧಿಸಬಲ್ಲ ಮತ್ತು ತನ್ನ ಜನದ ಬೆಂಬಲವನ್ನೂ ಸಹಕಾರವನ್ನೂ ಪಡೆದು ಪ್ರತಿಯೊಂದು ರಾಷ್ಟ್ರೀಯ ಚಟುವಟಿಕೆಯಲ್ಲಿಯೂ ಹಿತಸಂವರ್ಧಕ ಕಾರ್ಯದಲ್ಲಿಯೂ ಭಾಗವಹಿಸಬಲ್ಲ ವಿದಗ್ಧರನ್ನು ನಿಮ್ಮ ವಿಶ್ವವಿದ್ಯಾನಿಲಯ ನಿರ್ಮಿಸಬೇಕು. ಇನ್ನೂ ಒಂದು ವಿಶಾಲತರ ಕ್ಷೇತ್ರದಲ್ಲಿ ಭಾರತಕ್ಕೆ ಗುಣಶಕ್ತಿಸಂಪನ್ನ ಜನರ ಸೇವೆ ಅಗತ್ಯವಾಗಿದೆ. ಅದೆಂದರೆ ಅಂತಾರಾಷ್ಟ್ರೀಯ ಕ್ಷೇತ್ರ. ಏಕೆಂದರೆ, ಆಗಲೇ ಭಾರತವು ಅಂತಾರಾಷ್ಟ್ರೀಯ ಕ್ಷೇತ್ರದಲ್ಲಿ ತಕ್ಕಮಟ್ಟಿಗೆ ಗಣ್ಯತೆಯನ್ನು ಪಡೆದಿದೆ; ಅದು ಕ್ರಮೇಣ ಬೃಹತ್‌ಪರಿಮಾಣದಲ್ಲಿ ವೃದ್ಧಿ ಹೊಂದುವುದು. ಗಂಡುದನಿಯೆತ್ತಿ, ಇತರ ದೇಶಗಳಿಗೆ ಮಾರ್ಗದರ್ಶಕಗಳಾಗಿ, ಜಗತ್ತಿನ ಭವಿತವ್ಯವನ್ನೇ ನಿರ್ಧರಿಸಬಲ್ಲ ಕಾರ್ಯಪಟುತ್ವವುಳ್ಳ ರಾಷ್ಟ್ರಗಳಲ್ಲಿ ಭಾರತವೂ ಒಂದೆನಿಸುವ ಸಂಭವವಿದೆ. ಇದಕ್ಕೆಲ್ಲ ಅವರವರ ಪ್ರತಿಭೆ, ಕರ್ಮ-ಕೌಶಲ, ವ್ಯಕ್ತಿತ್ವದ ಪ್ರಭಾವಗಳಿಗೆ ತಕ್ಕ ತರಬೇತು ದೊರೆತ ಪ್ರಥಮಶ್ರೇಣಿಯ ಪುರುಷರು ಭಾರತಕ್ಕೆ ಬೇಕಾಗಿದೆ. ಈ ಎಲ್ಲ ಕ್ಷೇತ್ರಗಳಲ್ಲಿ ನಿಮ್ಮ ವಿಶ್ವವಿದ್ಯಾನಿಲಯವು ಅತ್ಯಂತ ಉಪಯುಕ್ತವಾಗಿ ಅತಿಪ್ರಾಮುಖ್ಯದ ಕಾರ್ಯವನ್ನು ಮಾಡಬಲ್ಲುದು.

ತನ್ನ ಬಂಧವಿಮೋಚನೆಯಾದ ಎರಡನೆಯ ವರ್ಷದ ಈ ಗಳಿಗೆಯಲ್ಲಿ ರಾಷ್ಟ್ರವು ಇನ್ನೂ ಅನೇಕ ಪ್ರಮುಖ ಸಮಸ್ಯೆಗಳ ಬಗ್ಗೂ ಸಾಧಿಸಬಹುದಾದ ಅನೇಕ ಕಾರ್ಯಗಳ ಬಗ್ಗೂ ವಿವೇಕದಿಂದ ವರ್ತಿಸದಿದ್ದರೆ ಬಲಿಷ್ಠವಾಗಿ ಎದುರಾಗಬಹುದಾದ ಅಪಾಯ-ಅನನುಕೂಲತೆಗಳ ಬಗ್ಗೂ ಎಚ್ಚರಗೊಳ್ಳಬೇಕಾಗಿದೆ. ಯುದ್ಧವು ಪರಿಸ್ಥಿತಿಯನ್ನು ಅಸ್ತವ್ಯಸ್ತಗೊಳಿಸಿಬಿಟ್ಟಿದೆ; ಅದರಲ್ಲಿ ಭಯ ಸಂಶಯ, ಕೊರತೆ ಕೋಟಲೆಗಳು ತುಂಬಿವೆ; ಅದರಿಂದ ಇನ್ನೂ ಒಂದು ಮಹಾ ಸಂಹಾರಸತ್ರ ಉದ್ಭವಿಸುವ ಶಂಕೆಯಿದೆ. ಅಂಥ ಸರ್ವನಾಶವನ್ನು ತಪ್ಪಿಸಬೇಕಾದರೆ

ಜನಗಳು ಸಂಯುಕ್ತ ಪ್ರಯತ್ನ ಮಾಡಬೇಕು; ಸಾನ್‌ಫ್ರಾನ್ಸಿಸ್ಕೋವಿನಲ್ಲಿ ಕಲ್ಪಿಸಿದ, ಆದರೆ ಇನ್ನೂ ಅಷ್ಟೇನೂ ಆಚರಣೆಯಲ್ಲಿ ಯಶಸ್ವಿಯಾಗದ ಜಾಗತಿಕ ಒಕ್ಕೂಟವನ್ನು ರಚಿಸುವತ್ತ ಪ್ರಯತ್ನಿಸಿದರೆ ಮಾತ್ರ ನಿಜವಾಗಿ ಜಗತ್ತನ್ನು ವಿನಾಶೋನ್ಮುಖತೆಯಿಂದ ಪಾರುಮಾಡಲಾದೀತು. ಆ ಪ್ರಯತ್ನವನ್ನು ಇನ್ನೂ ಮುಂದುವರಿಸಿ ಹೊಸ ಯೋಜನೆಗಳನ್ನು ಹುಡುಕಿತೆಗೆದು, ಆ ಮೂಲಕ ಹಿಂದಿನ ಮತ್ತು ಇಂದಿನ ಅಪಾಯಕರವಾದ ಜಗದ್ವಿಭಜನೆಯಿಂದ ಮುಕ್ತವಾಗುವ ಪೂರ್ವದ ಕಠಿನ ಮಧ್ಯಾವಧಿಯನ್ನು ಸುಲಭವಾಗಿ ಕಳೆಯುವಂತೆ ಮಾಡಿ ಸಮಂಜಸವಾದ ಜಗದ್‌ವ್ಯವಸ್ಥೆಯನ್ನು ಮಾಡಬೇಕಾಗಿದೆ. ಹಾಗೆ ಮಾಡದಿದ್ದರೆ ಅನಂತ ಅಸುಖ ಮತ್ತು ಅಧಃಪತನಗಳಿಂದ ತಪ್ಪಿಸಿಕೊಂಡು ಉಳಿಯುವುದು ಸಾಧ್ಯವಾಗದು. ಸ್ವತಃ ಭಾರತಕ್ಕೆ ಇನ್ನಷ್ಟು ಗಂಭೀರವಾದ ಪ್ರಕರಣಗಳಿವೆ: ಕೆಲ ಪ್ರಲೋಭಕ ಮಾರ್ಗಗಳನ್ನು ಹಿಡಿದು ಇತರ ಅನೇಕ ರಾಷ್ಟ್ರಗಳಂತೆ ಭಾರತವಾದರೂ ಸಿರಿವಂತಿಕೆಯ ವಾಣಿಜ್ಯೋದ್ಯಮಗಳನ್ನು ಬೆಳೆಸಿಕೊಂಡು, ಸಾಮಾಜಿಕ ಮತ್ತು ರಾಜಕೀಯ ಜೀವನದ ಒಂದು ಬಲಿಷ್ಠ ಸಂಘಟನೆಯೆನಿಸಿ, ಹೆಚ್ಚಿನ ಮಟ್ಟದಲ್ಲಿ ಜಯಪ್ರದವಾಗಿ ಅಧಿಕಾರಲಾಲಸೆಯ ರಾಜಕಾರಣದ ವ್ಯವಹಾರಗಳನ್ನು ಮಾಡುತ್ತ, ತನ್ನ ಹಿತಸಂಬಂಧಗಳನ್ನು ಅತ್ಯುತ್ಕಂಠೆಯಿಂದ ಸಂರಕ್ಷಿಸಿಕೊಳ್ಳುತ್ತಲೂ ವಿಸ್ತರಿಸುತ್ತಲೂ ಹೋಗಿ, ಜಗತ್ತಿನ ಬಹುಭಾಗದ ಮೇಲೆ ತನ್ನ ವರ್ಚಸ್ಸಿನ ಮುದ್ರೆಯೊತ್ತಬಹುದು, ಭಾರತವು ಹೀಗೆ ಮಾಡಿದರೆ ಅದು ಬಹಳ ಭವ್ಯವಾದ ಪ್ರಗತಿಯೆನಿಸೀತು; ಆದರೆ ಆ ಪ್ರಗತಿ ಸ್ವಧರ್ಮವನ್ನು ತ್ಯಜಿಸಿ, ಆತ್ಮಗ್ಲಾನಿ ಹೊಂದಿ ಸಾಧಿಸಿದ್ದೆನಿಸುವುದು. ಆಗ ಪ್ರಾಚೀನ ಭಾರತವೂ ಅದರ ಭಾವನೆಯೂ ನಿಃಶೇಷವಾಗಿ ಮಾಯವಾಗಿ, ಮಿಕ್ಕ ರಾಷ್ಟ್ರಗಳ ಪಂಕ್ತಿಗೆ ಬರಿ ಒಂದು ಹೊಸ ರಾಷ್ಟ್ರವನ್ನು ಸೇರಿಸಿದಂತಾಗಿ ಆ ಮೂಲಕ ನಮಗಾಗಲಿ ಜಗತ್ತಿಗಾಗಲಿ ಏನೂ ಲಾಭವಾದಂತಾಗದು. ಇನ್ನೂ ಒಂದು ವಿಕಲ್ಪವೆಂದರೆ, ಭಾರತವು ಹೆಚ್ಚಿನ ಅಪಾಯಕಾರಿಯೆನಿಸದೆ ಬಾಹ್ಯ ಜೀವನದಲ್ಲಿ ಸಮೃದ್ಧಿ ಪಡೆದರೂ ತನ್ನ ಸಂಪನ್ನತೆಯಿಂದ ಸಾಂದ್ರವಾದ ಮತ್ತು ಸುದೃಢವಾಗಿ ಪರಿಗೃಹೀತವಾದ ಆಧ್ಯಾತ್ಮಿಕ ಅನುಭವ ಮತ್ತು ಜ್ಞಾನಗಳನ್ನು ಕಳೆದುಕೊಳ್ಳಬಹುದು ಎಂಬುದು. ಜಗತ್ತಿನ ಇತರ ಭಾಗಗಳು ತನ್ನೆಡೆಗೆ ಹೆಚ್ಚು ಹೆಚ್ಚಾಗಿ ಆಧ್ಯಾತ್ಮಿಕ ನೆರವಿಗಾಗಿಯೂ ಉತ್ತಾರಕ ಜ್ಯೋತಿಗಾಗಿಯೂ ನಿರೀಕ್ಷಕ ನೇತ್ರದಿಂದ ನೋಡುತ್ತಿರುವ ಸಂಧಿಯಲ್ಲಿಯೇ ಭಾರತವು ತನ್ನ ಆಧ್ಯಾತ್ಮಿಕ ಪಿತೃಸ್ವವನ್ನು ದೂರ ಎಸೆದುಬಿಟ್ಟರೆ ಅದೊಂದು ವಿಧಿಲಿಖಿತವಾದ ಆವಿಷ್ಟ ಕಥೆಯೇ ಆದೀತು. ಹೀಗಾಗಬಾರದು, ಖಂಡಿತವಾಗಿಯೂ ಆಗಲಿಕ್ಕಿಲ್ಲ, ಆದರೆ ಅಂಥ ಅಪಾಯ ಸಂಭಾವ್ಯವಲ್ಲವೆಂದು ಹೇಳಲು ಬರುವಂತಿಲ್ಲ. ಇಷ್ಟಲ್ಲದೆ ಇನ್ನೂ ಅಸಂಖ್ಯ ಸಮಸ್ಯೆಗಳು ಆಗಲೇ ದೇಶಕ್ಕೆದುರಾಗಿವೆ. ಅಥವಾ ಸದ್ಯದಲ್ಲೇ ಎದುರಾಗಲಿವೆ. ನಿಃಸಂದೇಹವಾಗಿಯೂ ಅವುಗಳನ್ನು ಭೇದಿಸುವುದರಲ್ಲಿ ನಾವು ಜಯಶಾಲಿಗಳಾಗುವೆವು; ಆದರೆ ಇಷ್ಟು ಸುದೀರ್ಘ ದಾಸ್ಯದಲ್ಲಿದ್ದು, ಅದರ ವಿಘ್ನಕರ-ವಿಘಾತಕ ಪರಿಣಾಮಗಳಿಗೆ ತುತ್ತಾಗಿರುವಾಗ, ಭಾರತದ ನೈಜ ಭವಿತವ್ಯವನ್ನು ಪೂರ್ತಿಗೊಳಿಸಬೇಕಾದರೆ ಒಂದು ಮಹತ್ತರವಾದ ಒಳಹೊರಗಣ ಬಿಡುಗಡೆ-ಬದಲಾವಣೆಗಳಾಗಬೇಕು, ಒಂದು ವಿಶಾಲ ಪರಿಧಿಯ ಅಂತರ್‌ಬಾಹ್ಯ ಪುರೋಗತಿಯನ್ನು ಸಾಧಿಸಿಕೊಳ್ಳಬೇಕು.

— **ಬಿ. ಎಚ್. ಶ್ರೀಧರ**
( ಅನುವಾದಕ )

# ಶ್ರೀ ಅರವಿಂದರೂ ಶಾರೀರಿಕ ಶಿಕ್ಷಣವೂ

[ ಶ್ರೀ ಅರವಿಂದ ಆಶ್ರಮದ ನಿವಾಸಿಗಳ ಹಾಗು ವಿದ್ಯಾರ್ಥಿಗಳ ಶಾರೀರಿಕ ಶಿಕ್ಷಣ ವಿಷಯಕ ಚಟುವಟಿಕೆಗಳು ಆಶ್ರಮದ ಅಂಗಸಂಸ್ಥೆಯಾದ “ ಜೆ. ಎಸ್. ಎ. ಎಸ್. ಎ. ”* ದ ಪರವಾಗಿ ನಡೆಯುತ್ತವೆ. ಈ ಚಟುವಟಿಕೆಗಳಿಗೆ ಮೀಸಲಾಗಿ “ Bulletin of Physical Education ” ( ಶಾರೀರಿಕ ಶಿಕ್ಷಣಪತ್ರಿಕೆ ) ಎಂಬ ಹೆಸರಿನ ಒಂದು ತ್ರೈಮಾಸಿಕವೂ ಹೊರಡುತ್ತಿದೆ. ೧೯೪೯ ರ ಫೆಬ್ರುವರಿ ತಿಂಗಳಲ್ಲಿ ಈ ತ್ರೈಮಾಸಿಕದ ಪ್ರಥಮ ಸಂಚಿಕೆಯು ಪ್ರಕಟವಾಯಿತು. ಅದರಲ್ಲಿ ಶಾರೀರಿಕ ಶಿಕ್ಷಣವನ್ನು ಕುರಿತು ಶ್ರೀ ಅರವಿಂದರು ಒಂದು ಸಂದೇಶವನ್ನಿತ್ತಿರುವರು. ಅದರಲ್ಲಿ ಇಂತಹ ಚಟುವಟಿಕೆಗಳು ಹಾಗೂ ಅವುಗಳನ್ನು ನಡೆಯಿಸುವ ಸಂಸ್ಥೆಗಳು ರಾಷ್ಟ್ರದ ಏಳಿಗೆಗಾಗಿ ತೀರ ಅಗತ್ಯವೆಂತಿವೆ ಹಾಗೂ ಅವುಗಳ ಸಂಘಟನೆಯನ್ನು ವಿಸ್ತೃತ ತಳಹದಿಯ ಮೇಲೆ ಕೈಕೊಳ್ಳುವುದು ಅವಶ್ಯವೆಂತಿದೆ ಎಂಬುದನ್ನು ಕುರಿತು ವಿಚಾರಪರಿಪ್ಲುತ ವಿವೇಚನೆಯನ್ನು ಮಾಡಿರುವರು. ]

ಸ್ಥೂಲವಾಗಿ ನೋಡುವವರಿಗೆ ಶಾರೀರಿಕ ಶಿಕ್ಷಣಕ್ಕೆ ಸಂಬಂಧಿಸಿದ ಚಟುವಟಿಕೆಗಳು ಬರಿ ಆಟಗಳಾಗಿಯೋ, ಮನೋರಂಜನೆಯ ಕಾರ್ಯಕ್ರಮಗಳಾಗಿಯೋ ತೋರುವವು ; ಇಲ್ಲವೆ ಶರೀರದ ಅಂತರ್ಗತ ಉತ್ಸಾಹಕ್ಕೆ ಹಾಗೂ ಕ್ರಿಯಾಶೀಲತೆಯ ಸ್ವಾಭಾವಿಕ ಪ್ರವೃತ್ತಿಗೆ ಎಡೆ ದೊರೆಯಲು ಒಂದು ಕ್ಷೇತ್ರವೆಂದಾಗಲಿ, ಶರೀರದ ಆರೋಗ್ಯ-ಶಕ್ತಿಗಳನ್ನು ಉಳಿಸಿ ಬೆಳೆಯಿಸಲೊಂದು ಸಾಧನವೆಂದಾಗಲಿ ಇವುಗಳನ್ನು ಕಾಣುವುದುಂಟು. ಆದರೆ ಇದಕ್ಕಿಂತಲೂ ಹೆಚ್ಚಿನ ಉದ್ದೇಶ ಅವುಗಳಿಗಿವೆ. ಶಾಂತಿಕಾಲದಲ್ಲಾಗಲಿ, ಯುದ್ಧಕಾಲದಲ್ಲಾಗಲಿ ಯಾವುದೇ ಜನಾಂಗವು ಅತ್ಯವಶ್ಯವಾಗಿ ಕೆಲವೊಂದು ಅಭ್ಯಾಸಗಳನ್ನು, ಶಕ್ತಿಗಳನ್ನು ಹಾಗು ಗುಣಗಳನ್ನು ಬೆಳೆಯಿಸಿಕೊಳ್ಳಬೇಕಾಗುತ್ತದೆ, ಅದರಂತೆಯೆ ಸಾಮಾಜಿಕ ರಾಜಕೀಯ ಚಟುವಟಿಕೆಗಳಿಗೂ, ಅದೇಕೆ ಮಾನವಜಾತಿಯ ಸಾಮೂಹಿಕ ಪ್ರಯತ್ನಗಳ ಬಹುಶಃ ಎಲ್ಲ ಕ್ಷೇತ್ರಗಳಲ್ಲಿಯೂ ಈ ಅಭ್ಯಾಸ-ಶಕ್ತಿ-ಗುಣಗಳ ಅಗತ್ಯವಿರುತ್ತದೆ; ಅವೆಲ್ಲವುಗಳ ವಿಕಾಸಕ್ಕೆ ವ್ಯಾಯಾಮಗಳು ಹಾಗು ಆಟಗಳು ಅವಕಾಶವನ್ನೊದಗಿಸುತ್ತವೆ. ಶಾರೀರಿಕ ಶಿಕ್ಷಣದ ಈ ರಾಷ್ಟ್ರೀಯ ಸ್ವರೂಪಕ್ಕೆ ನಾನು ವಿಶೇಷ ಮಹತ್ತ್ವವನ್ನು ಕೊಡುವೆ.

ಈಗಿನ ಕಾಲದಲ್ಲಿ ಆಟ-ವ್ಯಾಯಾಮ-ಕವಾಯತುಗಳಲ್ಲಿ ಜನರ ಆಸಕ್ತಿ ಬೆಳೆದು, ಅವಕ್ಕೆ ಮಹತ್ತ್ವದ ಸ್ಥಾನವೇನೋ ದೊರಕಿದೆ, ಇತಿಹಾಸದಲ್ಲಿ ಪ್ರಾಚೀನ ಕಾಲದಲ್ಲಿ ಇದಕ್ಕೆ ಸರಿದೊರೆಯಾದ ಉದಾಹರಣೆಯೆಂದರೆ ಗ್ರೀಸ ದೇಶವೇ ಆಗಿದೆ. ಪ್ರಾಚೀನ ಗ್ರೀಸದಲ್ಲಿ ಎಲ್ಲ ಸಾಮಾಜಿಕ ಚಟುವಟಿಕೆಗಳಿಗೆ ಅಷ್ಟೇ ಲಕ್ಷ್ಯವನ್ನು ಕೊಡಲಾಗುತ್ತಿದ್ದಿತು; ಶಾರೀರಿಕ ವಿಭಾಗದಲ್ಲಿ ವ್ಯಾಯಾಮಶಾಲೆ ರಥಗಳನ್ನೋಡಿಸುವ ಪಂದ್ಯ-ಆಟಗಳು-ವ್ಯಾಯಾಮಗಳು ಮೊದಲಾದವುಗಳಿಗೆ ಮಹತ್ತ್ವವನ್ನು ಕೊಡುತ್ತಿದ್ದಂತೆಯೇ ಮಾನಸಿಕ ವಿಭಾಗದಲ್ಲಿ ಕಲೆಗಳಿಗೆ-ಕಾವ್ಯಕ್ಕೆ-ನಾಟಕಕ್ಕೆ ಅಷ್ಟೆ ಪ್ರಾಧಾನ್ಯವನ್ನು ಕೊಡಲಾಗುತ್ತಿದ್ದಿತು, ಅಲ್ಲಿಯ ‘ ನಗರರಾಜ್ಯ ’ದ ಆಡಳಿತಗಾರರು ಅವುಗಳಿಗೆ ಪ್ರೋತ್ಸಾಹವನ್ನೀಯುತ್ತಿದ್ದರಲ್ಲದೆ, ಅತ್ತ ತಮ್ಮ ಸ್ವಂತದ ಗಮನ

* “ Jeunesse Sportive de l'Ashram de Sri Aurobindo.

ವನ್ನೀಯುತ್ತಿದ್ದರು. ‘ಒಲಿಂಪಿಯಡ್’ ಎಂಬ ಹೆಸರಿನಲ್ಲಿ ರಾಷ್ಟ್ರೀಯ ವ್ಯಾಯಾಮಗಳಿಗೆ ಸಂಸ್ಥೆಯ ಸ್ವರೂಪ ಕೊಟ್ಟದ್ದು ಗ್ರೀಸದೇಶವೇ. ‘ಒಲಿಂಪಿಯಡ್’ ಇದೀಗ ಅಂತರ್ರಾಷ್ಟ್ರೀಯ ಸಂಸ್ಥೆಯಾಗಿ ಮತ್ತೆ ತಲೆಯೆತ್ತಿದುದು ಆ ಪ್ರಾಚೀನ ಜೀವನದೃಷ್ಟಿಗೆ ಮತ್ತೆ ಪ್ರಾಶಸ್ತ್ಯ ಸಿಕ್ಕುತ್ತಿರುವುದರ ಸುಚಿಹ್ನವಾಗಿದೆ. ನಮ್ಮ ದೇಶದಲ್ಲಿಯೂ ಈ ವಿಷಯದಲ್ಲಿ ಆಸಕ್ತಿ ಬೆಳೆಯತೊಡಗಿದೆ. ‘ಒಲಿಂಪಿಯಡ್’ದಂತಹ ಅಂತರ್ರಾಷ್ಟ್ರೀಯ ಪಂದ್ಯಗಳಲ್ಲಿ ಭಾರತವೂ ಭಾಗವಹಿಸತೊಡಗಿದೆ. ಸ್ವತಂತ್ರಭಾರತದ ಸರಕಾರವು ರಾಷ್ಟ್ರದ ವಿವಿಧಾಂಗಗಳ ಬೆಳವಣಿಗೆಯ ಕಡೆಗೆ ತನ್ನ ಗಮನವನ್ನು ಕೊಡಲು ಮೊದಲುಮಾಡಿದೆ. ವೈಯಕ್ತಿಕ ಪ್ರಯತ್ನಗಳ ಕ್ಷೇತ್ರದಲ್ಲಿ ಇನ್ನು ಮೇಲೆ ಸರಕಾರವು ಹೆಚ್ಚು ಹೆಚ್ಚು ಭಾಗವನ್ನು ವಹಿಸಬಹುದಾಗಿದೆಯಲ್ಲದೆ, ನಿರ್ದೇಶನವನ್ನೂ ಕೈಕೊಳ್ಳಬಹುದಾಗಿದೆ. ರಾಷ್ಟ್ರದ ಶಾರೀರಿಕ ದಾರ್ಢ್ಯ–ಆರೋಗ್ಯಗಳನ್ನು ಉಳಿಸಿ ಬೆಳೆಸುವ ಪ್ರಶ್ನೆಯನ್ನು ಅದೀಗ ವಿಚಾರಿಸುತ್ತಿದೆಯಲ್ಲದೆ, ಅದರ ಮಹತ್ತ್ವವು ಸಾರ್ವಜನಿಕರ ಮನ್ನಣೆಗೆ ಪಾತ್ರವಾಗುವಂತೆ ವಿಶೇಷ ಪ್ರಯತ್ನಗಳನ್ನು ಅದು ಮಾಡುತ್ತಿದೆ. ಈ ಸಂದರ್ಭದಲ್ಲಿ ಆಟಗಳಿಗೂ ವ್ಯಾಯಾಮಸಂಸ್ಥೆಗಳಿಗೂ ಇಂತಹ ಇನ್ನಿತರ ಚಟುವಟಿಕೆಗಳಿಗೂ ಪ್ರೋತ್ಸಾಹನವನ್ನೀಯುವುದರಿಂದ ತುಂಬ ಲಾಭವಾಗುವುದು. ಬಾಲ್ಯ, ಯೌವನ ಹಾಗೂ ತರುವಾಯದ ಸಂಧಿಕಾಲದಲ್ಲಿ ಇಂತಹ ವ್ಯಾಯಾಮಗಳಲ್ಲಿ ಭಾಗವಹಿಸುವ ಅಭ್ಯಾಸವು ಸಾರ್ವತ್ರಿಕವಾದರೆ, ದೃಢಕಾಯವೂ ಉತ್ಸಾಹಯುತವೂ ಆದ ಪ್ರಜೆಯು ನಿರ್ಮಾಣವಾಗುವುದಕ್ಕೆ ತುಂಬ ಸಹಾಯವಾಗುವುದರಲ್ಲಿ ಸಂದೇಹವಿಲ್ಲ.

ಶಾರೀರಿಕ ಆರೋಗ್ಯ–ಶಕ್ತಿ–ದೃಢತೆಗಳ ತಳಪಾಯವನ್ನು ಹಾಕುವುದು ಅಗತ್ಯದ ಮಾತಾಗಿದ್ದರೂ, ಅದಕ್ಕಿಂತ ಹೆಚ್ಚಿನ ಉದ್ದೇಶವೂ ಒಂದಿದೆ. ಶಿಸ್ತು, ನೈತಿಕ ಧೈರ್ಯ ಹಾಗೂ ಅಚ್ಚಳಿಯದ ಶೀಲ ಎಂಬೀ ಗುಣಗಳ ಪರಿಪೋಷವೂ ಈ ವ್ಯಾಯಾಮ–ವಿಷಯಕ ಚಟುವಟಿಕೆಗಳಿಂದಾಗುತ್ತದೆ. ಎಷ್ಟೋ ಆಟಗಳಂತೂ ಈ ವಿಷಯದಲ್ಲಿ ತುಂಬಾ ಬೆಲೆಯುಳ್ಳವುಗಳಾಗಿವೆ. ಧೈರ್ಯ, ಕಷ್ಟಸಹಿಷ್ಣುತೆ, ಉತ್ಸಾಹಯುತ ಚಟುವಟಿಕೆ, ಹೊಣೆ ಹೊತ್ತು ಕೆಲಸ ಮಾಡುವಿಕ ಎಂಬೀ ಗುಣಗಳನ್ನು ಅವು ಬೆಳೆಸುವವಷ್ಟೇ ಅಲ್ಲ, ಅನಿವಾರ್ಯವಾಗಿ ಅವು ಉಂಟಾಗುವಂತೆ ಮಾಡುವವು. ಹಾಗೆಯೇ ಕೌಶಲ್ಯ, ದೃಢಸಂಕಲ್ಪ, ಅಲ್ಪಾವಕಾಶದಲ್ಲಿ ನಿರ್ಣಯಕ್ಕೆ ಬಂದು ಕಾರ್ಯರಂಗಕ್ಕಿಳಿಯುವ ಹದ, ಪ್ರಸಂಗಾವಧಾನ ಮೊದಲಾದ ಸದ್ಗುಣಗಳನ್ನೂ ಅವು ಪ್ರೋತ್ಸಾಹಿಸುವವು ಈ ಆಟಗಳಿಂದ ಹೊಂದುವ ತೀರ ಹೆಚ್ಚಿನ ಪ್ರಯೋಜನವೊಂದಿದೆ ಮನಸ್ಸಿನ ವಿಚಾರದ ಮಾರ್ಗದರ್ಶನವಿಲ್ಲದೆ ಶರೀರವು ಸಹಜಪ್ರವೃತ್ತಿಯಿಂದ ಆಯಾ ಸಂದರ್ಭದಲ್ಲಿ ಏನು ಬೇಕೆಂಬುದನ್ನು ತನ್ನಷ್ಟಕ್ಕೆ ತಾನೇ ತಿಳಿದುಕೊಂಡು ಮಾಡಬಲ್ಲ ಅರಿವು ಇವುಗಳಿಂದ ಜಾಗೃತವಾಗುತ್ತದೆ. ಶರೀರಕ್ಕೆ ಸಹಜವಾದ ಈ ಶಕ್ತಿಯು ಮನಸ್ಸಿನ ಶೀಘ್ರಗ್ರಹಣಶಕ್ತಿ ಹಾಗೂ ಸ್ವಯಂಸ್ಫೂರ್ತಿಯಿಂದ ತ್ವರಿತ ನಿರ್ಣಯ ರೂಪವಾಗಿ ಪ್ರಕಟವಾಗುವ ಸಂಕಲ್ಪಶಕ್ತಿ---ಇವುಗಳಿಗೆ ಅನುರೂಪವಾದುದಾಗಿದೆ. ಇದಲ್ಲದೆ, ( ಸಾಮೂಹಿಕ ಆಟಪಾಟಗಳಲ್ಲಿ ಹೆಚ್ಚಾಗಿ ಕಂಡುಬರುವ ) ದೇಹದ ಸುಸಂಯೋಜಿತ ಹಾಗೂ ಸರಿಯಾದ ಚಲನವಲನೆಗಳ ಅಭ್ಯಾಸವನ್ನೂ ಉಲ್ಲೇಖಿಸಬಹುದು: ‘ಮಾರ್ಚ’—‘ಡ್ರಿಲ್’ ಮುಂತಾದ ವ್ಯಾಯಾಮಗಳಿಂದುಂಟಾಗುವ ಶಾರೀರಿಕ ಶ್ರಮವನ್ನೂ ಶಕ್ತಿಯ ಅಪವ್ಯಯವನ್ನೂ ಈ ಆಟಪಾಟಗಳು ಆದಷ್ಟು ತಪ್ಪಿಸುತ್ತವಲ್ಲದೆ ಶಿಕ್ಷಣದ ಶಿಸ್ತಿಗೊಳಪಡದ ದೇಹದ ತಾಳಗೆಟ್ಟ, ಅವ್ಯವಸ್ಥಿತ,

ನಿರರ್ಥಕ ಚಲನವಲನೆಗಳ ಬದಲಾಗಿ ಮೇಲೆ ಹೇಳಿದ ತಾಲಬದ್ಧ, ಸುಸಂಯೋಜಿತ ಚಲನವಲನೆಗಳನ್ನು ಅವು ಕಲಿಸುವವು. ಈ ಆಟಪಾಟಗಳ ಇನ್ನೊಂದು ಅಮೌಲ್ಯ ಪ್ರಯೋಜನವೆಂದರೆ, "ಆಟಗಾರಿಕೆಯ ಗುಣ" (Sporting Spirit)ದ ಬೆಳವಣಿಗೆ; ಇದರಲ್ಲಿ ಸಲೀಲತೆ, ಸಹಿಷ್ಣುತೆ, ಸರ್ವರ ಬಗ್ಗೆ ಕಳಕಳಿ, ಹುರಿಯಾಳುಗಳ ಹಾಗೂ ಪ್ರತಿಸ್ಪರ್ಧಿಗಳ ಬಗೆ ಸ್ನೇಹಭಾವ ಹಾಗೂ ಯೋಗ್ಯ ದೃಷ್ಟಿಕೋನ, ಸಂಯಮ, ಆಟದ ನಿಯಮಗಳನ್ನು ತಪ್ಪದೆ ಪಾಲಿಸುವ ಗುಣ, ಯಶಸ್ವಿ ಸ್ಪರ್ಧಾಳುಗಳ ಬಗ್ಗೆ ಕೋಪ-ತಾಪ-ಉದ್ವಿಗ್ನತೆಗಳನ್ನುಂಟು ಮಾಡಿಕೊಳ್ಳದೆ ಸೋಲು-ಗೆಲವುಗಳೆರಡನ್ನೂ ಸಮಭಾವದಿಂದ ಸ್ವೀಕರಿಸುವುದು, ನ್ಯಾಯಾಧೀಶರ-ಅಂಪಾಯರರ-ಪಂಚರ ನಿರ್ಣಯಗಳನ್ನು ಮರುಮಾತಿಲ್ಲದೆ ಅಂಗೀಕರಿಸುವುದು — ಇವೆಲ್ಲ ಗುಣಗಳು ಬರುತ್ತವೆ. ಈ ಗುಣಗಳು ಆಟಗಳಲ್ಲಿ ಮಾತ್ರವಲ್ಲ, ಜೀವನದಲ್ಲಿಯೂ ಒಟ್ಟಾರೆ ತುಂಬಾ ಉಪಯುಕ್ತವಾಗಿವೆ, ಆದರೆ ಆಟಗಳಿಂದ ಈ ಗುಣಗಳ ಬೆಳವಣಿಗೆಗೆ ಆಗುವ ನೆರವು ನೇರವಾದುದು ಹಾಗೂ ಅತ್ಯಮೌಲ್ಯವಾದುದು. ಬರಿ ವ್ಯಕ್ತಿಯ ಜೀವನದಲ್ಲಿ ಮಾತ್ರವಲ್ಲ, ರಾಷ್ಟ್ರೀಯ ಹಾಗೂ ಅಂತರ್‌ರಾಷ್ಟ್ರೀಯ ಜೀವನದಲ್ಲಿಯೂ ಈ ಗುಣಗಳು ವಿಸ್ತೃತ ಪ್ರಮಾಣದಲ್ಲಿ ಬೆಳೆದರೆ, ಅಲ್ಲಿ ಕಾಣುತ್ತಿರುವ ವಿರೋಧದ ದೃಶ್ಯವು ಮಾಯವಾಗಿ, ಕಷ್ಟಮಯವಾಗಿ ತೋರುತ್ತಿರುವ ನಮ್ಮೆಲ್ಲರ ಜೀವನಯಾತ್ರೆಯು ಹೆಚ್ಚು ಸುಗಮವಾದೀತಲ್ಲದೆ, ಸಾಮರಸ್ಯ-ಶಾಂತಿ-ಸಮಾಧಾನಗಳು ಹೆಚ್ಚಾಗಿ ನೆಲೆಗೊಳ್ಳಬಹುದಾಗಿದೆ. ಕೆಲವು ಆಟಗಳಲ್ಲಿ ಅತ್ಯಗತ್ಯವಾಗಿ ಬೇಕಾಗುವ ಶಿಸ್ತು, ಆಜ್ಞಾಪಾಲನೆ, ಓರಣ, ಕೂಡಿ ಕೆಲಸ ಮಾಡುವ ಗುಣ—ಇವಂತೂ ತುಂಬಾ ಮಹತ್ತ್ವದುವಾಗಿವೆ. ಇವುಗಳಿಲ್ಲದೆ ಯಶಸ್ಸು ಸಿಗುವುದು ಕಷ್ಟ. ಜೀವನದಲ್ಲಿ, ವಿಶೇಷವಾಗಿ ರಾಷ್ಟ್ರೀಯ ಜೀವನಲ್ಲಿ ಯಶಸ್ವಿಯಾಗಲು, ಸಂಘರ್ಷಣದಲ್ಲಿ ವಿಜಯಿಯಾಗಲು, ಕೈಕೊಂಡ ಘನೋದ್ದೇಶವು ಸಫಲವಾಗಲು ಸಾಮೂಹಿಕ ಸ್ವರೂಪದ ಚಟುವಟಿಕೆಗಳಲ್ಲಿ ಮುಂದಾಳ್ತನ ವಹಿಸುವ ಇಲ್ಲವೆ ಮುಂದಾಳನ್ನು ವಿಧೇಯವಾಗಿ ಹಿಂಬಾಲಿಸುವ ಸಂದರ್ಭಗಳು ನೂರಾರು ಇರುತ್ತವೆ. ನಾಯಕನಾಗಿ ಇಲ್ಲವೆ ಕಪ್ತಾನನಾಗಿ, ಮುಂದಾಳ್ತನದ ಸಾಮರ್ಥ್ಯವನ್ನೂ ಕೌಶಲ್ಯವನ್ನೂ ತೋರಿಸಿ, ತನ್ನ ಅನುಯಾಯಿಗಳ ವಿಶ್ವಾಸವನ್ನು ಗಳಿಸಿ ಅವರು ವಿಧೇಯರಾಗಿ ತಾವಾಗಿ ನಡೆಯುವಂತೆ ಮಾಡುವ ಗುಣವು ಎಲ್ಲ ಬಗೆಯ ಸಾಮೂಹಿಕ ಕಾರ್ಯಗಳಲ್ಲಿ ಹಾಗೂ ಸಾಹಸಗಳಲ್ಲಿ ಅತ್ಯಗತ್ಯವಾಗಿ ಬೇಕಾದುದು; ಆದರೆ ಒಂದು ಮನಸ್ಸು, ಒಂದು ದೇಹ ಎಂಬಂತೆ ತಾವು ಸ್ವತಃ ಅನ್ಯರೊಡನೆ ಹೊಂದಿಕೊಂಡು ನಡೆಯದೆ ಹಾಗೂ ತಾವೇ ಆಜ್ಞಾಪಾಲನವನ್ನು ಕಲಿಯದೆ ಈ ಗುಣವನ್ನು ಯಾರಾದರೂ ಅಳವಡಿಸಿಕೊಳ್ಳುವುದು ತುಂಬ ಬಿಗಿ. ಸಾಮಾಜಿಕ ಸುವ್ಯವಸ್ಥೆಯು ವ್ಯಕ್ತಿಯ ಸ್ವೇಚ್ಛೆಗೆ ವಿಸಂಗತವಾಗಿರದೆ ಆ ಸ್ವೇಚ್ಛೆಯ ಸದುಪಯೋಗವಾಗಲು ಹಾಗೂ ಆ ಸ್ವೇಚ್ಛೆಗೆ ತಕ್ಕ ಅವಕಾಶ ದೊರೆತು, ಅಡ್ಡಬರುವ ತೊಡಕು-ತೊಂದರೆಗಳನ್ನು ನೀಗಿ ಮುಂದರಿಯಲು ಒಂದು ಅತ್ಯಾವಶ್ಯಕವಾದ ನಿರ್ಬಂಧವಾಗಿರುವಂತೆ, ಈ ರೀತಿಯ ಶಿಸ್ತಿನ ಅಭ್ಯಾಸವು-ನಿಷ್ಠುರ ನಿಯಮಬದ್ಧತೆಯು-ವಿಧೇಯತೆಯು ವೈಯಕ್ತಿಕ ಸ್ವಾತಂತ್ರ್ಯಕ್ಕೆ ವಿಸಂಗತವಾಗಿರದೆ, ಎಷ್ಟೋ ಸಲ ಆ ಸ್ವಾತಂತ್ರ್ಯದ ಸದ್ವಿನಿಯೋಗವಾಗಲು ಅತ್ಯಗತ್ಯವಾದ ಸಂಗತಿಯಾಗಿದೆ. ಸಾಮುದಾಯಿಕ ವ್ಯವಹಾರಗಳಲ್ಲೆಲ್ಲಾ ಈ ನಿಯಮವನ್ನು ಅನಿವಾರ್ಯವಾಗಿ ಪಾಲಿಸಬೇಕಾಗುವದು. ಮೇಳವಾದ್ಯವಾದನದ (Orchestration) ಹೋಲಿಕೆಯನ್ನು ಇದಕ್ಕೆ ಕೊಡಬಹುದಾಗಿದೆ; ಮೇಳವಾದ್ಯವಾದನದಲ್ಲಿ ಭಾಗವಹಿಸುವ ವಾದ್ಯಗಾರರು ನಿಯಂತ್ರಕನ ಸೂಚನೆಗಳನ್ನು ಲಕ್ಷಿಸದೆ ತಂತಮ್ಮ

ವೈಯಕ್ತಿಕ ಲಹರಿಯಂತೆ ಬಾರಿಸತೊಡಗಿದರೆ ಆ ಕಾರ್ಯಕ್ರಮವು ಯಶಸ್ವಿಯಾಗುವುದೆಂತು? ಆಧ್ಯಾತ್ಮಿಕ ವಿಷಯಗಳಲ್ಲಿಯೂ ಇದೇ ನಿಯಮವು ಅನ್ವಯಿಸುವುದು; ಗುರುವಿನ ಮಾರ್ಗ ದರ್ಶನವನ್ನು ದುರ್ಲಕ್ಷಿಸಿ, ತನ್ನ ಅನನುಭವದ--ಅಶಿಕ್ಷಿತ ಅನಿಸುವಿಕೆಗಳಿಗೇ ಶರಣುಹೋಗು ವವನಿಗೆ ಎಡವಿಬೀಳುವುದು ತಪ್ಪಿದ್ದಲ್ಲ, ಅವನ ಆಧ್ಯಾತ್ಮಿಕ ಸಿದ್ಧಿಯ ಹಾದಿಯಲ್ಲಿ ಸಂಕಟ ಗಳು ತಂಡತಂಡವಾಗಿ ಬರುವುದಾದರೂ ಸಹಜವಾಗಿದೆ. ಆಟ-ವ್ಯಾಯಾಮಗಳ ಮೂಲಕ ದೊರೆಯುವ ಶಿಕ್ಷಣದಿಂದ ಪಡೆಯಬಹುದಾದ ಇತರ ಲಾಭಗಳನ್ನು ನಾನು ಹೇಳಬೇಕಾಗಿಲ್ಲ, ಹಾಗೂ ರಾಷ್ಟ್ರೀಯ ಜೀವನದಲ್ಲಿ ಅವುಗಳಿಗಿರುವ ಮಹತ್ತ್ವವನ್ನು ವಿವರಿಸಬೇಕಾಗಿಲ್ಲ. ಇದು ವರೆಗೆ ಈ ಬಗ್ಗೆ ಹೇಳಿದುದು ಸಾಕು. ಅದೇನಿದ್ದರೂ, ನಮ್ಮಂತಹ ಶಾಲೆಗಳಲ್ಲಿ ಹಾಗು ವಿಶ್ವವಿದ್ಯಾಲಯಗಳಲ್ಲಿ ಆಟ-ವ್ಯಾಯಾಮಗಳಿಗೆ ಈಗ ಮನ್ನಣೆ ದೊರೆತಿದೆ ಮಾತ್ರವಲ್ಲ, ಅವು ಗಳ ಅನಿವಾರ್ಯತೆಯನ್ನು ಒಪ್ಪಲಾಗಿದೆ; ಏಕೆಂದರೆ ಶರೀರದ ಶಿಕ್ಷಣವಿಲ್ಲದೆ ಮನಸ್ಸಿಗೆ ಕೊಡುವ ಅತ್ಯುನ್ನತ-ಅತಿಪರಿಪೂರ್ಣ ಶಿಕ್ಷಣವೂ ಅಪೂರ್ಣವೇ ಸರಿ. ನಾನು ಹೇಳಿದ ಗುಣಗಳು ಇಲ್ಲದಿರುವಲ್ಲಿ ಇಲ್ಲವೆ ಕಡಿಮೆ ಪ್ರಮಾಣದಲ್ಲಿರುವಲ್ಲಿ ವ್ಯಕ್ತಿಗಳ ಇಲ್ಲವೆ ರಾಷ್ಟ್ರದ ಸಂಕಲ್ಪಶಕ್ತಿ ಯಿಂದ ಅವನ್ನು ಬೆಳೆಯಿಸಬಹುದಾಗಿದೆ: ಆದರೆ ಆಟ-ವ್ಯಾಯಾಮಗಳಿಂದ ಈ ಗುಣಗಳು ಬೆಳೆಯಲು ನೇರವಾಗಿ ಸಹಾಯವಾಗುವುದಲ್ಲದೆ, ಆ ಸಹಾಯವು ಉಪೇಕ್ಷಣೀಯವಾದುದೂ ಅಲ್ಲ. ಇದರ ಹೊರತಾಗಿ ಬೇರೆ ಕಾರಣಗಳಿದ್ದರೂ ನಮ್ಮ ಆಶ್ರಮದಲ್ಲಿ ಈ ಚಟುವಟಿಕೆಗಳಿಗೆ ಲಕ್ಷ್ಯವನ್ನೀಯಲು ಇದೊಂದು ಕಾರಣವೂ ಸಾಕು. ನಮ್ಮ ರಾಷ್ಟ್ರೀಯ ಜೀವನದ ದೃಷ್ಟಿ ಯಿಂದ ಇವುಗಳಿಂದ ಬೆಳೆಯಬಹುದಾದ ಇಲ್ಲವೆ ಪ್ರೋತ್ಸಾಹಿಸಲ್ಪಡಬಹುದಾದ ಗುಣಗಳ ಮಹತ್ತ್ವ-ಅಗತ್ಯಗಳಿಗೆ ನಾನಿಲ್ಲಿ ಗಮನವನ್ನಿತ್ತಿರುವೆನು. ಯಾವ ರಾಷ್ಟ್ರದಲ್ಲಿ ಈ ಗುಣಗಳು ಪರಾಕಾಷ್ಠೆಯನ್ನು ಮುಟ್ಟಿರುವವೋ ಆ ರಾಷ್ಟ್ರವು ವಿಜಯಿ-ಯಶಸ್ವಿ-ಘನತಾಸಂಪನ್ನವಾಗಲು ಬೇಕಾಗುವ ಶ್ರೇಷ್ಠ ಸಾಮರ್ಥ್ಯವನ್ನು ಪಡೆಯುವ ಸಂಭವವು ಹೆಚ್ಚಿಗಿದೆ; ಅಲ್ಲದೆ ಮಾನವ ಜಾತಿಯ ಆಶಾದಾಯಕ ಭವಿತವ್ಯದ ದೃಷ್ಟಿಯಿಂದ ನಾವೆಲ್ಲರು ನಿರೀಕ್ಷಿಸುತ್ತಿರುವ ಜಾಗತಿಕ ಐಕ್ಯ-ಸಾಮರಸ್ಯಗಳನ್ನು ಸಾಧಿಸಲಿಕ್ಕೂ ಈ ಗುಣಗಳು ಸಹಾಯಕವಾಗಬಹುದಾಗಿವೆ.

**—ರಾಮಚಂದ್ರ ವಿನೀತ ಮತ್ತು ಪಂ. ವೆಂಕೋಬಾಚಾರ್ಯ**
(ಅನುವಾದಕರು)

---

## ಜಗತ್ತಿನ ಮಹಿಳೆಯರಿಗೆ

[Sri Aurobindo Circle, Bombay ಇವರ ೧೯೪೭ರ ೩ನೆಯ ಸಂಚಿಕೆಯಲ್ಲಿ ಪ್ರಕಟವಾದ ಶ್ರೀ ತಾಯಿಯವರ ಸಂದೇಶ]

ಜಗತ್ತಿನ ಇತಿಹಾಸವು ವಿಶಿಷ್ಟ ಪರಿವರ್ತನೆಯೊಂದನ್ನು ಪಡೆಯುತ್ತಿರುವ ಒಂದು ವಿಶಿಷ್ಟ ಸಂಕ್ರಾಂತಿ ಸಮಯದಲ್ಲಿ ನಾವು ಜೀವಿಸಿದ್ದೇವೆ. ದ್ವೇಷ-ರಕ್ತಪಾತ-ಕ್ಷುಬ್ಧತೆಗಳಿಂದ ಯುಕ್ತವಾದ ಇಂಥ ಕರಾಳ ಸಮಯವನ್ನು ಮಾನವಜಾತಿಯು ಹಿಂದೆಂದೂ ಎದುರಿಸಿರಲಿಲ್ಲ;

ಮತ್ತು ಇದರ ಜೊತೆಯಲ್ಲಿಯೇ, ಮಾನವಕುಲದ ಹೃದಯಾಂತರಾಳದಲ್ಲಿ ಇಂಥ ಬಲವಾದ, ಉತ್ಸಾಹಪೂರ್ಣವಾದ ಆಶೆಯು ಕೂಡ ಹಿಂದೆಂದೂ ಜಾಗೃತವಾಗಿರಲಿಲ್ಲ. ನಮ್ಮೆದೆಯ ಕೂಗನ್ನು ನಾವು ಲಕ್ಷ್ಯ ಕೊಟ್ಟು ಕೇಳಿದರೆ, ನ್ಯಾಯವೂ ಸುಂದರವೂ ಸಮರಸವೂ ಸೌಹಾರ್ದ-ಭ್ರಾತೃಭಾವಗಳಿಂದ ಯುಕ್ತವೂ ಆದ ಹೊಸರಾಜ್ಯದ ಆಗಮನವನ್ನು ನಾವೆಲ್ಲರೂ ಹೆಚ್ಚು ಕಡಿಮೆ ತಿಳಿವಳಿಕೆಯಿಂದ ನಿರೀಕ್ಷಿಸುತ್ತಿರುವೆವೆಂಬುದು ಒಮ್ಮೆಲೇ ತಿಳಿದುಬರುವದು ; ಮತ್ತು ನಮ್ಮ ಈ ನಿರೀಕ್ಷೆ ಜಗತ್ತಿನ ನೈಜಸ್ಥಿತಿಗೆ ತೀರ ವಿಸಂಗತವೆಂತಲೂ ಕಂಡುಬರುವದು. ಆದರೆ ರಾತ್ರಿಯ ಉಳಿದ ಯಾವ ಭಾಗವೂ ಉಷಃಸಮಯದ ಮುಂಚಿನ ರಾತ್ರಿಭಾಗದಷ್ಟು ಕರಾಳ ವಾಗಿರುವದಿಲ್ಲವೆಂಬುದನ್ನು ನಾವೆಲ್ಲರೂ ಬಲ್ಲೆವು. ಅಂದ ಮೇಲೆ ಈ ಕಾರ್ಗತ್ತಲೆಯು ಮುಂಬರುವ ಉಷಃಕಾಲದ ಕುರುಹಲ್ಲವೆ? ಹಾಗೂ ಹಿಂದಿನ ಯಾವ ರಾತ್ರಿಯೂ ಇಂದಿನ ರಾತ್ರಿಯಷ್ಟು ಪೂರ್ಣ ಕತ್ತಲೆಯಿಂದೊಡಗೂಡಿ ಘೀಕರವಾಗಿ ಇಲ್ಲದಿರುವಂತೆಯೇ ಇದುವರೆಗಿನ ಯಾವ ಉಷಃಕಾಲವೂ ಮುಂಬರುವ ಉಷಃಕಾಲದಷ್ಟು ತೇಜಸ್ವಿಯೂ ಪವಿತ್ರವೂ ಪ್ರಕಾಶಮಾನವೂ ಇದ್ದಿರಲಾರದು. . . . . . ಇರುಳು ಕಂಡ ಕೆಟ್ಟ ಕನಸುಗಳ ತರುವಾಯ, ಜಗತ್ತು ಜಾಗೃತವಾಗಿ ಹೊಸ ಪ್ರಜ್ಞೆಯನ್ನು ತಾಳುವದು.

ಇಂಥ ಚಮತ್ಕಾರಿಕ ರೀತಿಯಲ್ಲಿ ಪರ್ಯವಸಾನಗೊಳ್ಳುತ್ತಿರುವ ನಾಗರಿಕತೆಗೆ ಜಡ ಮತ್ತು ಪ್ರಾಣಗಳೊಡನೆ ವ್ಯವಹರಿಸುತ್ತಿರುವ ಮನಃಶಕ್ತಿಯೇ ಮುಖ್ಯ ತಳಹದಿಯಾಗಿತ್ತು. ಅದರಿಂದ ಜಗತ್ತಿಗೆ ಏನು ಸಂಭವಿಸಿತೆಂಬುದನ್ನು ಇಲ್ಲಿ ಚರ್ಚಿಸುವದು ಅಪ್ರಸ್ತುತ. ಆದರೆ ಹೊಸ ರಾಜ್ಯವೊಂದು ಆಗಮಿಸುತ್ತಿದೆ. ಅದು ಆಧ್ಯಾತ್ಮಿಕತೆಯ ರಾಜ್ಯ: ಮಾನವೀಯತೆಯ ನಂತರ ದೈವಿಕತೆಯ ಆಗಮನ.

ಅವರೂ ಮನುಷ್ಯರು ಇದರಂಥ ವೈಭವಸಂಪನ್ನವಾದ ಹಾಗೂ ಅತ್ಯಂತ ಶ್ರೇಷ್ಠವಾದ ಸಮಯದಲ್ಲಿ ಜೀವಿಸಿರಲು ಭಾಗ್ಯಶಾಲಿಗಳಾಗಿದ್ದರೆ, ಅವರ ಹೃದಯವು ತಮ್ಮ ಸ್ವಂತ ವೈಯಕ್ತಿಕ ಹಾಗು ಕೌಟುಂಬಿಕ ಜೀವನದ ಮೇರೆ ಮೀರಿ ವಿಸ್ತೃತವಾಗದಿರುವುದೂ ಅವರ ವಿಚಾರವು ಸಂಕುಚಿತವಾದ ವೈಯಕ್ತಿಕ ಪ್ರಯೋಜನ ಹಾಗು ಸ್ಥಾನಿಕ ಸಂಬಂಧಗಳ ಹೊರತು ಉಳಿದ ಯಾವುದರಿಂದಲೂ ಆವರಿಸಲ್ಪಡದಿರುವುದೂ ಯೋಗ್ಯವೇ? ತಾತ್ಪರ್ಯವೆಂದರೆ, ತಾವು ಕೇವಲ ತಮಗಷ್ಟೇ ಸಂಬಂಧಿಸಿದವರಲ್ಲ, ಕೇವಲ ತಮ್ಮ ಕುಟುಂಬಕ್ಕಷ್ಟೇ ಸಂಬಂಧಿಸಿದವರಲ್ಲ, ಕೇವಲ ತಮ್ಮ ದೇಶಕ್ಕಷ್ಟೇ ಸಂಬಂಧಿಸಿದವರಲ್ಲ--ಆದರೆ ಮಾನವಕುಲದ ಮುಖಾಂತರವಾಗಿ ಎಲ್ಲ ದೇಶಗಳಲ್ಲಿಯೂ ತನ್ನನ್ನೇ ಪ್ರಕಟಗೊಳಿಸುತ್ತಿರುವ ದೇವನಿಗೆ ತಾವು ಸಂಬಂಧಿಸಿದವರೆಂಬುದಾಗಿ ಅನುಭವ ಪಡೆದಿರುವವರು ಈಗ ತಾವು ಜಾಗೃತರಾಗಬೇಕೆಂಬುದನ್ನೂ ಮಾನವಕುಲದ ಕಲ್ಯಾಣಕ್ಕಾಗಿ, ನವ ಅರುಣೋದಯದ ಆಗಮನಕ್ಕಾಗಿ ಕಾರ್ಯಗೈಯಲು ಅಣಿಯಾಗಬೇಕೆಂಬುದನ್ನೂ ನಿಜವಾಗಿಯೂ ಬಲ್ಲರು.

ಈ ಅತಿಮಹತ್ತ್ವದ, ಅನಂತವಾದ, ಅನೇಕಾಂಗಯುತವಾದ ಕಾರ್ಯದಲ್ಲಿ ಮಹಿಳೆಯರು ನಿರ್ವಹಿಸತಕ್ಕ ಪಾತ್ರವಾವುದು? ಮಹಾ ಘಟನೆಗಳ ಹಾಗು ಮಹಾಕಾರ್ಯಗಳ ಪ್ರಶ್ನೆ ಬಂದೊಡನೆ ಬಡ, ಅಬಲ ಮತ್ತು ಕ್ಷುದ್ರ ಜೀವಿಗಳಾದುದರಿಂದ ಇದು ನಿಮ್ಮ ಕಾರ್ಯವಲ್ಲವೆಂದು ಯಾಜಮಾನ್ಯದ ಕೊಂಕು ನಗೆಯೊಡನೆ ಸ್ತ್ರೀಯರನ್ನು ಮೂಲೆಗೆ ತಳ್ಳಿಬಿಡುವದು

ಪುರುಷರ ಪದ್ಧತಿಯಾಗಿದೆ. . . . . . . . ಅನ್ಯರಿಗೆ ತಲೆಬಾಗುವ, ಬಾಲಕರಂತೆ ಮುಗ್ಧ ಹೃದಯವುಳ್ಳ ಮತ್ತು ಒಂದಿಷ್ಟು ಸೋಮಾರಿಯರೂ ಆದ ಸ್ತ್ರೀಯರು ಅನೇಕ ದೇಶಗಳಲ್ಲಿ ಈ ವಿಷಾದಪೂರ್ಣ ಪರಿಸ್ಥಿತಿಗೆ ಸ್ವಾಗತವಿತ್ತಿರುವರು. ಇಲ್ಲಿ ಅವರು ನಿಜವಾಗಿಯೂ ತಪ್ಪುಗಾರರಾಗಿದ್ದಾರೆ. ಭವಿಷ್ಯಕಾಲದ ಜೀವನದಲ್ಲಿ ಸ್ತ್ರೀ-ಪುರುಷರ ನಡುವೆ ಇಂಥ ಭೇದ-ವೈಷಮ್ಯಗಳಿಗೆ ಅವಕಾಶವೇ ಇರಲಾರದು.

ಪರಸ್ಪರ ಸಹಾಯ ಮತ್ತು ನಿಕಟ ಸಹಕಾರಗಳನ್ನು ಸಮಾನ ತಳಹದಿಯ ಮೇಲೆ ನಡೆಯಿಸಿಕೊಂಡು ಹೋಗುವದೇ ಸ್ತ್ರೀ-ಪುರುಷರಿಬ್ಬರ ನಿಜವಾದ ಬಾಂಧವ್ಯವಾಗಿದೆ. ಸ್ತ್ರೀಯರಾದ ನಾವು ಇಂದಿನಿಂದ ನಮ್ಮ ನಿಜವಾದ ಸ್ಥಾನವನ್ನು ಮರಳಿ ಪಡೆಯಬೇಕು; ನಮಗೆ ಅನುರೂಪವಾದ ಸ್ಥಾನವನ್ನು ಪುನಃ ಪಡೆಯಬೇಕು, ಆಧ್ಯಾತ್ಮಿಕ ಪುನರುಜ್ಜೀವನಕರ್ತರೆಂದೂ ಬೋಧಕರೆಂದೂ ನಮ್ಮ ನಿಜವಾದ ಮಹತ್ತ್ವವನ್ನು ಬಲಪಡಿಸಬೇಕು. ನಿಜವಾಗಿಯೂ ಅತ್ಯಲ್ಪ ಸಂಖ್ಯೆಯ ಕೆಲ ಪುರುಷರು ತಮ್ಮವೆಂದೇ ತಿಳಿದುಕೊಂಡ ಸೌಕರ್ಯಗಳ ಬಲದಿಂದ ಜಂಭ ಕೊಚ್ಚುತ್ತ, ಸ್ತ್ರೀಯರಲ್ಲಿ ಒಡೆದುಕಾಣುವ ನಿರ್ಬಲತೆಯನ್ನು ಕಂಡು ( ಈ ಬಾಹ್ಯ ನಿರ್ಬಲತೆಯು ಅನಿಶ್ಚಿತವಾದುದಾದರೂ ) ತಿರಸ್ಕಾರ ಮಾಡಬಹುದಾಗಿದೆ. " ನಾವು ಏನೇ ಮಾಡಲಿ, ಅತಿಮಾನವರಾದರೂ ( Super-men ) ಸ್ತ್ರೀಯರ ಹೊಟ್ಟೆಯಲ್ಲಿಯೇ ಹುಟ್ಟಿಬರಬೇಕಾಗುತ್ತದೆ " ಎಂಬುದಾಗಿ ಒಬ್ಬರು ಅಂದ ಮಾತು ಅತ್ಯಂತ ಸಮರ್ಪಕವಾಗಿದೆ.

ಅತಿಮಾನವರು ಸ್ತ್ರೀಯರಿಂದಲೇ ಜನ್ಮ ತಾಳುವರು. ಇದು ನಿರ್ವಿವಾದವಾದ ಮಹಾ ಸತ್ಯವಾಗಿದೆ. ಆದರೆ ಈ ಸತ್ಯದ ಬಗ್ಗೆ ಕೇವಲ ಅಭಿಮಾನ ತಾಳಿದರಾಗದು, ಇದರ ಅರ್ಥವೇನೆಂಬುದನ್ನು ನಾವು ಸ್ಪಷ್ಟವಾಗಿ ಅರಿತುಕೊಳ್ಳಬೇಕು. ಮತ್ತು ಅದರಿಂದ ನಿರ್ಮಿತವಾಗುವ ಹೊಣೆಯ ಅರಿವು ಉಳ್ಳವರಾಗಬೇಕು. ಅಲ್ಲದೆ ನಮ್ಮ ಮುಂದಿರುವ ಕಾರ್ಯವನ್ನು ಗಂಭೀರವಾಗಿ ಎದುರಿಸಲು ಕಲಿಯಬೇಕು. ಈ ಕಾರ್ಯವು ವಿಶ್ವಕ್ಕೆ ಜಗತ್ತಿನಲ್ಲೆಲ್ಲ ನಡೆಯುತ್ತಿರುವ ಮಹಾಕಾರ್ಯದಲ್ಲಿ ಅತಿ ಮಹತ್ತ್ವದ ಭಾಗವಾಗಿದೆಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಅದಕ್ಕಾಗಿ ವಿಶ್ವದ ಅರಾಜಕತೆ-ತಮಸ್ಸುಗಳನ್ನು ಪ್ರಕಾಶ ಹಾಗೂ ಬಂಧುಭಾವಗಳಲ್ಲಿ ಪರಿವರ್ತಿಸುವ ಮಾರ್ಗಗಳಾವುವೆಂಬುದನ್ನು ಸ್ಥೂಲವಾಗಿಯಾದರೂ ಅರಿತುಕೊಳ್ಳುವದು ಅತ್ಯಂತ ಅವಶ್ಯವಾಗಿದೆ.

ಇದಕ್ಕಾಗಿ ರಾಜಕೀಯ, ಸಾಮಾಜಿಕ, ನೈತಿಕ, ಧಾರ್ಮಿಕ ಮೊದಲಾದ ಅನೇಕ ಮಾರ್ಗಗಳು ಸೂಚಿಸಲ್ಪಟ್ಟಿರುವವು. ನಿಜವಾಗಿ ಇವುಗಳಲ್ಲಿ ಯಾವುದರಿಂದಲೂ, ನಾವು ಸಾಧಿಸಬೇಕಾಗಿರುವ ಕಾರ್ಯದ ವ್ಯಾಪ್ತಿಯನ್ನು ನೆನೆದರೆ ಯಾವದೇ ಬಗೆಯ ನಿರ್ದಿಷ್ಟವಾದ ಜಯ ಲಭಿಸಬಹುದೆಂದು ಕಂಡುಬರುವದಿಲ್ಲ. ಮಾನವನಲ್ಲಿ ನವಪ್ರಜ್ಞೆಯನ್ನು ಸೃಷ್ಟಿಸುವ ಹೊಸದೊಂದು ಆಧ್ಯಾತ್ಮಿಕ ಪ್ರವಾಹವು ಮಾತ್ರ, ಅಂದರೆ ಒಂದು ನವೀನ ಆಧ್ಯಾತ್ಮಿಕ ಪ್ರಕಾಶವು ಮಾತ್ರ, ಇಲ್ಲಿಯ ವರೆಗೆ ಅಜ್ಞಾತವಾಗಿರುವ ಅದೊಂದು ದೈವೀಶಕ್ತಿಯ ಆವಿರ್ಭಾವ ಮಾತ್ರ, ದೇವನ ಬಗ್ಗೆ ಅದೊಂದು ನವಕಲ್ಪನೆ ಮಾತ್ರ, ನಮಗಿಲ್ಲಿ ಅಪರಿಚಿತವಾಗಿರುವ ಒಂದು ನವ ರೂಪದರ್ಶನ ಮಾತ್ರ, ಸಾಧಕರ ಮಾರ್ಗವನ್ನು ಅಡ್ಡಗಟ್ಟುವ ಅನಂತ ಕಷ್ಟಗಳ ರಾಶಿಯನ್ನು ದಾಟಿ ಮುಂಬರಿಯಬಹುದಾಗಿದೆ.

ಇಲ್ಲಿ ನಾವು ನಮ್ಮ ಆರಂಭದ ವಿಷಯಕ್ಕೆ ಎಂದರೆ ನಮಗೆ ನೈಜಕರ್ತವ್ಯವಾದ ಮಾತೃತ್ವದ ವಿಷಯಕ್ಕೆ ಮರಳಿ ಬರುತ್ತೇವೆ. ಏಕೆಂದರೆ ಪೃಥ್ವಿಯ ಸದ್ಯದ ಸ್ಥಿತಿಯನ್ನೇ ಪರಿವರ್ತನಗೊಳಿಸಲು ಸಮರ್ಥವಿರುವ, ಆಧ್ಯಾತ್ಮಿಕ ಶಕ್ತಿಯ ಆವಿರ್ಭಾವಕ್ಕಾಗಿಯೇ ರಚಿತವಾಗಿರುವ ಈ ನವರೂಪವನ್ನು ಮಹಿಳೆಯರಲ್ಲದೆ ಮತ್ತಾರು ನಿರ್ಮಿಸಬೇಕು ?

ಹೀಗೆ ಜಗತ್ತಿನ ಜೀವನದ ಈ ಸಂದುಕಟ್ಟಿನ ಸಮಯದಲ್ಲಿ, ನಮ್ಮ ಅತ್ಯುಚ್ಚ ವ್ಯಕ್ತಿಗತ ಆದರ್ಶವು ಮೈವೆತ್ತಿಬರುವ ಒಂದು ಜೀವಿಗೆ ಜನ್ಮವಿತ್ತರೆ ಮಾತ್ರ ನಮ್ಮ ಕಾರ್ಯ ಮುಗಿದಂತಾಗಲಿಲ್ಲ. ಪ್ರಕೃತಿಯು ( Nature ) ಯಾವುದರ ಆಗಮನವನ್ನು ಯೋಜಿಸುತ್ತಿದೆಯೋ ಅಂಥ ಭವಿಷ್ಯತ್ಕಾಲದ ಪೀಳಿಗೆಯ ಪ್ರಕಾರವೆಂಥದಿರಬೇಕೆಂಬುದನ್ನು ಕಂಡುಹಿಡಿಯಲು ನಾವು ಯತ್ನಿಸಬೇಕು. ನಾವು ಕೇಳಿದ, ಇಲ್ಲವೆ ಅರಿತ ಅತಿ ದೊಡ್ಡ ವಿಭೂತಿಗಳ ಹಾಗೆಯೇ ಇದ್ದ ಅಥವಾ ಒಂದು ವೇಳೆ ಅವರಿಗಿಂತಲೂ ಹೆಚ್ಚು ದೊಡ್ಡವನಾದ ಪರಿಣತ ಪ್ರತಿಭಾವಂತ ಮಾನವನನ್ನು ರೂಪಿಸಲು ಯತ್ನಿಸಿದರೆ ಮಾತ್ರ ಸಾಲದು.

ನಮ್ಮ ವಿಚಾರಶಕ್ತಿ ಹಾಗು ಇಚ್ಛಾಶಕ್ತಿಗಳ ಸಂತತ ಅಭೀಪ್ಸೆಯ ಮೂಲಕ, ಮನೋಮುಖವಾಗಿ, ಅದೊಂದು ಪರಮ ಸಾಧ್ಯತೆಯೊಡನೆ ಸಂಪರ್ಕ ಬೆಳೆಸಲು ಶ್ರಮಿಸಬೇಕು ; ಆ ಸಾಧ್ಯತೆಯೆಂದರೆ ಎಲ್ಲ ಮಾನವೀಯ ಪರಿಮಿತಿ ಮತ್ತು ಲಕ್ಷಣಗಳನ್ನು ಮೀರಿದ **ಅತಿಮಾನವ**ನಿಗೆ ( Super–man ) ಜನ್ಮ ಕೊಡುವದು.

ಮತ್ತೊಮ್ಮೆ ಪ್ರಕೃತಿಮಾತೆಯು ನವ್ಯೋನವವಾಗಿರುವ, ಅನಿರೀಕ್ಷಿತವಾಗಿರುವ ಯಾವುದೋ ಒಂದು ಶಕ್ತಿಯನ್ನು ಸೃಷ್ಟಿಸಬೇಕೆಂಬುದಾಗಿ ಅತಿದೊಡ್ಡ ಆವೇಗವೊಂದನ್ನು ಅನುಭವಿಸುತ್ತಿದ್ದಾಳೆ. ಈ ಆವೇಗಕ್ಕೆ ನಾವು ಓಗೊಡಬೇಕು, ಅದರಾಜ್ಞೆಯನ್ನು ಮನ್ನಿಸಬೇಕು.

ಪ್ರಕೃತಿಯ ಈ ಆವೇಗವು ನಮ್ಮನ್ನು ಎಲ್ಲಿಗೆ ಕರೆದೊಯ್ಯುವದೆಂಬುದನ್ನು ಶೋಧಿಸಲು ಮೊದಲು ಯತ್ನಿಸೋಣ. ಈ ಶೋಧಕ್ಕೆ ಉತ್ತಮ ಮಾರ್ಗವೆಂದರೆ ಭೂತಕಾಲವು ನಮಗೆ ದಯಪಾಲಿಸಿರುವ ಪಾಠಗಳ ಕಡೆಗೆ ಸಿಂಹಾವಲೋಕನದ ದೃಷ್ಟಿಯಿಂದ ನೋಡುವದೇ ಸರಿ.

ಪ್ರಕೃತಿಯು ಪ್ರತಿಯೊಂದು ಪ್ರಗತಿಪರ ಹೆಜ್ಜೆಯನ್ನಿಟ್ಟಾಗ, ಪೃಥ್ವಿಯಲ್ಲಿ ಹೊಸದೊಂದು ಕ್ರಿಯಾಶಕ್ತಿಯ ಇಲ್ಲವೆ ತತ್ತ್ವದ ಆವಿರ್ಭಾವವಾದಾಗ ನವ ನವ ಜೀವಜಾತಿ ( species ) ಮೈದೋರಿದ್ದನ್ನು ನಾವು ಅರಿತಿರುವೆವು. ಇದರಂತೆಯೇ ಮಾನವಕುಲಗಳ–ಜನಾಂಗಗಳ–ವ್ಯಕ್ತಿಗಳ ಜೀವನದ ಪ್ರಗತಿಪರ ರೂಪಗಳು, ಮಾನವಕುಲಕ್ಕೆ ಮಾರ್ಗದರ್ಶಕರಾಗಿ ನಿಂತಿರುವವರ ಪ್ರಯತ್ನಗಳಿಂದಾಗಿ ಅವ್ಯಾಹತವಾಗಿ ಪ್ರೇರೇಪಿಸಲ್ಪಟ್ಟು, ಫಲಪ್ರದಗೊಳಿಸಲ್ಪಟ್ಟು, ನವೀನಗೊಳಿಸಲ್ಪಟ್ಟು ಮಾನವ ಪ್ರಗತಿಚಕ್ರಗಳ ಇಂದಿನ ವರೆಗಿನ ಅವಧಿಯಲ್ಲಿ ಒಂದರ ತರುವಾಯ ಇನ್ನೊಂದಾಗಿ ಮೈದೋರಿದ್ದೂ ನಮ್ಮ ಅವಲೋಕನಕ್ಕೆ ಬಂದ ಸಂಗತಿಯಾಗಿದೆ ; ಮತ್ತು ಈ ಎಲ್ಲ ರೂಪಗಳು ಒಂದೇ ಗುರಿಯೆಡೆಗೆ,—ಪ್ರಕೃತಿಯ ರಹಸ್ಯಮಯವಾದ, ವೈಭವಪೂರ್ಣವಾದ ಗುರಿಯೆಡೆಗೆ ಸಾಗಿರುವವು.

ಪ್ರಕೃತಿಯ ಈ ಕರೆಗೆ ನಾವು ಓಗೊಡಲೇಬೇಕು. ಈ ಮಹತ್ತರವಾದ ವೈಭವಯುತ ವಾದ ಕಾರ್ಯಕ್ಕೆ ನಾವು ನಮ್ಮನ್ನೇ ಧಾರೆಯೆರೆಯಬೇಕು. ಇಲ್ಲಿಯ ವರೆಗೂ ಶೋಧವಾಗದ, ಈ ದುರ್ಗಮ ಮಾರ್ಗದ ಮೇಲಿನ ನಮ್ಮ ಮುನ್ನಡೆಯ ಮೆಟ್ಟಿಲುಗಳನ್ನು ನಮಗೆ ಸಾಧ್ಯ ವಿದ್ದಷ್ಟು ಸ್ಪಷ್ಟಗೊಳಿಸಲು ಯತ್ನಿಸೋಣ.

ಭವಿಷ್ಯತ್ತಿನ ಮಾನವರ ಇಲ್ಲವೆ ಅತಿಮಾನವರ ಕಲ್ಪನೆಯನ್ನು ತಂದುಕೊಳ್ಳುವ ಪ್ರಯತ್ನ ಮಾಡುವಾಗ ಮೊತ್ತಮೊದಲಿಗೆ ನಾವು ಬಹು ದಕ್ಷತೆ ವಹಿಸತಕ್ಕದ್ದು. ಮಾನವನ ಪ್ರತ್ಯಕ್ಷ ಮಾದರಿಯೊಂದನ್ನಾಗಲಿ, ಈಗಿನ ಅವನ ಸ್ವರೂಪವನ್ನೇ ಪರಿಪೂರ್ಣಗೊಳಿಸುವ ಇಲ್ಲವೆ ಮಹತ್ತರಗೊಳಿಸುವ ಧ್ಯೇಯವನ್ನಾಗಲಿ ನಾವು ಸ್ವೀಕರಿಸಿದರೆ ಸಾಲದು. ಈ ತಪ್ಪು ಸಾಧ್ಯವಿದ್ದಷ್ಟು ನಮ್ಮಿಂದಾಗದಂತೆ ನೋಡಿಕೊಳ್ಳಬೇಕಾದರೆ ಜೀವನವಿಕಾಸಶಾಸ್ತ್ರದ ತತ್ತ್ವ ಪಾಠವನ್ನು ನಾವು ಅಭ್ಯಸಿಸತಕ್ಕದ್ದು.

ಹೊಸ ಹೊಸ ಜೀವಜಾತಿಯು ವ್ಯಾದೋರಿದಾಗೆಲ್ಲಾ ಪೃಥ್ವಿಯ ಮೇಲೆ ಹೊಸದೊಂದು ತತ್ತ್ವವು, ಹೊಸದೊಂದು ಪ್ರಜ್ಞೆಯ ಭೂಮಿಕೆಯು, ಹೊಸದೊಂದು ಬಲವು ಇಲ್ಲವೆ ಶಕ್ತಿಯು ಪ್ರಾದುರ್ಭವಿಸುವದೆಂಬುದನ್ನು ನಾವು ಈ ಮೊದಲೆ ಹೇಳಿರುವೆವು. ಆದರೆ ಆಯಾ ಜೀವ ಜಾತಿಯು ಅದುವರೆಗೂ ಆವಿರ್ಭೂತವಾಗದಿರುವ ಒಂದು ಶಕ್ತಿಯನ್ನು ಇಲ್ಲವೆ ಪ್ರಜ್ಞೆಯ ಒಂದು ಭೂಮಿಕೆಯನ್ನು ಪಡೆಯುವಾಗಲೇ ಅದರ ಜೊತೆಯಲ್ಲಿಯೇ, ತನ್ನ ಹಿಂದಿನ ಜಾತಿಯ ವಿಶಿಷ್ಟಲಕ್ಷಣಗಳಾಗಿದ್ದ ಒಂದು ಅಥವಾ ಹಲವು ಪರಿಪೂರ್ಣತೆಗಳನ್ನು ತ್ಯಜಿಸಬಹುದಾಗಿದೆ. ಉದಾಹರಣಾರ್ಥವಾಗಿ ಪ್ರಕೃತಿಯ ವಿಕಾಸದ ಕೊನೆಯ ಹೆಜ್ಜೆಯನ್ನೇ ಪರಿಶೀಲಿಸೋಣ. ಮನುಷ್ಯ ಮತ್ತು ಅವನ ಪೂರ್ವಜ ಮಂಗ -ಇವರಲ್ಲಿ ಕಂಡುಬರುವ ಮಹತ್ತಮ ಭೇದ ಗಳಾವವು? ಮಂಗನಲ್ಲಿ ಚೈತನ್ಯ ಹಾಗು ದೈಹಿಕ ಸಾಮರ್ಥ್ಯಗಳು ತಮ್ಮ ಅತ್ಯುಚ್ಚ ಪರಿ ಪೂರ್ಣತೆಯನ್ನು ಪಡೆದಿರುವವು. ಈ ಪರಿಪೂರ್ಣತೆಯನ್ನು ಹೊಸ ಜೀವಜಾತಿಯು ತ್ಯಜಿಸ ಬೇಕಾಗುವದು. ಮನುಷ್ಯನು ಗಿಡಗಳನ್ನೇರುವ, ಲಾಗ ಹಾಕುವ ಮತ್ತು ಶಿಖರದಿಂದ ಶಿಖ ರಕ್ಕೆ ಜಿಗಿಯುವ ಅದ್ಭುತಶಕ್ತಿಯನ್ನು ಮಂಗನಂತೆ ಪಡೆಯಲಿಲ್ಲ. ಅದರ ಬದಲು, ಮನು ಷ್ಯನು ಬುದ್ಧಿಯನ್ನೂ ತಾರ್ಕಿಕ, ಸಂಯೋಜಕ ಮತ್ತು ಕಲ್ಪಕ ಶಕ್ತಿಯನ್ನೂ ಪಡೆದನು. ಮನುಷ್ಯಪ್ರಾಣಿಯು ಭೂತಲದಲ್ಲಿ ತಲೆಯೆತ್ತಿದಂದಿನಿಂದ ನಿಜವಾಗಿಯೂ ಮನಸ್ಸು ಮತ್ತು ಬುದ್ಧಿಗಳ ಜೀವನವೇ ಪೃಥ್ವಿಯಲ್ಲಿ ಪ್ರಕಟವಾದಂತಾಗಿದೆ.

ಮನುಷ್ಯನು ಪ್ರಾಮುಖ್ಯವಾಗಿ ಮನೋಜೀವಿಯಾಗಿದ್ದಾನೆ; ಅವನ ಸಾಧ್ಯತೆಗಳು ಅಲ್ಲಿಗೇ ಕೊನೆಗೊಳ್ಳದಿದ್ದರೆ ಮತ್ತು ಅವನು ತನ್ನಲ್ಲಿ ಅನ್ಯ ಲೋಕಗಳ, ಅನ್ಯ ಶಕ್ತಿಗಳ, ಮನೋಜೀವನದಾಚೆಗಿರುವ ಪ್ರಜ್ಞೆಯ ಅನ್ಯ ಭೂಮಿಕೆಗಳ ಅನುಭವವನ್ನು ಪಡೆದದ್ದಾದರೆ -ಮಾನಸಿಕ ಸಾಧ್ಯತೆಗಳು ಮಂಗನಲ್ಲಿ ಸುಪ್ತವಾಗಿರುವಂತೆಯೇ ಈ ಸಾಧ್ಯತೆಗಳೂ ಅನುಭವ ಗಳೂ ಮಾನವನಿಗಾಗಿ ಇರುವ ಭವಿಷ್ಯತ್ಕಾಲದ ಆಶ್ವಾಸನಗಳೇ ಸರಿ.

ಅಲ್ಪಸಂಖ್ಯೆಯಲ್ಲಿರುವ ಕೆಲವೇ ಜನರು ಆಚೆಯ ಜಗತ್ತಿನ ಜೀವಂತ ಅನುಭವವನ್ನು ಪಡೆದಿರುವರೆಂಬುದು ನಿಜ. ಇಂತಹ ಅನುಭವಕ್ಕೇನೇ ಆಧ್ಯಾತ್ಮಿಕ ಜೀವನದ ಅನುಭವ ವೆಂದು ಕರೆಯುವದುಂಟು. ಕೆಲವರಂತೂ ಪೃಥ್ವಿಯ ಮೇಲೆ ಆಚೆಯ ಲೋಕದ ಜೀವನದ

ಪ್ರತ್ಯಕ್ಷ ಅವತಾರಗಳೇ ಆಗಿರುವರು. ಆದರೆ ಅವರು ಕೆಲ ಅಪವಾದಗಳು ಮಾತ್ರ. ಅವರು ಮಾನವಕುಲಕ್ಕೆ ಮಾರ್ಗದರ್ಶನಗೈಯುವ ಹಾಗೂ ಅದರ ಭವಿಷ್ಯತ್ಕಾಲದ ಸಿದ್ಧಿಯತ್ತ ಮುನ್ನಡೆಯಿಸುವ ಮುಂದಾಳುಗಳಾಗಿರುವರು. ಅವರು ಸರ್ವಸಾಧಾರಣ ಮಾನವರಲ್ಲ. ಆದರೆ ಯಾವದು ಇದುವರೆಗೆ ಅಲ್ಲಲ್ಲಿ ಆಗೀಗ ಪ್ರಕಟವಾಗುತ್ತ ಕೇವಲ ಕೆಲವು ಜೀವಿಗಳ ಭಾಗ್ಯವಾಗಿದ್ದಿತೋ ಅದು ಇನ್ನು ಮುಂದೆ ಆಗಾಮಿ ಜೀವಜಾತಿಯ ಕೇಂದ್ರಲಕ್ಷಣವಾಗಿ ಪರಿಣಮಿಸುವದು.

ಸದ್ಯಕ್ಕೆ ಮಾನವನು ಬುದ್ಧಿತರ್ಕಗಳ ಮೂಲಕ ತನ್ನ ಜೀವನವನ್ನು ಅಂಕೆಯಲ್ಲಿಟ್ಟು ಕೊಂಡಿದ್ದಾನೆ. ಅವನಿಗೆ ಮನಸ್ಸಿನ ಚಟುವಟಿಕೆಗಳೆಲ್ಲವೂ ಅವನ ನಿತ್ಯ ಉಪಯೋಗದ ಚಟುವಟಿಕೆಗಳಾಗಿವೆ. ಅವನ ಜ್ಞಾನದ ಸಾಧನಗಳೆಂದರೆ ನಿರೀಕ್ಷಣೆ ಹಾಗು ತನ್ಮೂಲಕ ಸಾಮಾನ್ಯ ಸಿದ್ಧಾಂತರಚನೆ. ವಿವೇಚನಾಶಕ್ತಿಯ ನೆರವಿನಿಂದ ಮತ್ತು ಅದರ ಮುಖಾಂತರವಾಗಿ ಅವನು ಜೀವನದಲ್ಲಿ ತನ್ನ ನಿರ್ಣಯುಗಳನ್ನು ಕೈಕೊಳ್ಳುವನು, ತನ್ನ ದಾರಿಯನ್ನು ಆರಿಸಿಕೊಳ್ಳುವನು ; ಅಥವಾ ಹಾಗೆ ಮಾಡಿರುವೆನೆಂದು ತಿಳಿದುಕೊಳ್ಳುವನು.

ಅಂತಜ್ಞಾನದ ( Intuition ) ಬಲವೇ ಹೊಸ ಜನಾಂಗದ ಪ್ರಭುಶಕ್ತಿಯಾಗುವದು. ಅಂತರಂಗದ ದೈವೀಜೀವನದ ಪ್ರತ್ಯಕ್ಷ ಅನುಭವವೇ ಅಂತರ್‌ಜ್ಞಾನ. ಕಾಡಿನಲ್ಲಿ ಕೆಲ ಹಿರಿಯ ಗೋರಿಲ್ಲಾಗಳು ಬುದ್ಧಿಯ ಸುಳುವನ್ನು ಪಡೆದಿರುವಂತೆಯೇ ಕೆಲ ಮಾನವಜೀವಿಗಳು ಪ್ರತ್ಯಕ್ಷವಾಗಿ ಅಂತರ್‌ಜ್ಞಾನವನ್ನು ಅರಿಯುವರು, ಅನುಭವಿಸುವರು.

ಮಾನವಕುಲದಲ್ಲಿ, ತಮ್ಮ ಅಂತರಾತ್ಮವನ್ನು ಕುಸುರಿಸಿರುವ, ತಮ್ಮ ಸತ್ತ್ವದ ಸ್ವಭಾವ-ಸ್ವಧರ್ಮಗಳ ಶೋಧನೆಯಲ್ಲಿ ತಮ್ಮ ಶಕ್ತಿಯೆಲ್ಲವನ್ನು ಕೇಂದ್ರೀಕರಿಸಿರುವ ತೀರ ಸ್ವಲ್ಪ ಜನರು ಮಾತ್ರ ಹೆಚ್ಚು ಕಡಿಮೆ ಪ್ರಮಾಣದಲ್ಲಿ ಅಂತರ್‌ಜ್ಞಾನದ ಶಕ್ತಿಯನ್ನು ಪಡೆದಿರುವರು.

ಮನಸ್ಸು ಪೂರ್ಣವಾಗಿ ನಿಃಸ್ಪಂದವಾದಾಗ, ಚೆನ್ನಾಗಿ ಹಸನಗೊಳಿಸಿದ ಕನ್ನಡಿಯಂತೆ ನಿರ್ಮಲವಾದಾಗ, ತಂಗಾಳಿ ಕೂಡ ಬೀಸದಿದ್ದಾಗ ನಿಸ್ತರಂಗ ಜಲವುಳ್ಳ ತಟಾಕದಂತೆ ಸ್ತಬ್ಧವಾದಾಗ—ಆಗ ಮೇಲಿನಿಂದ ಅತಿಮಾನಸ ಅವಸ್ಥೆಯ (Super-mind) ಪ್ರಭೆಯು, ಅಂತರಾಳದಿಂದ ಸತ್ಯದ ಪ್ರಭೆಯು ಪ್ರಶಾಂತಮನದಲ್ಲಿ ಬೆಳಗಿ ಅಂತರ್‌ಜ್ಞಾನಕ್ಕೆ ಜನ್ಮವೀಯುವದು. ಮೌನದ ಮೂಲಕವಾಗಿ ಯಾರು ಈ ಒಳದನಿಯನ್ನು ಕೇಳುವ ರೂಢಿಯನ್ನಿಟ್ಟುಕೊಂಡಿರುವರೋ ಅವರು ಅದನ್ನು ತಮ್ಮ ಕೃತಿಗೆ ಪ್ರಚೋದಕ ಹೇತುವೆಂದು ಹೆಚ್ಚಿಚ್ಚಾಗಿ ಪರಿಗಣಿಸುವರು. ಮತ್ತು ಸಾಧಾರಣ ಮನುಷ್ಯರು ಬುದ್ಧಿಯ ತೊಡಕಿನ ದಾರಿಗಳಲ್ಲಿ ಸುತ್ತಾಡುತ್ತಿರುವಲ್ಲಿ, ಈ ಒಳದನಿಯನ್ನು ಕೇಳುವವರು, ಧ್ರುವನಕ್ಷತ್ರದಂತಿರುವ ಶ್ರೇಷ್ಠ ಅಂತಃಪ್ರೇರಣೆಯ ಅಂತರ್‌ದೃಷ್ಟಿಯೇ ಜೀವನದ ಸುಳಿಗಳೊಳಗಿಂದ ಮಾರ್ಗದರ್ಶನಗೈಯುವದೆಂದು ತಿಳಿದಿರುವುದರಿಂದ ತಮ್ಮ ದಾರಿಯಲ್ಲಿ ನೇರವಾಗಿ ನಡೆಯುವರು.

ಈಗ ಅಪವಾದಾತ್ಮಕವಾಗಿ ಅಲ್ಲಿ ಇಲ್ಲಿ, ಆಗ ಈಗ, ತೀರ ವಿರಳವಾಗಿ ಕಂಡುಬರುವ ಈ ಶಕ್ತಿಯು ಖಂಡಿತವಾಗಿಯೂ ಹೊಸ ಜನಾಂಗಕ್ಕೆ, ನಾಳಿನ ಮಾನವಕುಲಕ್ಕೆ ಅತ್ಯಂತ ಸಾಮಾನ್ಯ-ಸ್ವಾಭಾವಿಕ ಅನುಭವವಾಗಿ ಪರಿಣಮಿಸುವದು. ಆದರೆ ಬಹುತರವಾಗಿ ಅದರ

ಸತತವಾದ ಉಪಯೋಗವು ವಿವೇಚಕ ಶಕ್ತಿಗಳಿಗೆ ತೀರ ಹಾನಿಯನ್ನು ಒದಗಿಸುವದು. ಮಂಗನ ಅತಿಶಯವಾದ ದೈಹಿಕ ಸಾಮರ್ಥ್ಯವನ್ನು ಮುಂದೆ ಮನುಷ್ಯನು ಪಡೆಯದಿರುವಂತೆ, ಮಾನವನು ತನ್ನನ್ನೂ ಅನ್ಯರನ್ನೂ ವಂಚಿಸಲು ಉಪಯೋಗಿಸುತ್ತಿರುವ ಈ ಅತಿಶಯವಾದ ಮಾನಸಿಕ ಸಾಮರ್ಥ್ಯವನ್ನು ಅತಿಮಾನವನು ಮುಂದೆ ಕಳೆದುಕೊಳ್ಳುವನು.

ಈ ಬಗೆಯಾಗಿ, ಮಾನವನು ಯಾವುದರ ಬಗ್ಗೆ ಯಥಾಯೋಗ್ಯವಾಗಿ, ಆದರೂ ವ್ಯರ್ಥವಾಗಿ ಅಭಿಮಾನ ತಾಳಿರುವನೋ, ಆ ಬುದ್ಧಿಯೇ ಆಗಲಿ ಅಥವಾ ಅವನು ಇಲ್ಲಿಯವರೆಗೆ ಏನೇನನ್ನು ಬೆಳಿಸಿಕೊಂಡಿರುವನೋ ಅಂಥ ಯಾವುದೇ ವಿಷಯವಾಗಲಿ, ಇದಾವುದೂ ಇನ್ನು ಮುಂದೆ ತನಗೆ ಸಾಲದೆಂದೂ ಈ ಅಂತರಂಗದ ಮಹಾಶಕ್ತಿಯನ್ನು ಉದ್ಘಾಟಿಸುತ್ತ ಪ್ರಕಾಶ ಪಡಿಸುತ್ತ ಅದನ್ನು ಕಾರ್ಯೋನ್ಮುಖಗೊಳಿಸುವದೇ ಇನ್ನುಮುಂದಿನ ತನ್ನ ಮಹಾಕಾರ್ಯ ವಾಗಿದೆಯೆಂದೂ ಧೈರ್ಯದಿಂದ ಯಾವಾಗ ಘೋಷಿಸುವನೋ ಆಗ ಅತಿಮಾನವತೆಯೆಡೆಗೆ ಆತನು ಅತಿ ಸುಲಭವಾಗಿ ಸಾಗುವನು. ಆಗ ಅವನ ವೇದಾಂತ, ಕಲೆ, ಭೌತವಿಜ್ಞಾನ, ನೀತಿಶಾಸ್ತ್ರ, ಸಾಮಾಜಿಕ ಅಸ್ತಿತ್ವ, ಪ್ರಾಣಶಕ್ತಿಪ್ರೇರಿತ ಕಾರ್ಯಗಳು—ಇವೆಲ್ಲಾ ಇನ್ನುಮುಂದೆ ಮನಃಪ್ರಾಣಗಳ ಮಟ್ಟಿಗೆ ಮರ್ಯಾದಿತವಾದ ಚಟುವಟಿಕೆಗಳಾಗದೆ ಮನಃಪ್ರಾಣಗಳ ಹಿಂದಿರುವ ಮಹತ್ತರ ಸತ್ಯದ ಶೋಧಗೈಯುವದಕ್ಕೂ ನಮ್ಮ ಮಾನವೀಯ ಜೀವನದಲ್ಲಿ ಆ ಹೆಚ್ಚಿನ ಶಕ್ತಿಯ ಆವಾಹನಗೈಯುವದಕ್ಕೂ ಸಾಧನಗಳಾಗುವವು. ಮತ್ತೀ ಶೋಧವೆಂದರೆ, ನಮ್ಮೊಳಗಿನ ಅತಿಶ್ರೇಷ್ಠ ತತ್ತ್ವದ—ನಮ್ಮ ಅಂತರಾತ್ಮನ—ನಮ್ಮ ದೈವೀ ಸ್ವಭಾವದ ಶೋಧವೇ ಆಗಿದೆ.

ಆದರೆ, ಯಾವುದರ ಸಿದ್ಧಿ ನಮಗಿನ್ನೂ ಆಗಿಲ್ಲವೋ, ಆದರೆ ಆಗಲಿದೆಯೋ, ಆ ನವ ಜನ್ಮವು ನೀಟ್ಸೆ ಮಹಾಶಯನಿಂದ ಪ್ರಣೀತವಾದ ಪ್ರಬಲ ಪ್ರಾಣನಿಷ್ಠ ಇಚ್ಛಾಶಕ್ತಿಯ ಪ್ರಕಟನವಾಗಿರದೆ, ಅದೊಂದು ಆಧ್ಯಾತ್ಮಿಕ ಜನ್ಮವೂ ಆಧ್ಯಾತ್ಮಿಕ ಪ್ರಕೃತಿಯ ಆವಿಷ್ಕರಣವೂ ಆಗಿದೆ. ಏಕೆಂದರೆ ಅತಿಮಾನವನ ಬಗ್ಗೆ ನಾವು ಮಾತನಾಡುವಾಗ ನೀಟ್ಸೆ ಮಹಾಶಯನ ಬಲಿಷ್ಠವಾದ ಆದರೆ ಕೇವಲ ಬಾಹ್ಯ ಸ್ವರೂಪದ ಮತ್ತು ಅಪರಿಪೂರ್ಣವಾದ ‘ ಅತಿಮಾನವ ’ ತ್ವದ ಕಲ್ಪನೆಯಿಂದ ಉಂಟಾಗುವ ಗೊಂದಲವನ್ನೆಲ್ಲ ತಪ್ಪಿಸಲು ದಕ್ಷರಾಗಿರಬೇಕು.

ನಿಜ, ನೀಟ್ಸೆ ಮಹಾಶಯನೇ ‘ ಅತಿಮಾನವ ’ ಶಬ್ದವನ್ನು ಪ್ರಥಮವಾಗಿ ಸಂಶೋಧಿಸಿದನು ; ಆದ್ದರಿಂದ ಮುಂಬರುವ ಜನಾಂಗದ ವಿಷಯವಾಗಿ ಮಾತನಾಡಲು ಯಾರಾದರೂ ಈ ಶಬ್ದವನ್ನು ಉಪಯೋಗಿಸಿದಾಗಲೆಲ್ಲ ಅವನ ವಿಚಾರಗಳೇ ಮನದ ಮುಂದೆ ಬರುವವು. ನಮ್ಮ ಸದ್ಯದ ಅತೃಪ್ತಿಕರವಾದ ಮಾನವತ್ವದೊಳಗಿಂದಲೇ ಅತಿಮಾನವನನ್ನು ನಿರ್ಮಿಸುವದು ನಮ್ಮ ನೈಜಕಾರ್ಯವಾಗಿದೆಯೆನ್ನುವ ಅವನ ತತ್ತ್ವವು ತನ್ನ ಮಟ್ಟಿಗೇನೋ ಸಂಪೂರ್ಣ ಸಮರ್ಪಕ ವಿಚಾರವಾಗಿದೆ. ಯಾವುದರಿಂದ ತಾನು ಯಶಸ್ವಿಯಾಗಿಯೂ ಸ್ವಯಂಭು ವಾಗಿಯೂ ಜೀವಿಸಬಲ್ಲನೋ ಅಂಥ ನಿಜವಾದ ‘ ಆತ್ಮ ’ವನ್ನು, ನಿಜವಾದ ‘ ಸ್ವಭಾವ ’ವನ್ನು ಮಾನವನು ಇನ್ನೂ ಕಂಡುಕೊಂಡಿಲ್ಲವೆಂಬ ತತ್ತ್ವವನ್ನು “ ನಾವೆ ತಾವಾಗುವದು ( to become ourselves ) ” ಎಂಬ ಸಿದ್ಧಾಂತದಲ್ಲಿ ಅತ್ಯುತ್ತಮವಾಗಿ ನಿರೂಪಿಸಿದ್ದಾನೆ. ಆದರೆ ನೀಟ್ಸೆ ಒಂದು ತಪ್ಪು ಮಾಡಿದ್ದಾನೆ ; ನಾವು ಅದನ್ನು ತೆಗೆದೊಗೆಯಬೇಕಾಗಿದೆ ; ಅವನ

## ಸಮರ್ಪಣ

'ಅತಿಮಾನವ'ನಲ್ಲಿ ಕೇವಲ ( ಬಾಹ್ಯ ) ಶಕ್ತಿಯೇ ( force ) ಅತ್ಯಂತ ಪ್ರಭಾವಿಯಾಗಿದ್ದು ಅದರ ಭಾರದ ಕೆಳಗೆ ಮಾನವನ ಉಳಿದ ಗುಣಗಳು ಪುಡಿಪುಡಿಯಾಗುವವು; ಇಂಥ ಬೃಹತ್ ಸ್ವರೂಪದ ವಿರಾಟ್ ಮಾನವನೇ ಅವನ 'ಅತಿಮಾನವ'. ಇದು ನಮ್ಮ ಆದರ್ಶವಾಗಲಾರದು. ಏಕೆಂದರೆ, ಕೇವಲ ಬಾಹ್ಯಶಕ್ತಿಯ ಆರಾಧನೆಯು ನಮ್ಮನ್ನೆಲ್ಲಿಗೊಯ್ಯುವದೆಂಬುದನ್ನು ಸದ್ಯದ ಸಮಯದಲ್ಲಿ ನಾವು ಚೆನ್ನಾಗಿ ಕಂಡುಕೊಂಡಿರುವೆವು; ಬಲವಂತರ ಘೋರಾಪರಾಧಗಳನ್ನೂ ಭೂಖಂಡಗಳ ಸರ್ವನಾಶವನ್ನೂ ನಾವು ನೋಡುತ್ತಿರುವೆವು.

—ರಾಮಚಂದ್ರ ಕಲಬುರ್ಗಿ
( ಅನುವಾದಕ )

ಪರಮಾತ್ಮನ ಮೇಲಿನ ನಮ್ಮ ನಂಬುಗೆಯು ಹೊರಗಿನ ಪರಿಸ್ಥಿತಿಯ ಮೇಲೆ ಅವಲಂಬಿಸತಕ್ಕದ್ದಲ್ಲ.

× × × ×

ಪರಮಾತ್ಮನನ್ನು ತಿಳಿದುಕೊಳ್ಳಬೇಕಾದರೆ ನಮ್ಮಲ್ಲಿ ಯಾವ ಸ್ವಾಭಿರುಚಿಗಳೂ ಇರತಕ್ಕದ್ದಲ್ಲ.

× × × ×

ನಿಜವಾಗಿ ಪರಮಾತ್ಮನನ್ನು ಪ್ರೀತಿಸಬೇಕಾದರೆ ನಾವು ಆಸಕ್ತಿಗಳನ್ನು ಮೀರಿ ಇರತಕ್ಕದ್ದು.

× × × ×

ದೈವೀ ಪ್ರೇಮದ ಅರಿವು ನಮಗಾಗಬೇಕಾದರೆ ಉಳಿದೆಲ್ಲ ಪ್ರೇಮವನ್ನು ಬಿಟ್ಟುಬಿಡತಕ್ಕದ್ದು.

— ತಾಯಿಯವರು



ಶ್ರೀ ಮಾತೆಯವರು

# ಮಹಾಮಾತೆ

ಕಡಲ ನೀರಿನಾಳದಲ್ಲಿ
ಸಳಸಳ ಸದ್ದಿಲ್ಲದಂತೆ
ಸುಳಿವ ಮೀನ ನಿನ್ನ ಕಣ್ಣು
ಓ ಮೀನಾಕ್ಷಿ !
ಕತ್ತಲ ಹಿರಿ ಸಾಗರದಲಿ
ಸೋತ ಜ್ಯೋತಿ-ಕಣಗಳನ್ನು
ಅರಸುತಲಿವ ಮಹಾ ಜ್ಯೋತಿ
ಈ ಜೀವವೆ ಸಾಕ್ಷಿ !

ಭವ-ಸಾಗರದಲ್ಲಿ ಬಳಲಿ
ದಡ ಸೇರುವ ಆಸೆ ಹಿಂಗಿ
ದಣಿದ ಜೀವ ಕಂಡ ನಾಕ
ನಿನ್ನ ಮಂದಹಾಸ.
ಭಗೀರಥರ ಕರೆಯ ಕೇಳಿ
ಅವತರಿಸಿದ ಅಮೃತಗಂಗೆ
ನಿನ್ನ ನಗೆಯು. ಅದರ ನೆಲೆಯು
ಋತಪ್ರಜ್ಞೆಯ ಕೈಲಾಸ.

ಹಿರಣ್ಮಯ ಪುರುಷನೆಡೆಗೆ
ಪರಾಪ್ರಕೃತಿ-ಪಟ್ಟದಲ್ಲಿ
ಭವ್ಯದಿವ್ಯವಾಗಿ ಕುಳಿತ
ನವ್ಯ ಚಕ್ರವರ್ತಿನಿ !
ಧರ್ಮವೆಲ್ಲ ಪ್ರೇಮವಾಗಿ
ಕರ್ಮವೆಲ್ಲ ಯೋಗವಾಗಿ
ಅನಂತ ಸ್ಫೂರ್ತಿಯಾಗಿ ನಿಂತ
ಪೂರ್ಣಯೋಗಕಾರಿಣಿ !

# ಮಹಾಮಾತೆ

ತಾಯಿಯಾಗಿ ತೋರ್ವ ತಂದೆ !
ತಾಯಿಯಾಗಿ ನೆಲಕೆ ಬಂದೆ !
ತಂದೆಯಾಗಿ ಅಭಯವೆಂದೆ !
ವಾಗರ್ಥದ ಯೋಗವು !
ಪುರುಷ ಶಕ್ತಿ ನೀವು ದಿಟವು
ನೀವ್ ತೋರಿದ ಮಹಾಪಥವು
ದೈವಿಕತೆಯ ಅರುಣರಥವು
ಇಳೆಯ ಸೌಭಾಗ್ಯವು !

ಎಳೆಯರೊಡನೆ ಆಟವಾಡಿ
ಹಸಿದವರಿಗೆ ಅಮೃತ ನೀಡಿ
ಬಂದವರನು ಹರಸಿ ಹಾಡಿ
ಜಗನ್ಮಾತೆ ! ಬಾಳುವಿ.
ಬೇರೆ ಲೋಕಗಳನು ತೆರೆದು
ಶಿಲೆಯಲಿ ಆತ್ಮನನು ಕೊರೆದು
ಇಹದಲಿ ಪರವನ್ನು ಕರೆದು
ಹೊಸ ಸೊಬಗನು ತಾಳುವಿ.

ನವ ಜೀವನ, ನವ ಸಮಾಜ,
ನವ ವ್ಯಕ್ತಿ, ನವೀನ ತೇಜ,
ಹೊಸತು ಓಘ, ಹೊಸತು ಓಜ
ನವ ಮಂತ್ರದ ಸಿದ್ಧಿಯು.
ಕಲ್ಪತರು, ಕಲ್ಪಲತೆ,
ನಂದನದಲಿ ಕೇಳ್ವ ಕತೆ,
ನಿನ್ನಡಿಯಲಿ ಓ ಮಾತೆ !
ದಿನದಿನದಭಿವೃದ್ಧಿಯು !

—**ವಿನಾಯಕ**

# ಶ್ರೀ ಮಾತೆಯವರ ಧ್ಯಾನ-ಪ್ರಾರ್ಥನೆಗಳು

ಡಿಸೆಂಬರ ೭, ೧೯೧೨

ಮೌನವಾಗಿ ಉರಿಯುವ ಜ್ವಾಲೆಯಂತೆ, ಅತ್ತಿತ್ತ ಹೊಯ್ದಾಡದೆ ನೇರವಾಗಿ ಮೇಲಕ್ಕೇರುವ ಧೂಪದ ಹೊಗೆಯಂತೆ ನನ್ನ ಪ್ರೇಮವು ನಿನ್ನೆಡೆಗೆ ಸಾಗುವುದು. ತರ್ಕ-ಚಿಂತೆಗಳನ್ನರಿಯದ ಎಳಮಗುವಿನಂತೆ, " ನಿನ್ನ ಇಚ್ಛೆಯೆ ಕೈಗೂಡಲಿ, ನಿನ್ನ ಬೆಳಕು ಆವಿರ್ಭವಿಸಲಿ, ನಿನ್ನ ಶಾಂತಿ ಪ್ರಕಾಶಿಸಲಿ, ನಿನ್ನ ಪ್ರೇಮವು ಜಗತ್ತನ್ನು ವ್ಯಾಪಿಸಲಿ " ಎಂಬ ಶ್ರದ್ಧೆಯಿಂದ ನಾನು ನಿನ್ನಲ್ಲಿ ಕೂಡಿರುವೆನು. ನೀನು ಇಚ್ಛಿಸಿದಾಗ ನಾನು ನಿನ್ನೊಳಗೇ ಉಳಿಯುವೆನು, ನೀನೇ ಆಗುವೆನು, ಅದೇಕೆ ನಾನು-ನೀನೆಂಬ ಭೇದವನ್ನು ಮೀರುವೆನು. ಯಾವ ಪ್ರಕಾರದ ಆತುರತೆಯೂ ಇಲ್ಲದೆ ಆ ಮಂಗಲ ಮುಹೂರ್ತವನ್ನು ನಾನು ಎದುರುನೋಡುತ್ತಿರುವೆನು. ಹಾಗೂ ಅಪಾರವಾದ ಮಹಾಸಾಗರದೆಡೆಗೆ ಹರಿಯುವ ಶಾಂತಪ್ರವಾಹದಂತೆ ನಾನೂ ನನ್ನನ್ನು ಆ ಮುಹೂರ್ತದೆಡೆಗೆ ನಿರರ್ಗಳವಾಗಿ ಹರಿಯಿಸುತ್ತಿರುವೆನು.

ನಿನ್ನ ಶಾಂತಿ ನನ್ನಲ್ಲಿದೆ; ಆ ಶಾಂತಿಯಲ್ಲಿ ಅನಂತ ಸ್ತಬ್ಧತೆಯೊಂದಿಗೆ ನೀನೊಬ್ಬನೇ ಎಲ್ಲದರೊಳಗೂ ನೆಲಸಿರುವುದನ್ನು ನಾನು ಕಾಣುತ್ತಿರುವೆನು.

ಫೆಬ್ರುವರಿ ೫, ೧೯೧೩

ನನ್ನೆದೆಯ ನಿತಾಂತ ಮೌನದಲ್ಲಿ ಮೃದುಮಧುರವಾದ ಮಂತ್ರದಂತೆ ನಿನ್ನ ದನಿಯು ಕೇಳಿಸುವುದು. ಅದನ್ನು ಗ್ರಹಿಸುವ ಶಕ್ತಿ ಶಬ್ದಗಳಿಗೆ ಸಾಲದಾದರೂ ನಿನ್ನನ್ನೇ ತುಂಬಿಕೊಂಡು ಅವು ಆ ದನಿಯನ್ನು ನನ್ನ ತಲೆಯಲ್ಲಿ ಪರಿವರ್ತಿಸುವವು. ಅವು ಭೂಮಿಯನ್ನು ಕುರಿತಾಗಿವೆ. ಅವು ಹೀಗಿವೆ: " ಹೇ ದೀನ, ದುಃಖಮಯ ಪೃಥಿವಿಯೇ, ನಾನು ನಿನ್ನಲ್ಲಿರುವೆನೆಂಬುದನ್ನು ಮರೆಯದಿರು. ನಿರಾಶೆಗೊಳ್ಳಬೇಡ. ದುಃಖಪೂರ್ಣವೆಂದೂ-ಆನಂದಮಯವೆಂದೂ, ಕುರೂಪವೆಂದೂ-ಸುರೂಪವೆಂದೂ ನನಗೆ ತೋರುವುದೆಲ್ಲವೂ, ಪ್ರತಿಪ್ರಯತ್ನವೂ, ಪ್ರತಿ ಶೋಕವೂ, ಪ್ರತಿ ನಲಿವೂ, ಪ್ರತಿ ನೋವೂ, ನಿನ್ನ ಅಂತಃಕರಣದ ಪ್ರತಿ ಆವಾಹನವೂ, ನಿನ್ನ ಆತ್ಮದ ಪ್ರತಿ ಅಭೀಪ್ಸೆಯೂ, ನಿನ್ನ ಋತುಮಾನಗಳ ಪ್ರತಿ ನವೀನತೆಯೂ,—ಎಲ್ಲ ಎಲ್ಲವೂ, ಒಂದೊಂದನ್ನೂ ಬಿಡದೆ ಎಲ್ಲವೂ, ಎಡೆಬಿಡದೆ ಸಮರಸತೆ-ನಿಶ್ಚಿತತೆ-ವಿಶ್ರಾಂತಿ-ಪರಮಪಾವಿತ್ರ್ಯಗಳಿಂದೊಡಗೂಡಿದ ನನ್ನೆಡೆಗೆ ನಿನ್ನನ್ನು ಕರೆದುತರುವವು."

ಕೇಳು, ಓ ಭೂದೇವಿಯೇ, ಕೇಳು. ಮೇಲಕ್ಕೇಳುವ ಆ ಭವ್ಯ ಧ್ವನಿಯನ್ನು ಕೇಳು.

ಕೇಳು, —ಕೇಳುತ ಮತ್ತೆ ಧೈರ್ಯವನ್ನು ತಾಳು.

ಮೇ ೧೧, ೧೯೧೩.

ಬಾಹ್ಯಪ್ರಪಂಚದ ಹೋಣೆಗಳು ನನ್ನಿಂದ ದೂರವಾದೊಡನೆ, ಅವುಗಳನ್ನು ಕುರಿತ ವಿಚಾರಗಳೆಲ್ಲವೂ ನನ್ನಿಂದ ಬಹು ದೂರ ಹೋಗಿ, ಸಂಪೂರ್ಣವಾಗಿ ನಾನು ನಿನ್ನ ಚಿಂತನೆಯಲ್ಲಿಯೇ ತೊಡಗುವೆನು, ನಿನ್ನ ಸೇವೆಯಲ್ಲಿಯೇ ನಿರತನಾಗುವೆನು. ಆಗ ಆ ಪೂರ್ಣ ಶಾಂತಿ-ಗಾಂಭೀರ್ಯಗಳಲ್ಲಿ ನನ್ನ ಇಚ್ಛೆಯನ್ನು ನಿನ್ನೊಂದಿಗೆ ಹೊಂದಿಸುವೆನು; ಮತ್ತು ಪರಿಪೂರ್ಣ ಮೌನದಲ್ಲಿ ನಿನ್ನ ಸತ್ಯವನ್ನು ಕೇಳುವೆನು—ಅದರ ಒಡನುಡಿಯನ್ನು ಲಾಲಿಸುವೆನು.

ನಿನ್ನ ಇಚ್ಛೆಯ ಅರಿವು ಉಂಟಾದಾಗ ಹಾಗೂ ನಿನ್ನಿಚ್ಛೆಯೊಂದಿಗೆ ನಮ್ಮವುಗಳನ್ನು ಒಂದುಗೂಡಿಸಿದಾಗ, ನಿಜವಾದ ಸ್ವಾತಂತ್ರ್ಯದ ಹಾಗೂ ಸರ್ವಶಕ್ತಿಮತ್ತೆಯ ಗೂಢವು ನಮಗೆ ವಿದಿತವಾಗುವುದು. ನಮ್ಮೊಳಗಿನ ಸಕಲಶಕ್ತಿಗಳ ಪುನರುಜ್ಜೀವನದ—ನಮ್ಮ ಜೀವಾತ್ಮನು ಪುನರ್ಜನ್ಮ ಹೊಂದುವುದರ ಗುಟ್ಟು ಆಗ ಗೊತ್ತಾಗುವುದು.

ನಿರಂತರವಾಗಿಯೂ ಸಮಗ್ರವಾಗಿಯೂ ನಿನ್ನೊಂದಿಗೆ ಒಂದಾಗುವುದೆಂದರೆ ನಮ್ಮೊಳ-ಹೊರಗಿನ ಯಾವತ್ತೂ ತೊಡಕುಗಳನ್ನು ತೊಡೆದುಹಾಕಿ, ಎಲ್ಲ ಎಡರುಗಳನ್ನು ದಾಟಿ ಜಯಶೀಲರಾಗುವೆವೆಂಬ ಭರವಸೆಯನ್ನು ಪಡೆಯುವುದೇ ಸರಿ.

ಹೇ ಒಡೆಯಾ, ನನ್ನೊಡೆಯಾ, ಅಪಾರವಾದ ಆನಂದವು ನನ್ನಂತರಂಗದಲ್ಲಿ ತುಂಬುತ್ತಿದೆ; ಸಂತೋಷದ ಗೀತಗಳು ನನ್ನ ತಲೆಯಲ್ಲಿ ಅದ್ಭುತ ತರಂಗಗಳೊಂದಿಗೆ ಉಕ್ಕಿಬರುತ್ತಿವೆ; ಹಾಗೂ ನಿನ್ನ ಗೆಲುವು ಖಂಡಿತ ಎಂಬ ಪರಿಪೂರ್ಣ ಶ್ರದ್ಧೆಯಿಂದ, ಸಾರ್ವಭೌಮವಾದ ಒಂದು ಶಾಂತಿಯೂ ಅಜೇಯವಾದ ಒಂದು ಶಕ್ತಿಯೂ ನನಗೆ ಪ್ರತೀತವಾಗುತ್ತಿವೆ. ನೀನು ನನ್ನ ಒಳಬದುಕನ್ನು ವ್ಯಾಪಿಸುವಿ, ಅದನ್ನು ಕಳೆಗೊಳಿಸುವಿ, ಅದರಲ್ಲಿಯ ತೋರದ ನೆಲೆಗಳನ್ನು ಪುಟಿಯಿಸುವಿ; ಅದರ ತಿಳಿವಳಿಕೆಯನ್ನು ನೀನು ಬೆಳಗುವಿ; ಅದರ ಜೀವನವನ್ನು ನೀನು ಉತ್ಕಟಗೊಳಿಸುವಿ, ಅದರ ಪ್ರೇಮವನ್ನು ಹತ್ತುಮಡಿಯಾಗಿ ಬೆಳೆಸುವಿ. ಈ ವಿಶ್ವವೇ ನಾನೋ—ನಾನೇ ಈ ವಿಶ್ವವೋ, ನೀನು ನನ್ನೊಳಗೋ—ನಾನು ನಿನ್ನೊಳಗೋ ಎಂಬುದನ್ನು ಇನ್ನು ಅರಿಯೆನು; ನೀನೊಬ್ಬನೇ ಇರುವುದು ಅಹುದು, ಹಾಗೂ ಎಲ್ಲವೂ ನೀನೇ ಅಹುದು. ನಿನ್ನ ಅನಂತ ಪ್ರಸಾದದ ಪ್ರವಾಹಗಳು ವಿಶ್ವವನ್ನು ತುಂಬಿ ಸೂಸುವವು.

ಓ ದೇಶವಿದೇಶಗಳೇ, ಜನಾಂಗಗಳೇ, ಮಾನವರೇ, ಹಾಡಿರಿ—

"ದಿವ್ಯ ಸಾಮರಸ್ಯವು—ಇದೊ—ಇಲ್ಲಿದೆ."

ಜುಲೈ ೨೩, ೧೯೧೪.

ಓ ಪ್ರಭುವೇ, ನೀನು ಸರ್ವಶಕ್ತಿಮಂತನು; ಯೋಧನಾಗಿ ವಿಜಯಿಯಾಗು. ನಿನ್ನ ಪ್ರೇಮವು ಸರ್ವಸತ್ತಾಧಾರಿಯಾದ ಸ್ವಾಮಿಯಾಗಿ ನಮ್ಮೆದೆಗಳಲ್ಲಿ ಮನೆಮಾಡಲಿ, ನಿನ್ನ ಜ್ಞಾನವು ನಮ್ಮ ವಿಚಾರಪ್ರಾಂತವನ್ನೆಂದಿಗೂ ತೊರೆಯದಿರಲಿ. . . ಪ್ರಭೋ, ದೌರ್ಬಲ್ಯ ದಲ್ಲಾಗಲಿ ತಮಸ್ಸಿನಲ್ಲಾಗಲಿ ನಮ್ಮನ್ನು ಬಿಟ್ಟು ತೊಲಗಬೇಡ; ಎಲ್ಲ ಮಿತಿ-ಮರ್ಯಾದೆ ಗಳನ್ನು ತರಿದೊಗೆ, ಎಲ್ಲ ಶೃಂಖಲೆಗಳನ್ನು ಕಡಿದುಬಿಡು, ಎಲ್ಲ ಮಾಯೆಯನ್ನು ನಿವಾರಿಸು.

ನನ್ನ ಅಭೀಪ್ಸೆಯು ಉತ್ಕಟ ಪ್ರಾರ್ಥನೆಯ ರೂಪದಲ್ಲಿ ನಿನ್ನೆಡೆಗೆ ಬರುತ್ತಿದೆ.

---

ಜನವರಿ ೨೩. ೧೯೧೭.

ನನ್ನಿರವಿನಲ್ಲಿ ಪ್ರೇಮ-ಸೌಂದರ್ಯ-ಆನಂದಗಳನ್ನು ನೀನು ಅದೆಷ್ಟು ಪೂರ್ಣವಾಗಿಯೂ ನಿಬಿಡವಾಗಿಯೂ ತುಂಬಿರುವಿ; ಹೇಗೆಂದರೆ, ಅದನ್ನು ಹೆರರಿಗೆ ಪ್ರತೀತವಾಗಗೊಡದೆ ಉಳಿಯುವುದು ನನಗೆಂದಿಗೂ ಸಾಧ್ಯವಿಲ್ಲ. ಹೇ ಪ್ರಭೋ, ಅದೊಂದು ಉರಿಯುವ ಅಗ್ನಿ ಕುಂಡದಂತಿದೆ; ವಿಚಾರದ ಉಸಿರು ಅದರೊಳಗಿನ ಕಿಡಿಗಳನ್ನು ಬಹುದೂರ ಹಾರಿಸುವುದು, ಆ ಕಿಡಿಗಳು ಮನುಷ್ಯನ ಅಂತಃಕರಣದ ಅಂತರಾಳದಲ್ಲಿ ಹುದುಗಿರುವ ನಿನ್ನ ದಿವ್ಯಪ್ರೇಮದ ಬೇರೆ ಕಿಡಿಗಳನ್ನು ಹೊತ್ತಿಸುವವು. ಆ ಪ್ರೇಮವೇ ಯಾವ ಅಡೆತಡೆಯಿಲ್ಲದೆ ಮಾನವಜೀವ ಗಳನ್ನು ನಿನ್ನೆಡೆಗೆ ಆಕರ್ಷಿಸುವುದು. ಓ ನನ್ನ ಮಧುರ ಸ್ವಾಮಿಯೇ, ಇದೊಂದು ಹರ್ಷಾತಿ ರೇಕದೊಳಗೆ ನನ್ನ ಚೇತನವು ಅನುಭವಿಸಿದ ಬರಿ ದೃಷ್ಟಾಂತವಾಗದೆ, ಅದು ಜಡ-ಜೀವಗಳನ್ನು ಇಡಿಯದಾಗಿ ಪಲ್ಲಟಿಸುವ ಸತ್ಯವಾಗುವಂತೆ ದಯಪಾಲಿಸು!

ನನ್ನ ಒಳಬಾಳನ್ನು ತೀವಿ ಹರಿಯುವ ಈ ಪ್ರೇಮವು, ಈ ಸೌಂದರ್ಯವು, ಈ ಆನಂದವು ನನಗೆ ಹಿಡಿಸಲಸದಳವಾಗಿದ್ದರೂ, ನಾನು ಕಂಡ, ನನ್ನ ಆಲೋಚನೆಗೆ ವಿಷಯಗಳಾಗಿರುವ ಹಾಗೂ ನಾನು ಕಾಣದೆ-ಆಲೋಚಿಸದೆ ಇರುವ ವ್ಯಕ್ತಿಗಳ ಚೇತನವನ್ನೆಲ್ಲ ಅದು ಆವರಿಸಿ ಹರಿಯಲಿ. ನಿನ್ನ ಅನಂತ ಆನಂದದ ಅನುಭೂತಿಯು ಎಲ್ಲರಿಗೂ ಆಗುವಂತೆ ಅನುಗ್ರಹಿಸು.

ಓ ಮಧುರ ಸ್ವಾಮಿಯೇ, ಅವರೆಲ್ಲ ರಹೃದಯಗಳು ಆನಂದ-ಪ್ರೇಮ-ಸೌಂದರ್ಯಗಳಿಂದ ತುಂಬಿ ತುಳುಕಲಿ!

—ಸದಾನಂದ ನಾಯಕ

(ಅನುವಾದಕ)

# ದಿವ್ಯ ಸ್ಮಿತ

೧

ದೇವಲೋಕದಮಲ ಸಿರಿಯ
ಪಾರಿಜಾತ ಸುಮವಿದೊ ;
ಪರಮತೇಜ ದಿವ್ಯಸ್ಮಿತದ
ಸುಂದರತೆಯನಾಂತುದೊ !

೨

ನಂದನವನ ಚೆಂದವೆಲ್ಲ
ಚೆಲ್ಲುತಿಹುದು ಮೆಲ್ಲಗೆ ;
ಅರಳುತಿಹುದು, ಅರಳುತಿಹುದು
ಬಳುಕಿ ದಿಕ್ಕುದಿಕ್ಕಿಗೆ !

೩

ಮಲ್ಲಿಗೆಯೊ ಗುಲಾಬಿ ಬಕುಲ
ಸಂಪಿಗೆಯೊ ಸರೋಜವೊ ;
ಕೇತಕಿಯು, ಅಶೋಕ ಜಾಜಿ-
ಯಲ್ತು ; ಅದ್ವಿತೀಯವೊ !

೪

ಸೂರ್ಯನುದಯದಿಂದ ಅರಳು-
ತಿರುವ ನಲಿನಹೃದಯವೆ !
ಹೊಮ್ಮುತಿಹುದು ದೇವಮಾತೃ-
ಹೃದಯದಮೃತಕುಂಭವೆ !!

೫

ಆಹ ! ಮಂದಸ್ಮಿತದ ಮೋದ—
ಜಗವೆ ವಿಸ್ಮಯದೊಳಿದೆ ;
ಉಷೆಯೆ ಬಾಲರವಿಯ ಪಡೆದು
ಕಿರಣರಾಜಿ ಹರಿಸಿದೆ :

೬

ತಿಂಗಳುದಯದಿಂದ ಬಾನು
ತಿಳಿದು ಶಾಂತವಾಗಿರೆ,
ಜೊನ್ನ ಹೊನಲು ತುಂಬಿ ಹರಿದು
ಮೇರೆವರಿಯುವಂತಿರೆ,—

೭

ಮನುಜನೆದೆಯ ಬಯಕೆ-ಬಳ್ಳಿ
ಭೂಮಿತಲದೆ ಪರಿದಿದೆ ;
ಕುಡಿಗಳಂತೆ ಮನದಭೀಪ್ಸೆ
ಮೇಲೆ ಮೊಳೆತು ನಿಂತಿದೆ !

೮

ಪ್ರೇಮದೇಹ ಪಡೆದು ಮಾತೆ
ಜಗದಿ ಕರುಣೆ ಸುರಿವಳು :
ಸ್ಮಿತದ ವರಪ್ರಸಾದ ಪ್ರೇಮ-
ಪೂರವಾಗಿ ಎರೆವಳು !

೯

ಸ್ಮಿತಪ್ರಸಾದ ಮನದ ಕುಡಿಯ
ಬೆಳಿಸಿ ಹೂವ ಪಡೆಯಲಿ !
ದಿವ್ಯಜೀವನದ ಸುಗಂಧ
ಜಗದ ಹಿಗ್ಗ ಬೆಳಿಸಲಿ !

—ಸದಾನಂದ ನಾಯಕ

# ಸದ್ಗುಣಗಳು

( ಶ್ರೀ ತಾಯಿಯವರ "Words of Long Ago" ಎಂಬ ಗ್ರಂಥದಲ್ಲಿಯ ಪ್ರಥಮ ಭಾಗ ದಲ್ಲಿರುವ ' The Virtues" ಎಂಬ ಕಥೆಯ ಅನುವಾದ. )

ಒಂದಾನೊಂದು ಕಾಲದಲ್ಲಿ ಮಹಾ ವೈಭವವುಳ್ಳ ಅರಮನೆಯೊಂದಿತ್ತು. ಅದರ ಮಧ್ಯ ದಲ್ಲಿ ಗೌಪ್ಯವಾದ ಪುಣ್ಯಾಲಯವೊಂದುಂಟು. ಅದರ ಹೊಸತಿಲನ್ನು ಕೂಡ ಈ ವರೆಗೆ ಯಾರೂ ದಾಟಿರಲಿಲ್ಲ. ಮರ್ತ್ಯರಿಗೆ ಅದರ ಹೊರಮುಗ್ಗಲು ಸಹ ಅಗಮ್ಯವಾಗಿತ್ತು. ಏಕೆಂದರೆ ಆ ಅರಮನೆಯು ಉನ್ನತವಾದ ಮೇಘವೊಂದರ ಮೇಲೆ ನಿಂತಿದ್ದು ಅದರ ದಾರಿಯನ್ನು ಗೊತ್ತುಹಚ್ಚುವದು ಯಾರಿಗೂ ಸಾಧ್ಯವಿರಲಿಲ್ಲ.

ಅದು **ಸತ್ಯದೇವ**ನ ಅರಮನೆ.

ಒಮ್ಮೆ ಅಲ್ಲಿ ಮೇಜವಾನಿಯ ಊಟದ ಏರ್ಪಾಡಾಯಿತು--ಮಾನವರಿಗಲ್ಲ, ಅವರಿಂದ ಭಿನ್ನವಾದ ಜೀವಿಗಳಿಗೆ--ಭೂತಲದಲ್ಲಿ ' ಸದ್ಗುಣಗಳು ' ಎಂಬ ಹೆಸರಿನಲ್ಲಿ ಪೂಜೆಗೊಂಬ ಆಯಾ ಗುಣಗಳ ಅಭಿಮಾನಿದೇವತೆಗಳಾದ ಸಣ್ಣದೊಡ್ಡ ದೇವಜೀವಿಗಳಿಗೆ.

ಅರಮನೆಯ ಕೈಸಾಲೆಯೇ ಒಂದು ದೊಡ್ಡ ಸಭಾಗೃಹವಾಗಿತ್ತು. ಅದರ ಗೋಡೆ, ನೆಲ, ಒಳಮಾಳಿಗೆಗಳು ಸ್ವಯಂಪ್ರಕಾಶಿತವಾಗಿ, ಸಹಸ್ರಾರು ಮಹಾಜ್ಯೋತಿಗಳಿಂದ ಮತ್ತಿಷ್ಟು ದೇದೀಪ್ಯಮಾನವಾಗಿದ್ದವು.

ಅದು **ಬುದ್ಧಿ**ಯ ಮಹಾಮಂದಿರ. ನೆಲದ ಅಂಚಿನಲ್ಲಿ ಅತಿಮಂದ ಪ್ರಕಾಶವು ಇಂದ್ರ ನೀಲದಂತೆ ಬಹು ಚೆಲುವಾದ ಬಣ್ಣವನ್ನು ತಾಳಿತ್ತು. ಅದು ಮೇಲ್ಗಡೆಗೆ ಇನ್ನೂ ಹೆಚ್ಚು ಪ್ರಕಾಶಮಾನವಾಗಿತ್ತು. ಅಲ್ಲಿ ದೀಪಮಾಲೆಗಳಂತೆ ನೇತಾಡುವ, ವಜ್ರಗೋಲಕಗಳಿಂದ ಸಹಸ್ರಮುಖವಾಗಿ ಮಿರುಮಿರುಗುವ ಕಿರಣರಾಶಿಗಳು ಸುತ್ತೆಲ್ಲ ತಾಂಡವವಾಡುತಿದ್ದವು.

ಸದ್ಗುಣಗಳ ಅಭಿಮಾನಿದೇವತೆಗಳು ಒಬ್ಬೊಬ್ಬರಾಗಿ ಆಗಮಿಸಿ, ತಮತಮಗೆ ಹೊಂದು ವಂತೆ ಗುಂಪು ಮಾಡಿಕೊಂಡು ಕುಳಿತರು. ವಿಶ್ವದ ಲೋಕಲೋಕಗಳಲ್ಲಿ ಪರಕೀಯ ಜೀವಿ ಗಳ ಮಧ್ಯದಲ್ಲಿ ಚೆದರಿಹೋದವರು ಒಮ್ಮೆಯಾದರೂ ಹೀಗೆ ಒಟ್ಟಾಗಿ ಕೂಡಿದೆವಲ್ಲಾ ಎನ್ನುವ ಸಂಭ್ರಮದಲ್ಲಿದ್ದರು.

ಸಮಾರಂಭದ ಅಧ್ಯಕ್ಷಪದವನ್ನು ಸತ್ಯವತಿಯು (Sincerity) ವಹಿಸಿದ್ದಳು. ಅವಳು ತೆಳ್ಳನೆಯ, ಬೆಳ್ಳನೆಯ ತಿಳಿನೀರಿನಂತಹ ಬಟ್ಟೆಯನ್ನುಟ್ಟು, ಕೈಯಲ್ಲಿ ಪಾರದರ್ಶಕವಾದ ಸ್ಫಟಿಕಗೋಲಕವನ್ನು ಹಿಡಿದಿದ್ದಳು. ಅದರಲ್ಲಿ ಇದ್ದಕ್ಕೆ ಇದ್ದಹಾಗೆ ವಸ್ತುಗಳು ತಮ್ಮದೇ ಆದ, ರೂಪಗೆಡದ ಸ್ಥಿತಿಯಲ್ಲಿ ಪ್ರತಿಬಿಂಬಿಸುತ್ತಿದ್ದವು.

ಅವಳ ಅಕ್ಕಪಕ್ಕದಲ್ಲಿ ಇಬ್ಬರು ನಂಬಿಗಸ್ತ ರಕ್ಷಕರಂತೆ ನಿಂತಿದ್ದರು. ಅವರಲ್ಲಿ ಒಬ್ಬಳು ಮಾನವಂತಿಯಾದರೂ ಅಭಿಮಾನಿಯಾಗಿ ತೋರುವ **ವಿನಯವತಿ** (Humility); ಎರಡನೆಯ ವ್ಯಕ್ತಿಯೆಂದರೆ ಹೊಳೆಯುವ ಕಣ್ಣುಗಳಿಂದಲೂ ಸ್ಥಿರವಾದ ಮಂದಸ್ಮಿತದಿಂದಲೂ ಸ್ಥಿತಪ್ರಜ್ಞನಂತೆ ತಲೆಯೆತ್ತಿ ನಿಂತಿದ್ದ **ಧೈರ್ಯಕುಮಾರ** (Courage)

**ಧೈರ್ಯಕುಮಾರನ** ತೀರ ಹತ್ತಿರದಲ್ಲಿ ಕೈಯಲ್ಲಿ ಕೈಯಿಟ್ಟು ಒಬ್ಬ ಹೆಣ್ಣುಮಗಳು ಮುಸುಕಿನ ವೇಷದಲ್ಲಿ ನಿಂತಿದ್ದಳು; ವಿಭೇದಿಸುವ ಅವಳ ಕಣ್ಣುಗಳು ಮಾತ್ರ ಮುಖಪಟಲದಿಂದ ಹೊಳೆಯುತ್ತಿರುವದು ಕಂಡುಬರುತ್ತಿತ್ತು. ಅವಳೇ **ವಿವೇಕಚತುರೆ** (Prudence).

ಇವರೆಲ್ಲರ ಮಧ್ಯದಲ್ಲಿ ಅತ್ತಿತ್ತ ಓಡಾಡಿಕೊಂಡಿರುತ್ತಿದ್ದರೂ ಹತ್ತಿರವೇ ಇರುವಂತೆ ತೋರುತ್ತಿರುವವಳು **ಧರ್ಮಿಷ್ಠೆ** (Charity). ಅವಳು ಪ್ರಬುದ್ಧಳೂ, ಪ್ರಶಾಂತಳೂ, ಕುಶಾಗ್ರಬುದ್ಧಿಯವಳೂ ಆಗಿದ್ದಳು. ಎಲ್ಲ ಆಗುಹೋಗುಗಳನ್ನು ತೂಗಿ ನೋಡುವ ಜಾಣ್ಮೆ ಅವಳದೇ ಸರಿ. ಗುಂಪುಗಟ್ಟಿದ ಸಭೆಯಲ್ಲಿ ಆಕೆ ಸುಳಿಯುತ್ತಿರುವಾಗ, ದಾರಿಯಲ್ಲಿ ಶುಭ್ರ ಮಂದಪ್ರಕಾಶವನ್ನು ಬೀರುತ್ತಿದ್ದಳು. ಈ ಪ್ರಕಾಶವು ಸೂಕ್ಷ್ಮವಾಗಿ, ಬಹುಜನರಿಗೆ ಅದೃಶ್ಯ ಕಿರಣಪುಂಜವಾಗಿ ಹೊರಹೊಮ್ಮುತ್ತಿದ್ದು, ಅವಳನ್ನು ಅಗಲದ ಸಂಗಾತಿ ಅವಳಿಸೋದರಿ **ನ್ಯಾಯವಂತಿ** (Justice)ಯಿಂದ ಬಂದುದಾಗಿತ್ತು. **ಧರ್ಮಿಷ್ಠೆ**ಯನ್ನು **ದಯಾಕುಮಾರಿ** (Kindness), **ಸಹನಶೀಲೆ** (Patience), **ನಯವತಿ** (Gentleness), **ದಾಕ್ಷಿಣ್ಯವತಿ** (Deference) ಮೊದಲಾದ ಚದುರೆಯರು ಸುತ್ತುಗಟ್ಟಿ ಉಜ್ಜ್ವಲ ಅಂಗರಕ್ಷಕರಂತೆ ಶೋಭಿಸುತ್ತಿದ್ದರು

ತಾವೆಲ್ಲರೂ ಅಲ್ಲಿ ಕೂಡಿರುವೆವೆಂದು ಅವರ ಭಾವನೆಯಂತೂ ಆಗಿತ್ತು.

ಅತ್ತ ನೋಡಿರಿ. ಸುವರ್ಣಮಯ ಹೊಸ್ತಿಲಿನ ಹತ್ತರ ಒಮ್ಮೆಲೆ ಹೊಸದೊಂದು ವ್ಯಕ್ತಿ ಕಾಣುತ್ತಿದೆ. ಬಾಗಿಲ ಬಳಿ ಸೇವಾನಿಷ್ಠ ಕಾವಲುಗಾರರು ಅವಳಿಗೆ ಪ್ರವೇಶ ಮಾಡಗೊಡಲು ಬಹು ಪ್ರಯಾಸದಿಂದ ಒಪ್ಪಿದರು. ಆಕೆಯನ್ನು ಈ ಮೊದಲು ಅವರು ಕಂಡಿರಲೇ ಇಲ್ಲ. ಅವರ ಮೇಲೆ ಪ್ರಭಾವವನ್ನು ಬೀರುವಂಥ ಯಾವ ವರ್ಚಸ್ವಿ ಲಕ್ಷಣಗಳೂ ಅವಳ ಮುಖದಲ್ಲಿ ಇರಲಿಲ್ಲ.

ಅವಳು ಬಲು ಚಿಕ್ಕವಳು. ಮೈಕಟ್ಟು ಬಡಕಲು. ಆಕೆ ಉಟ್ಟಿದ್ದ ಸಾಧಾರಣವಾದ ಬಿಳಿ ಬಟ್ಟೆ ಅವಳ ಬಡತನವನ್ನು ಸೂಚಿಸುತ್ತಿತ್ತು. ಕಾತರಗೊಂಡವಳಾಗಿ ಭಯದಿಂದ ಕೆಲವು ಹೆಜ್ಜೆ ಮುಂದುವರಿದಳು. ಆಮೇಲೆ ಸ್ವಾಭಾವಿಕವಾಗಿ ಈ ಜನದಟ್ಟಣೆಯ ಆಡಂಬರದ ಪ್ರಭಾವಳಿಯಲ್ಲಿ ಹೌಹಾರಿ, ಯಾರ ಕಡೆಗೆ ಹೋಗಬೇಕೆಂಬುದೇ ತಿಳಿಯದಂತಾಗಿ ನಿಂತು ಬಿಟ್ಟಳು.

ಆಗ **ವಿವೇಕಚತುರೆಯು** ಸಂಗಾತಿಗಳೊಡನೆ ಸ್ವಲ್ಪ ಚರ್ಚೆ ಮಾಡಿ, ಬಳಿಕ ಅವರ ಬಿನ್ನಹದ ಮೇರೆಗೆ ಈ ಕಡೆಗೆ ಬಂದು ಅಪರಿಚಿತ ಅತಿಥಿಯೆಡೆಗೆ ಮುಂದುವರಿದಳು. ವಿಸ್ಮಯ ಪಟ್ಟವರಂತೆ ಸ್ವಲ್ಪ ಗಂಟಲು ಸರಿಪಡಿಸಿಕೊಳ್ಳುತ್ತ, ಅವಳ ಸಮ್ಮುಖವಾಗಿ ನಿಂತು ಹೀಗೆ ಕೇಳಿದಳು :

" ಈ ಸಭಾಮಂದಿರದಲ್ಲಿ ಕಲೆತ ನಾವೆಲ್ಲ ನಮ್ಮನಮ್ಮ ಹೆಸರು ಯೋಗ್ಯತೆಗಳನ್ನು ಪರಸ್ಪರ ಅರಿತವರಾಗಿದ್ದೇವೆ. ನೀನು ಬಂದಿರುವುದು ಆಶ್ಚರ್ಯವನ್ನುಂಟುಮಾಡಿದೆ. ನೀನು ಪರಕೀಯಳಾಗಿ ಕಾಣುತ್ತೀ ; ನಾವು ಈ ಹಿಂದೆ ನಿನ್ನನ್ನು ಕಂಡಂತೆ ತೋರುವುದಿಲ್ಲ. ನೀನು ಯಾರೆಂಬುದನ್ನು ದಯವಿಟ್ಟು ನನಗೆ ಹೇಳುವಿಯಾ ? "

ಆಗ ಹೊಸಬಳು ನಿಟ್ಟುಸಿರಿನಲ್ಲಿ ಹೀಗೆ ಉತ್ತರವಿತ್ತಳು :

" ಈ ಸಭಾಮಂದಿರದಲ್ಲಿ ನಾನು ಪರಕೀಯಳಾಗಿ ಕಂಡದ್ದೇನೂ ನನಗೆ ಆಶ್ಚರ್ಯವನ್ನುಂಟುಮಾಡುತ್ತಿಲ್ಲ. ಈ ವಿಶ್ವದಲ್ಲಿ ಯಾರಿಂದಲೇ ಆಗಲಿ, ನನಗೆ ಆಮಂತ್ರಣ ಬರುವುದು ಅಪರೂಪವೇ ಆಗಿದೆ. ನನ್ನ ಹೆಸರು **ಕೃತಜ್ಞತಾಕುಮಾರಿ** (Gratitude). "

**—ಹ. ಮ. ಬಬಲೇಶ್ವರ**
( ಅನುವಾದಕ )

ಪರಮಾತ್ಮನ—ಜಗನ್ಮಾತೆಯ ಸಾಕ್ಷಿತ್ವದಲ್ಲಿ ಸದೈವ ಇರುವಂತೆ ಭಾವಿಸಿಯೇ ನಿಮ್ಮ ಅನುದಿನದ ನಡೆವಳಿಕೆಯನ್ನಿಟ್ಟುಕೊಳ್ಳಿರಿ. ದಿವ್ಯ ಅಸ್ತಿತ್ವಕ್ಕೆ ಸಲ್ಲದ ಒಂದು ಕೃತಿಯನ್ನೂ ಆಚರಿಸದಿರಿ, ಒಂದು ವಿಚಾರವನ್ನೂ ಮಾಡದಿರಿ, ಒಂದು ಭಾವನೆಯನ್ನೂ ತಂದುಕೊಳ್ಳದಿರಿ.

× × × ×

ಜಗನ್ಮಾತೆಯ ಅಸ್ತಿತ್ವದ ನಿತ್ಯ ಪ್ರತೀತಿಯು ಸಾಧನದಿಂದ ಬರುವುದು ; ಸಾಧನದಲ್ಲಿ ಗೆಲುವುಂಟಾಗಲು ಭಗವತ್ಕೃಪೆ ಅವಶ್ಯಕ, ಆದರೆ ಆ ಕೃಪೆಯ ಅವತಾರಕ್ಕೆ ಅಭ್ಯಾಸದ ಪೂರ್ವಸಿದ್ಧತೆಯು ಅಗತ್ಯ.

× × × ×

ಬರಿಯ ಬಾಹ್ಯ ವ್ಯವಹಾರದಲ್ಲಿ ತೊಡಗಿರುವುದನ್ನು ತೊರೆದು, ಹೃದಯದೊಳಕ್ಕೆ ಹೊಗಲು ಕಲಿಯಿರಿ ; ಚಿತ್ತವನ್ನು ಶಾಂತಗೊಳಿಸಿರಿ, ನಿಮ್ಮೊಳಗೆ ಜಗನ್ಮಾತೆಯು ಕಾರ್ಯವೆಸಗುತ್ತಿರುವುದನ್ನು ಅರಿಯಲು ಉತ್ಕಟೇಚ್ಛೆಯನ್ನು ತಾಳಿರಿ.

**—ಶ್ರೀ ಅರವಿಂದರು**

# ಶ್ರೀ ಅರವಿಂದರ ಪತ್ರಗಳು

*( Letters of Sri Aurobindo: Part I, VII Difficulties of the Path*
ಎಂಬ ಭಾಗದಿಂದ)

## ೧. ವಿಘ್ನಗಳೂ ಸತ್ತ್ವಪರೀಕ್ಷೆಗಳೂ

**( Difficulties and Ordeals, page 283 )**

ಆಧ್ಯಾತ್ಮಿಕ ಮಾರ್ಗದಲ್ಲಿ ಪ್ರವೇಶ ಮಾಡಿದವರು ಆ ಮಾರ್ಗದಲ್ಲಿ ಬರುವ ವಿಘ್ನಗಳನ್ನು ಎದುರಿಸಿ ಸತ್ತ್ವಪರೀಕ್ಷೆಗಳಿಗೆ ಒಳಗಾಗಲೇಬೇಕು. ಈ ವಿಘ್ನಗಳಲ್ಲಿ ಕೆಲವು ಅವರ ಸ್ವಭಾವ ದೊಳಗಿಂದಲೇ ಹುಟ್ಟಿಬರುವುದುಂಟು; ಇನ್ನು ಕೆಲವು ಹೊರಗಿನಿಂದಲೂ ಬರುವುದುಂಟು. ಸ್ವಭಾವದೊಳಗಿನಿಂದ ಬರುವ ವಿಘ್ನಗಳು ಯಾವಾಗಲೂ ಮೇಲಿಂದ ಮೇಲೆ ಧುತ್ತೆಂದು ಏಳುವುದುಂಟು. ಅವುಗಳನ್ನು ನೀನು ಸಂಪೂರ್ಣವಾಗಿ ಗೆಲ್ಲುವ ವರೆಗೆ ಅವು ಹೀಗೆಯೇ ಏಳುತ್ತಿರುತ್ತವೆ. ಅವನ್ನು ನೀನು ಶಕ್ತಿ–ಸಹನೆಗಳಿಂದ ಎದುರಿಸಲೇಬೇಕು. ಇಂಥ ವಿಘ್ನಗಳು ಒದಗಿ ಸತ್ತ್ವಪರೀಕ್ಷೆ ನಡೆದಾಗ ಪ್ರಾಣಾಂಗವು ( vital part ) ನಿರ್ವಿಣ್ಣತೆಗೆ ಒಳಗಾಗುವ ಸಂಭವವುಂಟು. ಹೀಗೆ ನಿನಗೊಬ್ಬನಿಗೇ ಆಗುವುದೆಂದಲ್ಲ, ಎಲ್ಲ ಸಾಧಕರಿಗೂ ಹೀಗೆ ಆಗುವುದುಂಟು. ಇಂಥ ನಿರ್ವಿಣ್ಣತೆ ಬಂದರೆ ಸಾಧನಕ್ಕೆ ನೀನು ಅಪಾತ್ರನೆಂದು ಅರ್ಥವಲ್ಲ, ಅಥವಾ ಅತ್ಯಂತ ಅಸಹಾಯ ಸ್ಥಿತಿ ಬಂತೆಂದು ಗಾಬರಿಗೊಳ್ಳುವ ಕಾರಣವೂ ಇಲ್ಲ. ಆದರೆ ಆದಿ ಮಾತೆಯ ಶಕ್ತಿಯನ್ನು ನಿನ್ನ ಸಹಾಯಕ್ಕೆ ಕರೆದು, ನಿನ್ನ ಈ ನಿರ್ವಿಣ್ಣತೆಯ ಪ್ರತಿಕ್ರಿಯೆಯನ್ನು ಗೆಲ್ಲುವ ವಿಷಯದಲ್ಲಿ ನೀನು ನಿನ್ನನ್ನು ತರಬೇತುಗೊಳಿಸಬೇಕು.

ಈ ಮಾರ್ಗಕ್ಕೆ ನಿಷ್ಠೆಯಿಂದ ಅಂಟಿಕೊಂಡವರೆಲ್ಲರೂ ತಮ್ಮ ದೈವನಿಯೋಜಿತ ಆಧ್ಯಾತ್ಮಿಕ ಸಫಲತೆಯನ್ನು ಖಂಡಿತವಾಗಿ ಕಂಡುಕೊಳ್ಳಬಲ್ಲರು. ಯಾರಾದರೂ ಹಾಗೆ ಕಂಡುಕೊಳ್ಳದಿದ್ದರೆ ಅದಕ್ಕೆ ಎರಡು ಕಾರಣಗಳು ಇರುವ ಸಂಭವವಿದೆ. ಒಂದೆಂದರೆ, **ಅವರು** ಈ ಹಾದಿಯನ್ನೇ ಬಿಟ್ಟುಕೊಟ್ಟಿರಬೇಕು. ಇನ್ನೊಂದೆಂದರೆ, ಅವರಲ್ಲಿ ಮಹತ್ತ್ವಾಕಾಂಕ್ಷೆ, ಅಹಂಕಾರ, ಸ್ವಾರ್ಥಗಳ ಮೋಹವುಂಟಾಗಿ ಅವರನ್ನು ಅಡ್ಡದಾರಿಗೆ ಎಳೆದದ್ದರಿಂದ, ದೈವಿಕತೆಯನ್ನು ಅವರು ಪ್ರಾಮಾಣಿಕವಾಗಿ ಅವಲಂಬಿಸದಂತೆಯೇ ಅವರ ಸ್ಥಿತಿ ಆಗಿರಬೇಕು.

೧೦ ೮—೧೯೩೬

## ೨. ಯೋಗದಲ್ಲಿ ತಾಳ್ಮೆಯ ಆವಶ್ಯಕತೆ

( Need of Patience in Yoga, page 317 )

ಹೆಚ್ಚು ಆಳವಾಗಿ ವಿಚಾರಿಸಿ ಆಧ್ಯಾತ್ಮಿಕ ದೃಷ್ಟಿಯಿಂದ ಮಾತನಾಡುವದಾದಲ್ಲಿ, ಸ್ಪಷ್ಟ ಸಾಕ್ಷಾತ್ಕಾರವಾವುದೆಂದರೆ: ಅನುಭವಕ್ಕೆ ಬಂದ ಮಾತು ಜಡಲೋಕದ ಯಾವುದೇ ಪ್ರತ್ಯಕ್ಷ ವಸ್ತುವಿಗಿಂತ ಹೆಚ್ಚು ವಾಸ್ತವವೂ ಚಲನಶೀಲವೂ ( dynamic ) ಚೇತನಕ್ಕೆ ಆತ್ಯಂತಿಕ ವಾಗಿ ಸನ್ನಿಹಿತವಾದುದೂ ಆಗಿದೆ ಎಂಬ ಅನುಭೂತಿಯನ್ನು ಉಂಟುಮಾಡಬಲ್ಲ ಸಾಕ್ಷಾತ್ಕಾ ರವೇ ಸರಿ. ಸಗುಣ ದೈವಿಕತೆಯು ಇಲ್ಲವೆ ನಿರ್ಗುಣ ಬ್ರಹ್ಮತತ್ತ್ವದ ಇಲ್ಲವೆ ಆತ್ಮದ ಸಾಕ್ಷಾ ತ್ಕಾರವು, ವಾಡಿಕೆಯಾಗಿ ಸಾಧನದ ಪ್ರಾರಂಭಾವಸ್ಥೆಯಲ್ಲಿ ಇಲ್ಲವೆ ಮೊದಲಿನ ಕೆಲವೇ ವರ್ಷ ಗಳಲ್ಲಿ ಒದಗಿಬರಲಾರದು. ಇಷ್ಟೇ ಅಲ್ಲ, ಅನೇಕ ವರ್ಷಗಳು ಇದಕ್ಕೆ ಹಿಡಿಯಬಹುದು. ಇಂಥ ಸಿದ್ಧಿ ಬೇಗ ಪ್ರಾಪ್ತವಾಗುವದು ಎಲ್ಲೋ ಕೆಲವರಿಗೆ ಮಾತ್ರ. ಇಂಥ ಸಾಕ್ಷಾತ್ಕಾರವು ಬಹುಬೇಗ ಸಿದ್ಧಿಸಬೇಕೆಂದು ಅಪೇಕ್ಷೆ ಮಾಡುತ್ತ ಅದರ ದಾರಿ ಕಾಯುತ್ತ ಕೂಡುವದು ತಾಳ್ಮೆ ಯಿಲ್ಲದ ಅಸ್ವಾಭಾವಿಕ ದುಡುಕುತನದ ಲಕ್ಷಣವೆಂದು ಅನುಭವಶಾಲಿಯಾದ ಯಾವ ಯೋಗಿಯೇ ಆಗಲಿ ಸಾಧಕನೇ ಆಗಲಿ ಹೇಳಬಲ್ಲನು. ಪ್ರಾರಂಭದ ಅವಧಿಯಲ್ಲಿ ಸಾವಧಾನದ ಪ್ರಗತಿಯೇ ಅತ್ಯುತ್ತಮವೆಂಬುದಾಗಿ ಸಾಧಕರು ತಿಳಿಯತಕ್ಕದ್ದೆಂದು ಬಹುಜನರು ಹೇಳುವರು. ಸ್ವಭಾವವು ಪರಿಪಕ್ವಗೊಂಡು ದೈವೀ ಜೀವನಕ್ಕೆ ಸಿದ್ಧವಾಗಿ ದೈವಿಕತೆಯಲ್ಲಿ ತಲ್ಲೀನವಾದಾಗ ಮಾತ್ರವೇ ತುರೀಯ ಅನುಭವವು ಒದಗಬಲ್ಲುದು. ಕೆಲವರಿಗೆ ಪ್ರಾಸ್ತಾವಿಕ ಅನುಭವಗಳು ಉಳಿದವರಿಗಿಂತ ಬೇಗನೆ ತ್ವರಿತಗತಿಯಿಂದ ಬರುವುದುಂಟು; ಆದರೆ ಇಂಥ ಪ್ರಾಸ್ತಾವಿಕ ಅನುಭವಗಳು ಕೊನೆಗೆ ಶಾಶ್ವತವೂ ಪರಿಪೂರ್ಣವೂ ಆದ ದಿವ್ಯಾನುಭವವಾಗಿ ಪರಿಣಮಿಸುವ ತನಕ ಉಂಟಾಗುವ ಚೇತನದ ದೀರ್ಘಶ್ರಮವನ್ನು ಅವರೂ ತಪ್ಪಿಸಿಕೊಳ್ಳಲಾರರು. ಇದು ಯಾರೊಬ್ಬರ ಸೇರಿಕೆಗೆ ಬರುವ ಇಲ್ಲವೆ ಬಿಡುವ ಮಾತಲ್ಲ; ವಸ್ತುಸ್ಥಿತಿಗೆ ಒಳಗಾದ ಸತ್ಯ-ಅನುಭವಗಳ ಮಾತಾಗಿದೆ. ತಾಳ್ಮೆಗೆಟ್ಟು ಅವಸರಪಡುವ ಜನರು ಹೊಂದುವ ಪ್ರಗತಿಯ ವೇಗಕ್ಕಿಂತ, ಸಾವಧಾನವಾಗಿ ಕ್ರಮಕ್ರಮವಾಗಿ ಸಾಗುತ್ತ ಅವಶ್ಯವೆನಿಸಿದಾಗ ಅತಿ ಸಣ್ಣ ಹೆಜ್ಜೆ ಗಳನ್ನಿಡಲೂ ಸಿದ್ಧರಾದ ಪ್ರಫುಲ್ಲವೃತ್ತಿಯ ಜನರು ಹೊಂದುವ ಪ್ರಗತಿಯ ವೇಗವು ಹೆಚ್ಚು ತೀವ್ರವೂ ನಿಶ್ಚಿತವೂ ಎಂಬುದು ವಸ್ತುಸ್ಥಿತಿಯಾಗಿದೆ. ಇದು ನಾನು ಸದಾ ಕಂಡ ಮಾತು.

## ೩. ಚಿಕ್ಕ ಪ್ರಾರಂಭಗಳ ಮಹತ್ವ

( Importance of Small Beginnings, page 319 )

ಅನುಭವಗಳ ಬಗ್ಗೆ ನಾನು ಅಂದುದರ ಅರ್ಥವಿಷ್ಟು: ಯೋಗದಿಂದ ನಿನಗೆ ಲಭಿಸ ಬೇಕಾದುದರ ವಿಷಯದಲ್ಲಿ ನೀನೇ ಕೆಲವು ಸ್ವಂತ ಕಲ್ಪನೆಗಳನ್ನು ಮಾಡಿಟ್ಟುಕೊಂಡಿರುವಿ. ಏನೇನು ಲಭಿಸಿತೋ ಅದನ್ನೆಲ್ಲ ನಿನ್ನ ಆ ಮಾನದಂಡದಿಂದಲೇ ಯಾವಾಗಲೂ ಅಳೆಯುತ್ತಿರುವಿ. ನಿನ್ನ ಅಪೇಕ್ಷೆಯಂತೆ ಅಥವಾ ನಿನ್ನ ಆ ಮಾನದಂತೆ ಅದು ಇಲ್ಲದಿದ್ದ ಕಾರಣದಿಂದ ಒಂದು ಕ್ಷಣದಲ್ಲಿಯೇ " ಇದೇನು ಬೆಲೆಯಿಲ್ಲದ್ದು, ಇದರಲ್ಲಿ ಅರ್ಥವಿಲ್ಲ "ವೆಂಬುದಾಗಿ ನಿನ್ನಷ್ಟಕ್ಕೆ

ನೀನೇ ಹೇಳಿಕೊಳ್ಳುತ್ತಿರುವಿ. ನಿನ್ನ ಆ ಅತೃಪ್ತಿ ಪ್ರತಿ ಹೆಜ್ಜೆಗೂ ನಿನ್ನನ್ನು ಪ್ರತಿಕ್ರಿಯೆಗೆ ಈಡುಮಾಡಿದೆ, ಇಲ್ಲವೆ ನಿನ್ನನ್ನು ಹಿಮ್ಮೆಟ್ಟಿಸಿದೆ. ಇದರಿಂದ ಸತತ ಪ್ರಗತಿಗೆ ಅಡ್ಡಿಯುಂಟಾಗಿದೆ. ಚಿಕ್ಕ ಪ್ರಾರಂಭಗಳಿಗೂ ಮಹತ್ತವಾದ ಮಹತ್ತ್ವವಿದೆಯೆಂದೂ ಅವುಗಳನ್ನು ಜೋಕೆಯಿಂದ ಕಾಪಾಡಿಕೊಂಡು ತಾಳ್ಮೆಯಿಂದ ಬೆಳಿಸಿಕೊಳ್ಳಬೇಕೆಂದೂ ಅನುಭವಶಾಲಿಯಾದ ಯೋಗಿಯು ಬಲ್ಲನು. ಉದಾಹರಣೆ ಹೇಳುವುದೆಂದರೆ: ತಟಸ್ಥ ಮೌನ ( neutral quiet )ವು ಸಾಧಕನ ಪ್ರಾಣನಿಷ್ಠ ಆತುರತೆಗೆ ಎಷ್ಟೇ ಅತೃಪ್ತಿಕರವಾಗಿದ್ದರೂ ಎಲ್ಲ ತಿಳುವಳಿಕೆಯೊಳಗಿಂದ ಹಾದುಹೋಗುವ ಆ ಶಾಂತಿಗೆ ಅದು ಪ್ರಥಮ ಹೆಜ್ಜೆ; ಆಂತರಿಕ ಸಂತೋಷದ ಒಂದು ಸಣ್ಣ ಸೆಳಕು ಇಲ್ಲವೆ ರೋಮಾಂಚವು ಆ 'ಆನಂದ'ವೆಂಬ ಮಹಾಸಾಗರದ ಮೊದಲನೆಯ ಹನಿ; ಬೆಳಕು ಇಲ್ಲವೆ ಬಣ್ಣಗಳ ಆಟವು ಆಂತರಿಕ ದರ್ಶನ ಮತ್ತು ಅನುಭವಗಳ ಬಾಗಿಲದ ಬೀಗದ ಕೈ; ದೇಹವನ್ನು ಏಕಾಗ್ರ ಸ್ತಬ್ಧತೆಯಿಂದ ಮುಗಟ್ಟಿಸುವ ಆ ಅವತರಣವು ( descent ) ಯಾವುದರ ಕೊನೆಯಲ್ಲಿ ಈಶಾವಾಸವಿದೆಯೋ ಅಂತಹದರ ಮೊದಲನೇ ಸ್ಪರ್ಶವೆಂಬುದನ್ನು ಅನುಭವಿಕ ಯೋಗಿಯು ಬಲ್ಲನು. ಅವನು ತಾಳ್ಮೆಗೆಡುವದಿಲ್ಲ. ಆದೇ ಪ್ರಾರಂಭವಾಗುತ್ತಿರುವ ವಿಕಾಸದ ಭಂಗವಾಗದಂತೆ ಆತನು ಜಾಗರೂಕತೆ ವಹಿಸುವನು. ಕೆಲವು ಸಾಧಕರಿಗೆ ಪ್ರಾರಂಭದಲ್ಲಿಯೋ ಪ್ರಬಲ ಮತ್ತು ನಿಶ್ಚಯಾತ್ಮಕ ಅನುಭವಗಳು ಖಂಡಿತವಾಗಿ ಲಭಿಸುವವೇನೋ ನಿಜ; ಆದರೆ ಇವುಗಳ ತರುವಾಯ ಶೂನ್ಯಕಾಲಾವಧಿಗಳೂ ಹೋರಾಟದ ಕಾಲಾವಧಿಗಳೂ ಉಳ್ಳ ದೀರ್ಘ ಶ್ರಮವು ಬೆಂಬತ್ತಿಬರುವದುಂಟು.

## ೪. ಸ್ವಭಾವದ ಬದಲಾವಣೆ

( Change of Nature, page 321 )

ಸ್ವಭಾವದ ಬದಲಾವಣೆಯು ವಿಷಯದಲ್ಲಿ ಹೇಳುವದೆಂದರೆ ಹಳೆಯ ಮೇಲ್ಭಾಗದ ಸ್ವಭಾವದಿಂದ ದೂರ ಇದ್ದು ಹಾಗೆ ಇದ್ದುದರ ಅರಿವಾಗುವುದೇ ಮೊದಲ ಹೆಜ್ಜೆ. ಏಕೆಂದರೆ ಈ ರಾಜಸಿಕ ಪ್ರಾಣನಿಷ್ಠ ಸ್ವಭಾವವು ಪ್ರಕೃತಿಯ ಮೇಲ್ಭಾಗದ ಸೃಷ್ಟಿಯಾಗಿದ್ದು ಅದು ಎಷ್ಟೇ ಹಟವಾದಿಯೆಂದು ಕಂಡರೂ ಅದು ನಿಜವಾದ ಜೀವಾತ್ಮನಲ್ಲ. ಅದು ಪ್ರಾಣನಿಷ್ಠ ಚಲನವಲನಗಳ ತಾತ್ಪೂರ್ತಿಕ ಸಂಮಿಶ್ರಣ ಮಾತ್ರ. ಅದರ ಹಿಂದೆ, ಚೈತ್ಯಪುರುಷನ ( the psychic ) ಆಧಾರವನ್ನು ಆಶ್ರಯಿಸಿದ ನಿಜವಾದ ಮನೋನಿಷ್ಠ ಪ್ರಾಣನಿಷ್ಠ ಜೀವಾತ್ಮನಿರುವುದುಂಟು. ನಿಜವಾದ ಜೀವಾತ್ಮನು ವಿಶಾಲನೂ, ಮೌನಿಯೂ, ಶಾಂತಿಮಯನೂ ಆಗಿದ್ದಾನೆ. ಈ ಬಗೆಯ ಉಪಸಂಹರಣ ಮತ್ತು ಪ್ರತ್ಯೇಕತೆಗಳ ನೆರವಿನಿಂದ ಅಂತಃಪುರುಷನ ಶಾಂತಿಯಲ್ಲಿ ಇದ್ದುಬಿಡುತ್ತ ಇನ್ನುಮುಂದೆ ಮೇಲ್ಭಾಗದ ಪ್ರಕೃತಿಯೊಂದಿಗೆ ಏಕರೂಪತೆಯನ್ನು ಹೊಂದದಂಥ ಸಾಧ್ಯತೆಯನ್ನು ಜೀವಾತ್ಮನು ನಿರ್ಮಿಸಿಕೊಳ್ಳುತ್ತಾನೆ. ಅನಂತರ, ಚೈತ್ಯಪುರುಷನ ಜ್ಞಾನಾನುಭವ, ಶಾಂತಿ, ಶಕ್ತಿ ಮತ್ತು ಪ್ರಕಾಶಗಳ ಬಲದಿಂದ ಮೇಲ್ಭಾಗದ ಜೀವಾತ್ಮನ ಸ್ಥಿತಿಯನ್ನು ಬದಲಿಸುವದು ಬಹಳೇ ಸುಲಭವಾಗುವದು.

೨೭-೪-೧೯೩೭

## ೫. ಚೇತನದ ಎರಡು ಮೂಲವಸ್ತುಗಳು

(Two Elements of Consciousness, page 322)

ಚೇತನವು ಎರಡು ಮೂಲವಸ್ತುಗಳಿಂದ ಆಗಿದೆ: (೧) ಆತ್ಮ, ಸಂಗತಿ ಹಾಗು ಪ್ರಚೋದಕ ಶಕ್ತಿಗಳ ಎಚ್ಚರ (Awakening); (೨) ಕ್ರತುಶಕ್ತಿ (Conscious-power). ಎಚ್ಚರವು ಮೊದಲನೆಯ ಆವಶ್ಯಕ ಮಾತಾಗಿದೆ. ಸಂಗತಿಗಳನ್ನು ಯಥಾರ್ಥಜ್ಞಾನದಿಂದ ನೋಡುತ್ತ, ಯೋಗ್ಯ ರೀತಿಯಲ್ಲಿ, ಯೋಗ್ಯ ಪ್ರಜ್ಞೆಯಲ್ಲಿ ಅವುಗಳ ಎಚ್ಚರ ನಿನಗಾಗಬೇಕು. ಎಚ್ಚರವು ತಾನೊಂದೇ ಇದ್ದರೆ ಸಾಲದು. ಚೇತನವನ್ನು ಪರಿಣಾಮಕಾರಿಯಾಗಿ ಮಾಡಬಲ್ಲ ಸಂಕಲ್ಪಶಕ್ತಿ-ಕ್ರತುಶಕ್ತಿ ಜೊತೆಗೆ ಬೇಕೇಬೇಕು. ಯಾವುದು ಹೋಗಬೇಕು, ಅದರ ಸ್ಥಳದಲ್ಲಿ ಇನ್ನಾವುದು ಬರಬೇಕು ಎಂಬೀ ಸ್ಥಿತ್ಯಂತರದ ಪೂರ್ಣ ಎಚ್ಚರವು ಇಲ್ಲವೆ ಅರಿವು ಯಾವೊಬ್ಬನಿಗೆ ಇರಬಹುದು; ಆದರೆ ಆ ಸ್ಥಿತ್ಯಂತರಕ್ಕೆ ತಕ್ಕ ಪಲ್ಲಟವನ್ನು ಮಾಡಲು ಅವನು ಅಸಮರ್ಥನಾಗಿರಬಹುದು. ಇನ್ನೊಬ್ಬನು ಕ್ರತುಶಕ್ತಿಯನ್ನು ಪಡೆದಿರಬಹುದು; ಆದರೆ ಅವನಲ್ಲಿ ಯೋಗ್ಯ ಎಚ್ಚರದ ಅಭಾವವಿರುವ ಮೂಲಕ ಅವನು ಯೋಗ್ಯಸ್ಥಳದಲ್ಲಿ, ಯೋಗ್ಯರೀತಿಯಲ್ಲಿ ತನ್ನ ಕ್ರತುಶಕ್ತಿಯ ಅನುಸಂಧಾನ ಮಾಡದೆ ಉಳಿಯಬಹುದು. ಸತ್ಯಚೇತನದಲ್ಲಿ ಅಧಿಷ್ಠಿತನಾಗುವದರಿಂದಾಗುವ ಲಾಭವೆಂದರೆ, ನಿನಗೆ ಯಥಾರ್ಥ ಎಚ್ಚರ ಲಭಿಸಿ, ಆದಿಮಾತೆಯ ಸಂಕಲ್ಪದೊಂದಿಗೆ ಸ್ವಸಂಕಲ್ಪವು ಸಮರಸವಾಗಿ ಸ್ಥಿತ್ಯಂತರಗೈಯಲು ಆದಿಮಾತೆಯ ಶಕ್ತಿಯ ಆವಾಹನವನ್ನು ನೀನು ಮಾಡಬಲ್ಲೆ. ಮನ ಮತ್ತು ಪ್ರಾಣಲೋಕಗಳಲ್ಲಿ ಮಾತ್ರ ಇರಬಲ್ಲವರು ಈ ಕಾರ್ಯವನ್ನೆಸಗಲು ಪೂರ್ಣವಾಗಿ ಸಮರ್ಥರಾಗಲಾರರು. ಬಹುಮಟ್ಟಿಗೆ ಸ್ವಂತ ಪ್ರಯತ್ನದ ಉಪಯೋಗವನ್ನೇ ಅವರು ಮಾಡದೆ ಗತ್ಯಂತರವಿಲ್ಲ. ಮನ ಮತ್ತು ಪ್ರಾಣಗಳ ಲೋಕಗಳಲ್ಲಿ ಎಚ್ಚರ ಹಾಗು ಸಂಕಲ್ಪ-ಶಕ್ತಿಗಳು ವಿಭಕ್ತವೂ ಅಪೂರ್ಣವೂ ಆಗಿರುವದರಿಂದ ಅವರು ಮಾಡಿದ ಕಾರ್ಯ ಅಪೂರ್ಣವೂ ಮತ್ತೆ ಮಾರ್ಪಡಿಸಬಹುದಾದುದೂ ಆಗುವುದುಂಟು. ವಿಜ್ಞಾನ ಅಥವಾ ಅತಿಮಾನಸ (Super-mind) ಲೋಕದಲ್ಲಿ ಮಾತ್ರ ಎಚ್ಚರ ಹಾಗು ಸಂಕಲ್ಪ ಶಕ್ತಿಗಳು ಸದಾಸರ್ವದಾ ಏಕಮಾತ್ರಕ್ರಿಯೆಯಾಗಿ ಮಾರ್ಪಟ್ಟು ಸಹಜವಾಗಿ ಪರಿಣಾಮಕಾರಿಯಾಗಬಲ್ಲವು.

—ಪ್ರಹ್ಲಾದ ನರೇಗಲ್ಲ
(ಅನುವಾದಕ)

ಯಾರು ತಮ್ಮನ್ನು ಒಂದಿನಿಸಾದರೂ ಹಿಂದುಮುಂದು ನೋಡದೆ, ತಮ್ಮ ಅಂಗಾಂಗಗಳಲ್ಲಿಯೂ ಈಶನಿಗೆ ಅರ್ಪಿಸಿಕೊಳ್ಳುವರೋ, ಅವರಿಗೆ ಈಶನೇ ತನ್ನನ್ನು ಕೊಟ್ಟುಕೊಳ್ಳುವನು. ಅಂಥವರಿಗೆ ಶಾಂತಿ, ಪ್ರಕಾಶ, ಶಕ್ತಿ, ಹರ್ಷ, ಸ್ವಾತಂತ್ರ್ಯ, ವಿಶಾಲತೆ, ಜ್ಞಾನದ ಉಚ್ಚಾನುಭವ, ಆನಂದದ ಸಾಗರಗಳು ಸ್ವಾಯತ್ತವಾಗಿರುವವು.

—ಶ್ರೀ ಅರವಿಂದರು

ಓಂ

# ಶ್ರೀ ಅರವಿಂದರ ಯೋಗದ ಸಾಧನಮಾರ್ಗದಲ್ಲಿ

೧

## ಪ್ರಾಥಮಿಕ ಉಪಾಯ-ಚತುಷ್ಟಯ

ತಿಳುವಳಿಕೆ, ಅನುಭೂತಿ, ವಾಸನಾಜಯ, ಕಾಯಕ ಇವು ನಾಲ್ಕೂ ಶ್ರೀ ಅರವಿಂದರ ಯೋಗಕ್ಕೆ ಅಪರಿಹಾರ್ಯ ಉಪಾಯಗಳು.

ಪರಮಾತ್ಮ, ಆತ್ಮ, ಜಗತ್ತು ಈ ಮೂರೂ ತತ್ತ್ವಗಳ ಬಗೆಗೆ ಬುದ್ಧಿಗೆ ಚೆನ್ನಾಗಿ ತಿಳುವಳಿಕೆಯಾಗಲೇಬೇಕು.

ಆ ಮೇಲೆ ಈ ಎಲ್ಲ ಮಾತುಗಳ ಅನುಭೂತಿಯು ಹೃದಯಕ್ಕೆ ಆಗಲೇಬೇಕು.

ಮತ್ತು ಪ್ರಾಣದಲ್ಲಿರುವ ಸರ್ವ ವಾಸನೆಗಳನ್ನು ಸಂಪೂರ್ಣವಾಗಿ ಜಯಿಸಲಿಕ್ಕೇ ಬೇಕು.

ಹಾಗೂ ದೇಹವು ಸತತವಾಗಿ ಕಾಯಕದಲ್ಲಿ ನಿರತವಾಗಿರಲೇಬೇಕು.

ಇಷ್ಟೆಲ್ಲ ಸಾಧಿಸಿದರೆ ಮಾತ್ರ ನಾವು ಶ್ರೀ ಅರವಿಂದರ ಯೋಗಕ್ಕೆ ತಕ್ಕವರಾಗುವೆವು.

* * * * *

ಪರಮಾತ್ಮನು ಇರುವನೋ ಇಲ್ಲವೋ? ಆತ್ಮನನ್ನು ಅರಿಯುವದರ ಅಗತ್ಯವೇನು? ಜಗತ್ತಿನ ಹಿಂದೆ ಗೂಢ ಜಗತ್ತುಗಳಿವೆಯೋ? ಇದ್ದರೆ ಅವುಗಳಿಗೂ ಇದಕ್ಕೂ ಸಂಬಂಧವೇನು? ಮೊದಲಾದ ಪ್ರಶ್ನೆಗಳು ನಮ್ಮ ಬುದ್ಧಿಯನ್ನು ಸದಾ ಕಾಡುತ್ತಲೇ ಇರುವವು. ಇವು ಯಕ್ಷಪ್ರಶ್ನೆಗಳಿದ್ದ ಹಾಗೆ. ಇವುಗಳ ರಹಸ್ಯವನ್ನು ತಿಳಿದುಕೊಳ್ಳದೆ ಗತ್ಯಂತರವೇ ಇಲ್ಲ. ಏಕೆಂದರೆ ಈ ಮಾತುಗಳು ತಿಳಿಯದದ್ದರೆ ಇಂದಿನವರ ಜೀವನರಥವೇ ಮುಂದೆ ಸಾಗುವದಿಲ್ಲ.

ಬುದ್ಧಿಗೆ ತಿಳಿದ ಮೇಲೂ ಅನುಭವಕ್ಕೆ ಬಾರದೆ ಹೋದರೆ ಹೃದಯಕ್ಕೆ ಸಮಾಧಾನವೇ ಆಗುವದಿಲ್ಲ. ಇದಕ್ಕೆ ಧ್ಯಾನ, ಪ್ರಾರ್ಥನೆ ಮೊದಲಾದ ದೈವೀ ಉಪಾಯಗಳೇ ಸಾಧನೆಗಳು. ಅನುಭವ ಕೊಡಿರೆಂದು ಪರಮಾತ್ಮನಿಗೆ ಸತತ ಪ್ರಾರ್ಥಿಸುವದರಿಂದಲೂ, ಚದರಿದ ಚಿತ್ತವನ್ನೆಲ್ಲ

ಏಕೀಕೃತಗೊಳಿಸಿ ಪರಮಾತ್ಮನ ಮೇಲೆ ಸ್ಥಿರಗೊಳಿಸಿ ಮನವನ್ನು ನಿಸ್ತರಂಗಗೊಳಿಸುವದ ರಿಂದಲೂ ಕೆಲಕಾಲಕ್ಕೆ ಅನುಭೂತಿಗಳು ಲಭಿಸುತ್ತ ಬರುವವೆಂಬುದು ಸಹಜವಾಗಿದೆ. ಇದಿಲ್ಲ ದಿದ್ದರೆ ಜೀವನಕ್ಕೆ ಸ್ಥಿರತೆಯೇ ಬರುವದಿಲ್ಲ.

ಇಷ್ಟೆಲ್ಲ ಆಗಿಯೂ ಕೂಡ ಕಾಮಕ್ರೋಧಾದಿ ವಿಕಾರಗಳನ್ನು ಪ್ರಾಣದೊಳಗಿಂದ ಸಂಪೂರ್ಣ ಹೊರದೂಡಿದ ಹೊರತು ಸಂಪೂರ್ಣ ಚಿತ್ತಶುದ್ಧಿಯೇ ಆಗುವದಿಲ್ಲ. ಅದರಿಂದ ಮನುಷ್ಯನು ಸಾಮಾನ್ಯ ಅವಸ್ಥೆಯಲ್ಲಿಯೇ ಉಳಿದುಬಿಡುವನು. ಮನಸ್ಸಿನೊಳಗೆ ವಿಕಾರಗಳು ಬಂದರೂ ಹೊರಗೆ ಕಾರ್ಯರೂಪದಲ್ಲಿ ಬಾರದಂತೆ ಅವುಗಳನ್ನು ತಡೆದು ಬಿಗಿಹಿಡಿಯುವ ನೀತಿವಂತರೇನೋ ಆಗುವದು ನಮಗೆ ಸಾಧಿಸಬಹುದು. ಆದರೆ ಮೂಲತಃ ಮನಸ್ಸಿನೊಳಗೆ ವಿಕಾರಗಳೇ ಬಾರದಂತೆ ಅವುಗಳನ್ನು ನಿರ್ಮೂಲಗೊಳಿಸುವದು ಸುಲಭವಾದ ಕೆಲಸವಲ್ಲ. ಇಷ್ಟು ಮಾಡದಿದ್ದರೆ ಶ್ರೀ ಅರವಿಂದರ ಯೋಗವೇ ಸಾಧಿಸುವದಿಲ್ಲ. ತಿರುಗಿ ಕೇಳಿದರೆ ಶ್ರೀ ಅರವಿಂದರ ಯೋಗದಲ್ಲಿ ಪ್ರಜ್ಞೆಯು ಬಹಳ ಸೂಕ್ಷ್ಮವಾಗುವದರಿಂದ ಒಳ್ಳೆಯ ವೃತ್ತಿಗಳಂತೆ ಕೆಟ್ಟ ವೃತ್ತಿಗಳೂ ಪರಮಾವಧಿಗೆ ಮುಟ್ಟುವ ಸಂಭವವಿರುತ್ತದೆ: ಆಗ ಬರಿ ಬಿಗಿಹಿಡಿಯುವ ನೀತಿ ನಿಯಮವು ತಾಳಿಬಾಳಲಾರದು. ಅಂತಲೇ ಆತ್ಮನು ಅರಳುವ ಆವಶ್ಯಕತೆಯಿರುತ್ತದೆ. ಸೂರ್ಯನು ಉದಯಿಸುವದರಿಂದ ಹೊರಗಿನ ಕತ್ತಲೆಯು ಹೇಗೆ ಹರಿದುಹೋಗುವದೋ, ಹಾಗೆಯೇ ಒಳಗಿನ ಸೂರ್ಯನಾದ ಆತ್ಮನು ಅರಳುವದರಿಂದ ಒಳಗಿನ ಕತ್ತಲೆಯಂತಿರುವ ವಿಕಾರಗಳೆಲ್ಲ ಅಳಿದು ಹೋಗುತ್ತವೆ. ಆತ್ಮಜ್ಞಾನ, ಈಶಕೃಪೆ, ದೃಢನಿರ್ಧಾರ ಇವುಗಳಿಂದ ಮಾತ್ರ ವಿಕಾರಗಳನ್ನು ಸಂಪೂರ್ಣವಾಗಿ ಗೆದೆಯಲಿಕ್ಕೆ ಸಾಧ್ಯವಿರುತ್ತದೆಯೆಂದು ಶ್ರೀ ಅರವಿಂದರು ಸ್ಪಷ್ಟವಾಗಿ ಹೇಳಿದ್ದಾರೆ.

ಮೇಲಾಗಿ ಸತತ ಕಾಯಕದಲ್ಲಿ ನಿರತನಾಗಿರದಿದ್ದರೆ ಒಳಗಿನ ಜ್ಞಾನವನ್ನು ಹೊರಗಿನ ವ್ಯಾವಹಾರಿಕ ಜೀವನದಲ್ಲಿ ಬಳಿಸುವ ಶಕ್ತಿಯು ಲಭಿಸಲಾರದು. ಅರ್ಥಾತ್ ಅದರಿಂದ ಜ್ಞಾನವು ಬಾಹ್ಯದಲ್ಲಿ ಪರಿಣಾಮಕಾರಿಯಾಗುವದಿಲ್ಲ. ಹೊರಗಿನ ಕಾರ್ಯರಾಜ್ಯವನ್ನು ನಡಿಸುವ ದಕ್ಷತೆ ಯಿರದಿದ್ದರೆ ಒಳಗಿನ ಮನೋವಿಕಾರಗಳನ್ನು ಜಯಿಸುವದಕ್ಕೆ ಬೇಕಾಗುವ ತ್ರಾಣ ಹಾಗೂ ಜಿಗಟುತನವು ಕೂಡ ಬರುವದೇ ಇಲ್ಲ. ಹೊರಗಿನ ಕಾಯಕವನ್ನು ಸುವ್ಯಸ್ಥಿತವಾಗಿ ನಡಿಸಿ ಕೊಂಡು ಬರುವ ದೃಢಸಂಕಲ್ಪವಿದ್ದರೆ ಮಾತ್ರವೇ ಒಳಗಿನ ಕಾಮಕ್ರೋಧಾದಿ ಶತ್ರುಗಳನ್ನು ಜಯಿಸುವದಕ್ಕೆ ಬಲವು ಪೂರೈಸುತ್ತದೆ. ಒಳಗಿನ ಬಲಕ್ಕೆ ಹೊರಗಿನ ಬಲವು ಸಹಾಯಕ ವಾಗಿದ್ದರೇನೇ ಕಾರ್ಯಸಿದ್ಧಿಯಾಗುತ್ತದೆ. ಇಷ್ಟೇ ಅಲ್ಲ, ಹೊರಗಿನ ಯಂತ್ರಗಳೆಲ್ಲ ಸಬಲವಾಗಿದ್ದರೆ ಮಾತ್ರವೇ ಒಳಗಿನ ಬಲವು ಇಳಿಯುವದಂತೆ. ಇಲ್ಲದಿದ್ದರೆ ಹೊರಗಿನ ಯಂತ್ರಗಳು ಒಳಗಿನ ಬಲದ ರಭಸಕ್ಕೆ ನುಗ್ಗುನುರಿಯಾಗುವವೆಂದು ಶ್ರೀ ಅರವಿಂದರೂ ಶ್ರೀ ಮಹಾತಾಯಿಯವರೂ ಅನೇಕ ಗ್ರಂಥಗಳಲ್ಲಿ ಹೇಳಿದ್ದಾರೆ. ಸತತ ಕಾಯಕದಿಂದ ಹೊರಗಿನ ಬಲವು ಸಿದ್ಧಿಸುವದು. ಅದರಿಂದ ಒಳಗಿನ ವಿಕಾರಗಳನ್ನು ಜಯಿಸುವದಕ್ಕೂ ಶಕ್ತಿ ಪೂರೈಸುವದು. ಇಲ್ಲದಿದ್ದರೆ ತನ್ನ ವಿಕಾರಗಳನ್ನು ತನಗೇ ಗೆದೆಯುವದಕ್ಕೆ ಆಗದಂತಾಗಿ ಯೋಗದ ಕೊನೆಯ ಸಿದ್ಧಿಗೆ ತಲುಪುವ ವಿಷಯದಲ್ಲಿ ನಿರಾಶೆ ಹುಟ್ಟುವದು.

*   *   *   *   *

ಆದ್ದರಿಂದ ಶ್ರೀ ಅರವಿಂದರ ಯೋಗದಲ್ಲಿ ಮೇಲ್ಕಾಣಿಸಿದ ಯಾವ ಮಾತುಗಳ ಬಗೆಗೂ ಅಲಕ್ಷ್ಯಮಾಡಲಿಕ್ಕೆ ಬರುವಂತಿಲ್ಲ. ಮೇಲ್ಕಾಣಿಸಿದ ನಾಲ್ಕರಲ್ಲಿ ಯಾವವೋ ಒಂದೆರಡನ್ನು ಮಾತ್ರ ಸಾಧಿಸಿ, ಅಷ್ಟರಿಂದಲೇ ಎಲ್ಲಾ ಆಗುವದೆಂಬ ಕಲ್ಪನೆಯೇ ಅನೇಕರಿಗಿರುತ್ತದೆ. ಆದರೆ ಅಷ್ಟರಿಂದ ಸಾಲದೆಂಬುದು ಹಿಂದಿನಿಂದ ಗೊತ್ತಾಗುತ್ತದೆ. ಹೇಗೆಂದರೆ---

ತಿಳುವಳಿಕೆಯ ಬಗೆಗೆ ಅಲಕ್ಷ್ಯ ಮಾಡಿದರೆ ಸಂಶಯವೇ ಸುಡುವದಿಲ್ಲ. ಅನುಭೂತಿ ಲಭಿಸದಿದ್ದರೆ ಸಮಾಧಾನವೇ ಆಗುವದಿಲ್ಲ. ವಾಸನೆಗಳನ್ನು ಜಯಿಸದಿದ್ದರೆ ಸಾರ್ಥಕತೆಯೇ ಎನಿಸುವದಿಲ್ಲ. ಏಕೆಂದರೆ ಅದರಿಂದ ತನ್ನ ಜೀವನವೆ ಹೀನವೆಂದೆನಿಸುವದು. ಕಾಯಕದಿಂದ ಶಕ್ತಿಯನ್ನು ಗಳಿಸದಿದ್ದರೆ ದಾರಿಯೇ ತೋರುವದಿಲ್ಲ, ಏಕೆಂದರೆ ಏನೂ ಜಯಿಸಲಿಕ್ಕಾಗದ ಅಸಹಾಯ ಸ್ಥಿತಿಯು ಅದರಿಂದುಂಟಾಗುವದು.

ಆದರೆ, ತಿಳಿದುಕೊಳ್ಳಬೇಕಾದ ತತ್ತ್ವಗಳನ್ನೆಲ್ಲ ತಿಳಿದುಕೊಂಡರೆ ಬುದ್ಧಿಯು ಶಾಂತವಾಗುತ್ತದೆ. ಅನುಭವಿಸತಕ್ಕ ತತ್ತ್ವಗಳನ್ನೆಲ್ಲ ಅನುಭವಿಸುವದರಿಂದ ಹೃದಯವು ಧೀರಗಂಭೀರವಾಗುತ್ತದೆ. ಜಯಿಸತಕ್ಕ ವಾಸನೆಗಳನ್ನೆಲ್ಲ ಜಯಿಸುವದರಿಂದ ಪ್ರಾಣವು ಪರಿಶುದ್ಧವಾಗುವದು. ಶರೀರವನ್ನು ಸತತ ಕಾಯಕದಲ್ಲಿ ತೊಡಗಿಸುವದರಿಂದ ಅದರ ಮುಖ್ಯ ಗುಣವಾದ ನಿಷ್ಕ್ರಿಯತೆಯೂ, ಆಲಸ್ಯವೂ ಓಡಿಹೋಗುವವು.

ಆದ್ದರಿಂದ ಇವುಗಳಲ್ಲಿ ಯಾವುದೇ ಒಂದನ್ನು ಅಲಕ್ಷಿಸದೆ ನಾಲ್ಕನ್ನೂ ಗಳಿಸಲಿಕ್ಕೇ ಬೇಕು.

*　　*　　*　　*　　*

ತಿಳಿದುಕೊಳ್ಳುವದನ್ನೆಲ್ಲ ತಿಳಿದುಕೊಳ್ಳುವದಕ್ಕೇನೂ ಸ್ವಲ್ಪ ಕಾಲ ಸಾಕಾಗುವದಿಲ್ಲ. ಅನುಭವಿಸುವದಕ್ಕೆ ಅದಕ್ಕಿಂತ ಹೆಚ್ಚು ಕಾಲ ಬೇಕಾದೀತು. ವಾಸನೆಗಳನ್ನು ಜಯಿಸುವದೇನೂ ಸಣ್ಣ ಮಾತಲ್ಲ, ಅದೇನೂ ಒಂದೇ ದಿನದಲ್ಲಾಗುವ ಮಾತಲ್ಲ. ಇದರಂತೆ ದೇಹದ ತಾಮಸಿಕತೆ, ನಿಷ್ಕ್ರಿಯತೆ, ಘೋರ ಆಲಸ್ಯ ಇವೆಲ್ಲ ಮಾಯವಾಗುವ ವಿಷಯವೂ ಸಣ್ಣದೇನೂ ಅಲ್ಲ ಎಂಬುದು ಅದರ ಸಂದರ್ಭ ಬಂದಾಗ ಗೊತ್ತಾಗುವದು.

ಇದಕ್ಕೆಲ್ಲಾ ಪರಮಾತ್ಮನ ಹಾಗು ಆತನನ್ನು ಪಡೆದ ಗುರುವಿನ ಕೃಪೆಯು ಅವಶ್ಯವಾಗಿ ಬೇಕು. ದೀರ್ಘ ಕಾಲಾವಧಿಯು ಬೇಕೆಂಬುದಂತೂ ತಿಳಿದ ವಿಷಯವೇ ಆಗಿದೆ. ಆದ್ದರಿಂದ ಸಾಧಕನಲ್ಲಿ ಅಪರಿಮಿತ ಉತ್ಸಾಹ(ಧೈರ್ಯ) ವಿರಬೇಕೆಂಬುದಂತೂ ಸರಿಯೇ ಸರಿ. ಇದಲ್ಲದೆ ಈ ಮಾರ್ಗದ ಸೂಕ್ಷ್ಮಾತಿಸೂಕ್ಷ್ಮ ವಿವರಗಳನ್ನೆಲ್ಲ ಸ್ವಾನುಭವದಿಂದ ಹೇಳುವ ಕೈಪಿಡಿಯಂತಿರುವ ಶಾಸ್ತ್ರದ ಅವಲೋಕನವೂ ಕೂಡ ಈ ಕಾರ್ಯಕ್ಕೆ ಅತ್ಯಾವಶ್ಯಕವೆಂದು ಶ್ರೀ ಅರವಿಂದರು ನಿರೂಪಿಸಿದ್ದಾರೆ.

ಶಾಸ್ತ್ರ, ಗುರು, ಕಾಲ, ಉತ್ಸಾಹ ಇವೇ ಈ ಯೋಗದ ಸಿದ್ಧಿಗೆ ಸಹಾಯಕಗಳೆಂದು ಶ್ರೀ ಅರವಿಂದರು ಅನೇಕ ಗ್ರಂಥಗಳಲ್ಲಿ ಸವಿವರವಾಗಿ ಸಾರಿದ್ದಾರೆ. ಶ್ರೀ ಅರವಿಂದರ ಯೋಗದ "ನಾಲ್ಕು ಸಹಾಯಕಗಳು" ಎಂದರೆ ಇವೇ ಸರಿ.

ಈ ಶಾಸ್ತ್ರ, ಗುರು, ಕಾಲ, ಉತ್ಸಾಹಗಳ ಸಹಾಯದಿಂದ ಮೇಲೆ ಹೇಳಿದ ತಿಳುವಳಿಕೆ ( ಜ್ಞಾನ ), ಅನುಭೂತಿ ( ಭಕ್ತಿ ), ಕಾಯಕ ( ಕರ್ಮ ), ವಾಸನಾಜಯ ( ಶುದ್ಧಿ ) ಎಂಬವುಗಳನ್ನು ಸಾಧಿಸಿದರೆ ಅದರಿಂದ ಜೀವವು ಅಂತರ್ಮುಖವಾಗಿ ಯೋಗಾವಸ್ಥೆಯು ನಮಗೆ ಸ್ವಾಭಾವಿಕವಾಗಿಬಿಡುವದು. ಆ ಮೇಲೆ ನಮಗೆ ಪತನದ ಭಯವಿಲ್ಲ.

* * * * *

ಆಗ ಸಾಧನವು ನಮ್ಮ ಸ್ವತಃದ ಶಕ್ತಿಯಿಂದ ನಡೆಯುವದಕ್ಕೆ ಪ್ರತಿಯಾಗಿ ಪರಮೇಶ್ವರನ ಅಘಟಿತ ಘಟನ ಪಟೀಯಸೀ ದಿವ್ಯಶಕ್ತಿಯಿಂದ, ಅಂದರೆ ಸ್ವಯಂ ಶ್ರೀ ಜಗನ್ಮಾತೆಯ ದಿವ್ಯಶಕ್ತಿಯಿಂದ ನಡೆಯುವದು. ಉದಾಹರಣಾರ್ಥವಾಗಿ ಶ್ರೀ ಶ್ರೀ ರಾಮಕೃಷ್ಣ ಪರಮಹಂಸರು ಧ್ಯಾನಕ್ಕೆ ಕುಳಿತಾಗ ಯಾವದೋ ಒಂದು ದಿವ್ಯಶಕ್ತಿಯು ಅವರ ಕೈಕಾಲುಗಳ ಸಂದುಸಂದುಗಳನ್ನೆಲ್ಲ " ಖಟ್ ಖಟ್ " ಎಂದು ಕೀಲಿಸಿಬಿಡುತ್ತಿತ್ತಂತೆ. ಹಾಗೆ ಎಷ್ಟೊತ್ತು ಆ ಶಕ್ತಿ ಅವರನ್ನು ಕೀಲಿಸಿಬಿಡುತ್ತಿತ್ತೋ ಅಷ್ಟೊತ್ತೂ ಅವರಿಗೆ ಕುಳಿತ ಸ್ಥಳದಿಂದ ಏಳಲಿಕ್ಕೇ ಬರುತ್ತಿದ್ದಿಲ್ಲವಂತೆ. ಅಷ್ಟೊತ್ತೂ ಧ್ಯಾನವೇ ಧ್ಯಾನ. ಆ ಮೇಲೆ ಪುನಃ ಅದೇ ಪ್ರಕಾರವಾಗಿ " ಖಟ್ ಖಟ್ " ಎಂಬ ಸದ್ದಿನೊಂದಿಗೆ ಸಂದುಗಳೆಲ್ಲ ಬಿಚ್ಚುತ್ತಿದ್ದವಂತೆ!!! ಆಗ ಅವರು ಧ್ಯಾನ ಮುಗಿಸಿ ಎದ್ದು ಬರುತ್ತಿದ್ದರಂತೆ !!!

ಇದೇ ಪರಮೇಶ್ವರನ ದಿವ್ಯಶಕ್ತಿ. ಆದಿ ಜಗನ್ಮಾತೆಯೆಂದರೂ, ಶ್ರೀ ಭವತಾರಿಣೀ ದೇವಿಯೆಂದರೂ ಈ ಮಹಾಮಾತೆಯೇ. ಈ ಮಹಾತಾಯಿಯೇ, ಶ್ರೀ ಜಗದಂಬೆಯೇ ಆಗ ಕೈಹಿಡಿದು ನಮ್ಮ ಸಾಧನವನ್ನು ನಡೆಯಿಸುವಳು. ಆ ಮೇಲೆ ನಮಗೆ ಭಯವೇತರದು? ನಿರ್ಭೀತರಾಗಿ ನಾವು ಸಾಧನಪಥದಲ್ಲಿ ಸಾಗಬಲ್ಲೆವು. ಇದೇ ಶ್ರೀ ಅರವಿಂದರ ಯೋಗದ ಸಾಧನೆಯ ಮುಖ್ಯ ರಹಸ್ಯ. ಸಮರ್ಪಣವೇ ಶ್ರೀ ಅರವಿಂದರ ಯೋಗದ ಬೀಗದ ಕೈಯಾಗಿದೆ ಎಂಬ ಮಾತಿನ ಅರ್ಥವಾದರೂ ಇದೇ ಆಗಿದೆ.

ಓಂ । ಜಗತಃ ಪಿತರೌ ವಂದೇ
ಪರಮೇಶ್ವರೀ ಪರಮೇಶ್ವರೌ ॥
ಓಂ ಶ್ರೀ ಓಂ

ಶ್ರೀ ಮಾತೃಶ್ರೀ ಚರಣಾಶ್ರಿತ ಶಿಶು
**ಮಧುರಚೆನ್ನ,** ಹಲಸಂಗಿ

ಅಂತಃಕರಣದಿಂದ ಬೇಡುವವರಿಗೆ ಕೃಪೆಯೂ ಸಹಾಯವೂ ಸಿದ್ಧವಾಗಿವೆ. ಶ್ರದ್ಧೆಯಿಂದಲೂ ಆತ್ಮವಿಶ್ವಾಸದಿಂದಲೂ ಅವನ್ನು ಪಡೆದವರ ಶಕ್ತಿಯು ಅಮಿತವಾಗಿರುವುದು.

—**ತಾಯಿಯವರು**

# ಸಾಧನ-ಚತುಷ್ಟಯ

(ಶ್ರೀ ಅರವಿಂದರ **The Synthesis of Yoga** [ಯೋಗಸಮನ್ವಯ] ಗ್ರಂಥದ ೧ನೆಯ ಅಧ್ಯಾಯವೆ ಈ ಲೇಖನಕ್ಕೆ ಆಧಾರವಾಗಿದೆ. ಅಲ್ಲಲ್ಲಿ ಉದಾಹರಿಸಿದ, ಅವತರಣಚಿಹ್ನಗಳೊಳಗಿನ ಮಾತುಗಳು ಶ್ರೀ ಅರವಿಂದರ ವಾಕ್ಯಗಳ ಅನುವಾದಗಳಾಗಿವೆ.)

## ೧. ಶಾಸ್ತ್ರ

"ಶಾಸ್ತ್ರವು ಹೊರಗಿನಿಂದ ಬರತಕ್ಕುದಲ್ಲ. ಅದು ಒಳಗೇ ಇದೆ. ಅದು ನಮ್ಮ ಹೃತ್ಕಮಲ ದಲ್ಲಿದ್ದ ಸನಾತನ ವೇದವು."

ಕಟ್ಟಿಟ್ಟ ಮಾರ್ಗಗಳಿಂದ, ನಿರ್ಣೀತ ಪದ್ಧತಿಗಳಿಂದ ಯೋಗದಲ್ಲಿ ಪ್ರವೇಶ ಮಾಡ ಬೇಕಿಲ್ಲವೆಂದು ಇಲ್ಲಿ ಶ್ರೀ ಅರವಿಂದರು ಪ್ರತಿಪಾದಿಸುವರು. ಅದು ಹೇಗೋ ಸಾಗುವದು. ಹೇಗೋ ಎಂದರೆ ಅಜ್ಞಾನದಿಂದ ಎಂದಲ್ಲ. ಎಂದರೆ ಪ್ರತಿಜ್ಞಾತ ಮಾರ್ಗದಿಂದಲ್ಲವೆಂದು ಅದರ ಅರ್ಥ. ಹೀಗೆ ನಡೆದರೇ ಮುಟ್ಟುವಿ, ಹಾಗೆ ನಡೆದರೇ ಮುಟ್ಟುವಿಯೆಂದು ಪ್ರತಿಜ್ಞೆಯನ್ನು ಮಾಡುವ ಶಾಸ್ತ್ರಗಳಿಂದಲೇ ಸಾಗಬೇಕಿಲ್ಲವೆಂದು ಅದರ ಅರ್ಥ. ಪ್ರತಿಜ್ಞೆಗಳ ಪ್ರಾಂತವನ್ನು ಅತಿಕ್ರಮಿಸಿ, 'ನೀನು ಬಗೆಗೆ ಹರಿಯಲೊಲ್ಲೆ, ವಿಚಾರದ ಸೆರೆಗೆ ದೊರೆಯಲೊಲ್ಲೆ ದೇವ ರಾಯಾ!' ಎಂದು ಶರಣುಹೋದಾಗಲೇ ಆ ಹಾದಿ ಹೊಳೆಯುವುದೆಂದು ಅವರ ಅಭಿಪ್ರಾಯ. ಎಂದರೆ ವಿಚಾರಗಳ ಆಚೆಗೆ ಇದ್ದ ತತ್ತ್ವವನ್ನು ವಿಚಾರಶಕ್ತಿಯನ್ನೇ ಪ್ರಧಾನವಾಗಿಟ್ಟುಕೊಂಡ ಸಾಧನಸಾಮುಗ್ರಿಯಿಂದ ಪಡೆದುಕೊಳ್ಳುವುದು ಅಸಾಧ್ಯವಾದುದರಿಂದ, ಯೋಗವನ್ನು—ಎಂದರೆ ಆ ತತ್ತ್ವವನ್ನು ನಮ್ಮದನ್ನಾಗಿಸುವ ಸಾಧನವನ್ನು, ನಮ್ಮ ಮರ್ಯಾದಿತ ಬೌದ್ಧಿಕ ಶಕ್ತಿಯ ಆಚೆಗಿರುವ ಹೆಚ್ಚಿನ ಶಕ್ತಿಯಿಂದ ಅಭಿಪ್ರೇರಿತವನ್ನಾಗಿ ಮಾಡಬೇಕೆಂದು ಅವರನ್ನುವರು. ಎಂದರೆ ಸಂಪೂರ್ಣ ಶರಣಭಾವವೇ ಅಲ್ಲಿ ಎಲ್ಲಕ್ಕೂ ದೊಡ್ಡದಾದ ಸಾಧನ. ಅಂತೆಯೇ—

"ಅನಂತವನ್ನು ಸ್ವೀಕರಿಸುವವರು ಅನಂತದಿಂದ ಸ್ವೀಕೃತರಾಗುವರು"

ಎಂದು ಅಮೋಘವಾಗಿ ನುಡಿದಿರುವರು. ಎಂದರೆ ಶರಣಭಾವವುಳ್ಳವರಿಗೆ, ಅರಿತು ಮೊರೆ ಹೋದವರಿಗೆ, ತಮ್ಮ ಅಳವಿನ–ಅಳತೆಯ ಆಚೆಯದು ಎಂದು ತಿಳಿದು ಕೈಮುಗಿದವರಿಗೆ ಅದು ಅಂಗೈನೆಲ್ಲಿಯಾಗುವುದೆಂದು ಹೇಳುವರು. ಆದರೆ ವಿಚಾರದ ಆಚೆಗಿರುವುದನ್ನು ಹೇಗೆ ಹುಡು ಕಲಿ? ಎಲ್ಲಿ ಹುಡುಕಲಿ? .... ಹಾಗಾದರೆ, ಅದನ್ನು ಹೊರಗೆ ಹುಡುಕಬೇಕಿಲ್ಲ. ಅದು ಒಳಗೇ ಇದೆ. ಅದು ನಿನ್ನೊಳಗೇ ಇದೆ. ಆಳವಾಗಿ ಮುಳುಗಿ ನೋಡು. ಹೃತ್ಕಮಲದಲ್ಲಿ ನಾದ ಬ್ರಹ್ಮನು ವೇದಗಾನವನ್ನು ಮಾಡುತ್ತಿರುವನು.

ಅಂತೂ ಯೋಗವು ಹೆಚ್ಚಾಗಿ—ಏಕೆ ಪೂರಾ ಆಂತರಿಕವಾದುದೇ ಎಂದು ಶ್ರೀ ಅರವಿಂದರ ಸಿದ್ಧಾಂತವು.

*    *    *    *    *

“ಈ ಗುಟ್ಟು ಪ್ರಕಟವಾಗುವುದು ಬಹುಶಃ ಶಬ್ದಮುಖಾಂತರವಾಗಿ. ಆ ಶಬ್ದವು ಒಳಗಿನಿಂದಲೂ ಸ್ಫುರಿಸಬಹುದು; ಹೊರಗಿನಿಂದಲೂ ಬರಬಹುದು. ಹೇಗಾದರೂ ಅದು ಎದೆಯಲ್ಲಿ ಅವಿತುಕೊಂಡ ವೇದವನ್ನು ಹೊರಗೆ ತರಲು ಒಂದು ಸಾಧನವೇ ಸರಿ.”

ಇಲ್ಲಿ ಒಂದು ಮಾತು ಸ್ಪಷ್ಟವಾಯಿತು. ಗುರುವಿನ ಅನುಗ್ರಹವಿಲ್ಲದೆ ಯೋಗಮಾರ್ಗದಲ್ಲಿ ಪ್ರವೇಶವಿಲ್ಲವೆಂಬ ವಾದಕ್ಕೆ ಇಲ್ಲಿ ಆಸ್ಪದವಿಲ್ಲವೆಂದಾಯಿತು. ಆತನು ಇಳಿದುಕೊಳ್ಳಲೆಂದು ಎದೆಯ ಕೋಣೆಯನ್ನು ತೆರವುಮಾಡಿದವರ ಮೇಲೆ, ಆತನ ಲೀಲಾಕಾರ್ಯದಲ್ಲಿ ಲೀಲೆಯಿಂದ ಪಾಲುಗಾರರಾದವರ ಮೇಲೆ ಆತನು ನಿಸ್ಸೀಮ ಮಮತೆಯುಳ್ಳವನು; ಭಕ್ತರು ದಂದುಗಕ್ಕೀಡಾದಾಗ ಪ್ರೇಮಲ ಗುರುಮೂರ್ತಿಯಾಗಿ ತೋರಿಯೇ ತೋರುವನು; ಗುರುಶಿಷ್ಯ ಸಂಬಂಧವು ಒಂದು ಬಗೆಯ ಅತಿ ಕೋಮಲವಾದ ಗೆಳೆತನದ ಸಂಬಂಧವು; ಇದೆಲ್ಲ ನಿಜ. ಆದರೆ ಅಧ್ಯಾತ್ಮದೀಕ್ಷಾಪೇಕ್ಷಿಗೆ ನಿಯತಗುರುವೆಂಬ ದೀಕ್ಷಿತನು ಇದ್ದೇ ತೀರಬೇಕೆಂಬ ಸ್ಥೂಲವಾದ ಆಗ್ರಹವು ಶ್ರೀ ಅರವಿಂದರಿಗೆ ಸಮ್ಮತವಿಲ್ಲ. ಆದರೆ—

“ಗ್ರಂಥದ ಅಥವಾ ಗುರುವಿನ ವರ್ಚಸ್ಸಕ್ಕೆ ಒಳಗಾಗದೆ, ಒಳಗಿನ ಒಳೆಯ-ಒಡೆಯನಿಂದಲೇ ಆದೇಶವನ್ನು ಪಡೆದುಕೊಂಡು ಸಾಗುವವರು ತೀರ ಕಡಿಮೆ.”

ಎಂದು ಅವರೂ ಒಪ್ಪಿಕೊಳ್ಳುವರು.

“ಗ್ರಂಥದಿಂದಾಗಲಿ, ಗುರುಮುಖದಿಂದಾಗಲಿ ಪಡೆದ ಬೋಧೆಯನ್ನು ನಂಬಿ ನಡೆಯುವವರು ತಮ್ಮ ಮರ್ಯಾದಿತ ಕ್ಷೇತ್ರದಲ್ಲಿ ಅಸ್ಖಲಿತವಾಗಿ ನಡೆಯುವರು.”

ಇಂತು, ಗುರುವು ಅಪರಿಹಾರ್ಯನಲ್ಲವೆಂದು ಸೂಚ್ಯವಾಗಿ ಮಂಡಿಸಿ, ದ್ವಿವಿಧವಾದ ಶಾಸ್ತ್ರಗಳಿಗೆ ಅಸಂಪೂರ್ಣ ಜ್ಞಾನದಿಂದ ಕೊಡುವ ಅವಾಸ್ತವ ಮಹತ್ತ್ವವನ್ನು ಸ್ಪಷ್ಟವಾದ ಶಬ್ದಗಳಲ್ಲಿ ಅಲ್ಲಗಳೆಯುವರು.

## ಶಾಸ್ತ್ರವು ದ್ವಿವಿಧ :—

೧. ಗೀತೆ, ಉಪನಿಷತ್ತು, ವೇದ (ಕ್ರಿಸ್ತವೇದ, ಕುರಾಣ) ಮೊದಲಾದ ಧರ್ಮಗ್ರಂಥಗಳು.

೨. ಹಠ-ರಾಜಪ್ರಮುಖ ನಿರ್ದಿಷ್ಟ ಪದ್ಧತಿಗಳುಳ್ಳ ಯೋಗಮಾರ್ಗಗಳು. ಭಕ್ತಿ, ಜ್ಞಾನ, ಕರ್ಮ ಮೊದಲಾದ ಪಂಥಗಳು.

(೧) “ಪೂರ್ಣಯೋಗದ ಸಾಧಕನು ಶಾಸ್ತ್ರವನ್ನು ಬಳಸಿಕೊಳ್ಳುವನೇ ಹೊರತು ಶಾಸ್ತ್ರದಿಂದ ಕಟ್ಟಿಸಿಕೊಳ್ಳುವವನಲ್ಲ............ಅದೆಷ್ಟೇ ಅಧಿಕಾರಸಂಪನ್ನನಿರಲಿ, ಅದು ಆ ಸನಾತನ ವೇದದ ಒಂದು ಅಂಗಮಾತ್ರವೆಂಬುದನ್ನು ಅವನು ಬಲ್ಲನು.”

ಗೀತೋಪನಿಷದಾದಿ ಗ್ರಂಥಗಳು ಯುಗಯುಗಾಂತರಗಳಲ್ಲಿಯ ಶ್ರೇಷ್ಠರ ಅನುಭವದ ಗ್ರಂಥಿಗಳಾಗಿರುವದರಿಂದ, ಅವರ ಹೆಜ್ಜೆಯಲ್ಲಿ ಹೆಜ್ಜೆಯನ್ನು ಇಡಬೇಕೆನ್ನುವವರು ಅವರ ಮಾತುಗಳಿಂದ ದಾರಿ ತಿಳಿದವರಾಗಿ ಮುಂದೆ ಸಾಗುವರೆಂಬುದು ನಿರ್ವಿವಾದವಾಗಿದೆ. ಶ್ರೀ ಅರವಿಂದರು ಅವುಗಳ ಹೆಚ್ಚಳವನ್ನು ತುಸುವಾದರೂ ಹೀಗಳೆಸುವುದಿಲ್ಲ. ಅವು ಅನುಭವದ ಕೆಚ್ಚಾಗಿರುವವಾದರೆ ಅವುಗಳಲ್ಲಿಯ ಅನುಭವವು ತಮ್ಮ ಅನುಭವಕ್ಕೆ ಬರಬೇಕಲ್ಲ! ಶ್ರೀ ಅರವಿಂದರು ಕೇಳಿಕೆ-ಕಲಿಕೆಗಳಿಗಿಂತ ಅನುಭವಕ್ಕೆ ಹೆಚ್ಚಾದ ಪ್ರಶಸ್ತಿಯನ್ನೂ ಪ್ರಾಧಾನ್ಯವನ್ನೂ ಕೊಡುವರು. ಈ ಮಾತನ್ನು ಉಳಿದವರು ಒಪ್ಪುವುದಿಲ್ಲವೆಂತಲ್ಲ. ಆದರೆ ಗಟ್ಟಿಗೆ ಹಚ್ಚುವಾಗ ಎಲ್ಲಿಯೋ ಬಹುಜನಸಮಾಜವು ಹಿಂಜರಿಯುವುದೆಂಬುದನ್ನು ನಾವು ಬಲ್ಲೆವು. ಅದೇಕೆ? ಆ ಗ್ರಂಥ ಹೆಚ್ಚು, ಈ ಪಂಥ ಹೆಚ್ಚು; ಆ ಮತ ಹೆಚ್ಚು, ಈ ಮಠ ಹೆಚ್ಚು—ಹೀಗೆ ಹೋರಾಡುವ ಮಂದಿಗಳಿಗೆ ಅವೆಲ್ಲಿ ಕೊರತೆ? ಆದರೆ ಇಲ್ಲಿ ಸ್ಪಷ್ಟವಾದ ಒಂದು ವಿಚಾರದ ರೀತಿ ಸಮಾಜದ ಎದುರಿಗೆ ಬರಬೇಕಾಗಿದೆ.

"ಅನೇಕ ಶಾಸ್ತ್ರಗಳ ಸಂಪತ್ತಿಯಿಂದ, ಹಿಂದಿನವರ ಅನುಭವದಿಂದ ತನ್ನ ಬೊಕ್ಕಸವನ್ನು ತುಂಬಿಸಿಕೊಳ್ಳಲಿ; ಆದರೆ 'ಶಬ್ದ'ದ ಎಲ್ಲೆಯನ್ನು ದಾಟಿ ಆತನು ತಾನಿದ್ದಲ್ಲಿಯೇ ಬರಬೇಕು,—ಅಥವಾ ಯಾವಾಗಲೂ ತನ್ನೊಳಗೆ ತಾನಿದ್ದುಕೊಳ್ಳಬೇಕು ಎಂಬುದನ್ನು ಪೂರ್ಣಯೋಗಕ್ಕೆ ಹೊತ್ತುಕೊಂಡವನು ಮರೆಯಬಾರದು. . . . . . . 'ಶಬ್ದಬ್ರಹ್ಮಾತಿವರ್ತತೇ॥' ಯೋಗಿಯು ಶಬ್ದಬ್ರಹ್ಮವನ್ನು ದಾಟಿ ನಿಂತಿರುವನು. ಆತನು ಒಂದೇ ಪುಸ್ತಕದ ಸಾಧಕನಲ್ಲ, ಆದರೆ ಅನಂತದ ಸಾಧಕನು.''

ಎಂದರೆ ಗ್ರಂಥರಾಜರಿಂದ ಸೂಚನೆಗಳನ್ನೆಷ್ಟೋ ಪಡೆದುಕೊಂಡರೂ ತಮ್ಮೊಳಕ್ಕೆ ಶೋಧಿಸುವುದೇ--ತಾವೇ ತಿಳಿದುಕೊಳ್ಳುವುದೇ ಹೆಚ್ಚಾಗಿ ಇದೆ; ಆದುದರಿಂದ ಹೊರಗೋಟೆಯ ಹೊರಗೆ ಬಹಳ ಕಾಲ ನಿಲ್ಲದೆ ಬೇಗ ಒಳಗೆ ಬನ್ನಿರಿ--ಒಳಗಿನ ಒಡೆಯನನ್ನು ತಿಳಿದು ಪೂಜಿಸಿರಿ-- ಎಂದು ಶ್ರೀ ಅರವಿಂದರು ಕರೆಯುತ್ತಿರುವರು.

(೨) ನಮ್ಮ ಯೋಗಪಂಥಗಳು ಪುರಾತನಕಾಲದಿಂದ ಬರೆದುಬಂದುವಾಗಲಿ, ತಲೆಯಿಂದ ತಲೆಗೆ ಇಳಿದುಬಂದುವಾಗಲಿ ಇವೆ. ಅವುಗಳ ಸಾಧನಕ್ರಮವು, ಪ್ರಕ್ರಿಯೆಗಳು ಹೀಗೇ ಎಂದು ಗೊತ್ತಾಗಿವೆ. ಕೊರೆದ ಗೆರೆಗಳಗುಂಟ ಸಾಗಿಯೇ ತೀರಬೇಕು ಆಯಾ ಸಂಪ್ರದಾಯದ ಅನುಯಾಯಿಗಳು. ಅನೇಕ ಶತಮಾನಗಳ ಅನುಭವವು ಅವುಗಳಲ್ಲಿ ಕ್ರೋಡೀಕೃತ-ಕೇಂದ್ರೀಕೃತವಾಗಿರುವುದರಿಂದ, ಅವುಗಳ ಬೆಲೆಯು ಅಷ್ಟಿಷ್ಟಲ್ಲ. ಆದರೂ ಅವುಗಳ ಹಿಂದಿನ ಮೂಲತತ್ತ್ವಗಳನ್ನು ತಳಹದಿಯಾಗಿಟ್ಟುಕೊಂಡು, ಪ್ರಕ್ರಿಯೆಗಳಲ್ಲಿ ತಮಗೆ ಅನುಕೂಲಿಸುವಂತೆ ಪಲ್ಲಟವನ್ನು ಮಾಡಿಕೊಳ್ಳಲು ಬರುವುದೆಂದು ಎಲ್ಲ ಸಾಧಕರೂ ಬಲ್ಲರು. . . . . ಎಂಬೀ ಮೊದಲಾದ ಮಾತುಗಳನ್ನು ಹೇಳಿ, ಶ್ರೀ ಅರವಿಂದರು ಹೊಸ ಯೋಗಸಾಧಕನ ವಿಷಯವಾಗಿ—

"ಪೂರ್ಣಯೋಗವು ಲಿಖಿತ-ಸಾಂಪ್ರದಾಯಿಕ ಶಾಸ್ತ್ರಗಳ ಯಾವ ಕಟ್ಟುಗಳಿಂದಲೂ ಕಟ್ಟಿಸಿಕೊಳ್ಳಲಾಗದು. ಹಿಂದಿನದನ್ನು ಜೀರ್ಣಿಸಿಕೊಂಡು ಅದು ಇಂದಿನ-ಮುಂದಿನ ಸೃಷ್ಟಿಗೆ ಅನುರೂಪವಾಗಿರುವ ಸೌಕರ್ಯಗಳನ್ನು ಮಾಡಿಕೊಳ್ಳುವದು. ಅಲ್ಲಿ ಅನುಭವಕ್ಕೆ ಅಪ್ರತಿಹತ

ವಾದ ಸ್ವಾತಂತ್ರ್ಯವು ಬೇಕು. ಅಲ್ಲಿ ಹಳೆಯ ಜ್ಞಾನವನ್ನು ಹೊಸ ಮೂಸೆಗಳಲ್ಲಿ ಮಾರ್ಪಡಿಸಿಕೊಳ್ಳಲು ಅನುವಿರಬೇಕು. ಕಟ್ಟಿಟ್ಟ ರಾಜಮಾರ್ಗಗಳಿಂದ ಹೋಗಲೊಗ್ಗದೆ, ಪೂರ್ಣಯೋಗಸಾಧಕನು ಕಟ್ಟಡವಿಯಲ್ಲಿ ತನ್ನ ಹಾದಿಯನ್ನು ತಾನೇ ಕಡಿದುಕೊಳ್ಳಲು ಬೇಕು. ನಮ್ಮ ದೈನಂದಿನ ಜೀವನದಿಂದ ನಿವೃತ್ತವಾದ ಯೋಗವನ್ನು ನಾವು ಮತ್ತೆ ನಮ್ಮ ಬಾಳುವೆಯ ಹೊಳೆಗೆ ಬಾಯ್ಗೂಡಿಸಬೇಕಾಗಿದೆ."

ಎಂದು ತಮ್ಮ ಅಭಿಪ್ರಾಯವನ್ನು ಹೇಳಿರುವರು.

ಉಪಲಬ್ಧವಾಗಿರುವ ಯೋಗಪದ್ಧತಿಗಳಲ್ಲಿ ಸಾಧಕನ ಮೂಲಸ್ವಭಾವದ ಗುಣ-ವೈಗುಣ್ಯ ಗಳಿಗೆ ಪ್ರಾಧಾನ್ಯವಿಲ್ಲವಾದರೆ, ಪೂರ್ಣಯೋಗವು ಅದಕ್ಕೆ ತುಂಬಾ ಲಕ್ಷ್ಯವನ್ನು ಕೊಡುವುದು. ನನ್ನ ಸ್ವಾಭಾವಿಕವಾದ ಮನೋಧರ್ಮಗಳು—ನನ್ನ ಮೂಲಪ್ರಕೃತಿಯ ನೈಜವೃತ್ತಿಗಳು ಹೀಗೆ ಹೀಗೆ ಇರುವವೆಂದ ಮೇಲೆ, ಮತ್ತು ನನ್ನ ಜೀವಮಾನದ ಕೊನೆಯ ಗುರಿಯನ್ನು ಕಂಡು ಕೊಳ್ಳುವೆನೆಂದು ಒಮ್ಮೆ ಆಗ್ರಹವನ್ನು ತೊಟ್ಟಿರುವೆನೆಂದ ಮೇಲೆ, ನನಗೆ –ನನ್ನ ಸ್ವಭಾವಕ್ಕೆ — ನನ್ನ ಪ್ರಕೃತಿಗೆ ಅನುರೂಪವಾಗಿರುವ ಹಾದಿಯು ನನ್ನದೆಂದು ಒಂದು ಪ್ರತ್ಯೇಕವಾಗಿ ಇರಲೇಬೇಕು. ವಿವಿಧ ಯೋಗಶಾಸ್ತ್ರಗಳು **ನನ್ನಲ್ಲಿಯ** ಸುಪ್ತಶಕ್ತಿಗಳನ್ನು ಎಚ್ಚರಿಸಲಿಕ್ಕೆ— **ನನಗೆ** ಅನುಕೂಲವಾಗಿ **ನನ್ನೊಳಗಿನ** ಗುಣಗಳನ್ನು ಪ್ರಕರ್ಷಕ್ಕೆ-ಪರಾಕಾಷ್ಠೆಗೆ ಒಯ್ಯ ಲಿಕ್ಕೆ ಇವೆಯಲ್ಲದೆ, ನನ್ನ ಸ್ವಭಾವಧರ್ಮವನ್ನು ಗೌಣವಾಗಿ ಭಾವಿಸಿ ನನ್ನನ್ನು ಯಾವುದೋ ಒಂದು ದೂರದ ಧ್ಯೇಯಸಾಧನೆಗಾಗಿ ಸಜ್ಜುಗೊಳಿಸಲಿಕ್ಕೆಯಲ್ಲ. ನಾವಿದ್ದಂತೆಯೇ ನಮ್ಮನ್ನು ಆತನ ಶಕ್ತಿಯ ಅವತಾರಕ್ಕೆ ಪಾತ್ರವನ್ನಾಗಿಸಿದರಾಯಿತು. ನಮ್ಮನ್ನು ತನ್ನ ಕಾರ್ಯಕ್ಕೆ ಯೋಗ್ಯರನ್ನಾಗಿ ಮಾಡಲಾರದಷ್ಟು—ನಮ್ಮಲ್ಲಿ ತಕ್ಕ ಮಾರ್ಪಾಟುಗಳನ್ನು ಮಾಡಿ ನಮ್ಮನ್ನು ನಿರ್ದುಷ್ಟ ಯಂತ್ರಗಳನ್ನಾಗಿ ಮಾಡಲಾರದಷ್ಟು—ಆ ನಮ್ಮ ಅಂತರ್ಯಾಮಿದ ಯಂತ್ರಿ ಯೇನು ದುರ್ಬಲನೇ ? ಅಚತುರನೇ ? ಹಾಗೆಂದು ಶ್ರೀ ಅರವಿಂದರು ಹೇಳುವರು :- -

"ಈ ಯೋಗದಿಂದ ನಾವು ಅನಂತವನ್ನು ಹುಡುಕುವೆವಲ್ಲದೆ ಅನಂತವನ್ನು ನಮ್ಮ ಜೀವಿತದಲ್ಲಿ ಒಡಮೂಡಲು ಕರೆಯುವೆವು. ಆದುದರಿಂದ ನಮ್ಮ ಯೋಗಶಾಸ್ತ್ರವು ಗ್ರಹಣ ಶೀಲನಾದ ಸಾಧಕಜೀವನಿಗೆ ಅನಿರುದ್ಧ ಸ್ವಾತಂತ್ರ್ಯವನ್ನು ಕೊಡುವುದು. . . . . ಸ್ವಭಾವದ ಅಳವಿನ ಆಚೆಗೆ ಇದ್ದುದರ ಕಡೆಗೆ ಕೈಚಾಚಿರಬೇಕು, ಆದರೆ ಸ್ವಭಾವದ ಅನುರೋಧವನ್ನು ಬಿಟ್ಟಿರಬಾರದು; ಹೀಗೆ ತನ್ನದೊಂದು ಯೋಗಪಥವನ್ನು ಪ್ರತಿ ಮಾನವನು ಕಂಡು ಕೊಂಡಂದು ಪೂರ್ಣಯೋಗವು ಪೂರ್ಣತ್ವವನ್ನು ಮುಟ್ಟೀತೆಂದು ಹೇಳಬಹುದು."

## ೨. ಉತ್ಸಾಹ

ಪರಮಾತ್ಮನನ್ನು ಪಡೆದೇ ತೀರೇನೆಂದು ಕಸಿವಿಸಿ ಬೇಕು. ಅತೀಂದ್ರಿಯವನ್ನು ಕಂಡೇ ಬಿಟ್ಟೇನು—ಅನುಮಾನಕ್ಕೆ ನಿಲುಕದ ಆ ನಿರತಿಶಯ ಸುಖವನ್ನು ಉಂಡೇ ಬಿಟ್ಟೇನು, ಎಂಬ ವ್ಯಾಕುಲತೆ ಬೇಕು. ಯೋಗವೆಂದರೆ ನಾವಿದ್ದ ಈಗಿನ ಜೊಳ್ಳು ಬಾಳುವೆಯನ್ನು ಇಡಿಯ ವಕ್ಕಿಡೀ ಪಲ್ಲಟಗೊಳಿಸುವ ಸಾಧನಕ್ರಮ; ನಾವೇ ಬ್ರಹ್ಮನ ಮಾನಸಪುತ್ರರೆಂದು ಬಗೆಯುತ್ತ

ಹೊರಹೊರಗಿನ ಹುರುಳಿಲ್ಲದ ಕೆಲಸಗಳಲ್ಲಿ ಹಿಗ್ಗು ಪಡೆಯುವುದನ್ನು ಬಿಟ್ಟು, ಮೇಲ್ತರಗತಿಯ ಶಕ್ತಿಯನ್ನು ಅವಲಂಬಿಸಿ, ಅದರ ಅನುಸಂಧಾನದಿಂದ ಹೊಸಬರಾಗಿ ಜೀವಿಸುವ ವಿಧಾನ. ಇದು ಕೈಗೂಡಬೇಕಾದರೆ—ಎಂದರೆ ಇಂಥ ಅಮೃತದ ಉಣಿಸು ಲಭಿಸಬೇಕಾದರೆ ಅದಕ್ಕಂಥ ಹಸಿವು ಬೇಕು. ಅದರ ದರ್ಶನಕ್ಕಾಗಿ ಊರ್ಧ್ವಮುಖಿಯಾದ ಜ್ವಾಲೆಯಂತೆ ಜೀವವು ಏಕಾಗ್ರ ವಾಗಿ ತಪಿಸಬೇಕು.

ಶ್ರೀ ಅರವಿಂದರು ಇಲ್ಲಿ ಹೊಸದನ್ನೇನು ಹೇಳಿದರು? ಪರಮಾತ್ಮಪ್ರಾಪ್ತಿಗಾಗಿ ಜೀವವು (ನೀರಿನ ಒಳಕ್ಕೆ ಯಾರನ್ನಾದರೂ ಒತ್ತಿಹಿಡಿದರೆ ಆ ಬಡ ಮನುಷ್ಯನ ಗತಿಯಾಗುವಂತೆ) ತಗುಮಿಗುಗೊಂಡು ಉಸುಲುಗಟ್ಟಿದಂತಾಗುವ ವರೆಗೆ **ಆತನು** ಸನಿಯಾಗುವದಿಲ್ಲೆಂಬ ಮಾತಿಗೆ ಹಿಂದಿನ ನಮ್ಮ ಋಷಿಗಳ ಎಷ್ಟು ದೃಷ್ಟಾಂತಗಳು ಸಾಕಿಲ್ಲ? ಎಷ್ಟು ಹೊತ್ತಿಗೆಗಳು ಸಾಕ್ಷಿ ಯಾಗಿಲ್ಲ? ಆದರೆ ಈ ಮಾತನ್ನು ಹೇಳಿ ಇದರ ಮುಂದೆ ಅವರು ಹೇಳುವ ಮಾತಿನಿಂದ ಅವರ ಹೊಸತನವು ಕಂಡುಬರುವುದು. ಅದನ್ನಾದರೂ ಅವರು ಹೊಸದಾಗಿಯೇ (ಎಂದರೆ ಹಿಂದೆ ಯಾರೂ ಎಂದೂ ಹೇಳಿಲ್ಲವೆಂಬರ್ಥದಲ್ಲಿ) ಹೇಳಿಲ್ಲ. ಶ್ರೀ ಅರವಿಂದರ ನಿರೂಪಣದ ವೈಶಿಷ್ಟ್ಯ ವೆಂದರೆ ಇಷ್ಟು—ಹಿಂದಿನ ದರ್ಶನಕಾರರೂ ಸಂಪ್ರದಾಯಪ್ರವರ್ತಕರೂ ತಮ್ಮ ಪ್ರೀತಿಯ ಮಾತುಗಳನ್ನು ವಿಸ್ತರಿಸಿ ಹೇಳುವುದರಲ್ಲಿ ಯಾವ ಕೆಲ ಸತ್ಯಗಳನ್ನು ವಿರಲವಾಗಿ ಉಚ್ಚರಿಸು ತ್ತಿದ್ದರೋ ಅವುಗಳನ್ನೇ ಶ್ರೀ ಅರವಿಂದರು ತಮ್ಮೆಲ್ಲ ವರ್ಚಸ್ವದಿಂದ ಒತ್ತಿ ಒತ್ತಿ ಸಾರುತ್ತಿರು ವರು. ಅದು ಹೇಗೆಂಬುದನ್ನು ನೋಡುವಾ.

ಆತ್ಮೋದ್ಧಾರದ ಮಾರ್ಗ ಬಲು ಗಡಚು. ನನ್ನ ಪ್ರಯತ್ನ ಪ್ರಯಾಸಗಳಿಂದಲೇ ಸಾಗೇನೆಂದರೆ ಕೊನೆತನಕ ಆಗದು. ಒಂದಿಲ್ಲ ಒಂದುಕಡೆ ನನ್ನ ಶಕ್ತಿ ಕಟ್ಟಾಗುವುದು. ನನ್ನನ್ನು ಮುಂದೊಯ್ಯುವ ಒಂದು ಶಕ್ತಿ—ನನಗಿಂತಲೂ ಹೆಚ್ಚಿನದು ಇಲ್ಲದಿದ್ದರೆ ನಾನು ಎಂದೆಂದಿಗೂ ಏಳಲಾಗದಂತೆ ಕುಸಿಬೀಳಬೇಕಾದೀತು. ಆದರೆ ಅದು ಹಾಗಿಲ್ಲ. ಕರ್ತೃತ್ವಶಕ್ತಿ ನಮ್ಮದು ಅಲ್ಲವೇ ಅಲ್ಲ.

"ಮಾಡುವ ಪಂಥಗಾರಿಕೆಯಲ್ಲ **ಆತನಿಗೇ** ಮೀಸಲಾಗಿದೆ."

ಜಗನ್ನಾಥದಾಸರ 'ಮಾಡಿ ಮಾಡಿಸುವ' ಎಂಬ ಹೇಳಿಕೆಯನ್ನು ನಾವೀ ಅರ್ಥದಲ್ಲಿ ತಿಳಿದುಕೊಳ್ಳಬೇಕು. ಯೋಗಸಾಧಕರು ನಾವಲ್ಲವೇ ಅಲ್ಲ. ಸಾಧಕನೂ ಸಾಧ್ಯನೂ **ಆತನೇ.** ಅಜ್ಞಾನ ಅಹಂಕಾರಗಳೇ ನಮ್ಮೀ ಕರ್ತೃತ್ವದ ಮಿಥ್ಯಾಜ್ಞಾನಕ್ಕೆ ಹೊಣೆಗಾರ. ಎಂದರೆ ಇದು ಸಾಧನಾಸಂದರ್ಭದಲ್ಲಿಯೂ ಸತ್ಯ. ಇದು ಮನಃಶಾಸ್ತ್ರದ ಆಯಕಟ್ಟೇ ಆಗಿದೆ. ನಾವೇ ಎಲ್ಲದರ ನೊಗ ಹೊರಬೇಕೆಂದರೆ ನಮ್ಮಕಡೆಯಿಂದ ನೀಗಬೇಕಾದರೂ ಎಷ್ಟು ದಿನ? (ದ್ವೈತದ ಪರಿಭಾಷೆಯಲ್ಲಿ ಹೇಳುವುದೆಂದರೆ) ಸರ್ವೋತ್ತಮನ ಅನುಗ್ರಹವಾಗುವವರೆಗೆ, (ಅದ್ವೈತದ ಪರಿಭಾಷೆಯಲ್ಲಿ ಹೇಳುವುದೆಂದರೆ) ಸರ್ವೋತ್ತಮತ್ವವೇ ನಮ್ಮ ಬಿರುದೆಂಬ ಪ್ರತೀತಿಯಾಗುವ ವರೆಗೆ, (ಅಥವಾ ದ್ವೈತಾದ್ವೈತಗಳನ್ನು ಸಮೀಕರಿಸುವ ಶ್ರೀ ಅರವಿಂದರ ಭಾಷೆಯಲ್ಲಿ ಹೇಳುವುದೆಂದರೆ) ಸರ್ವೋತ್ತಮನೇ ಸಾಧಕನೂ ಸಾಧ್ಯನೂ ಆಗಿ, ಯೋಗದ ಹೊಣೆಯನ್ನು ಹೊತ್ತು ಯೋಗವನ್ನು ಕಡೆಗಾಣಿಸುವವನಾಗದಿದ್ದರೆ, ಅಧ್ಯಾತ್ಮಸಾಧನೆಯ ಆರಂಭವಾದರೂ ಹೇಗಾದೀತು?

"ಕೆಲದಿನ ಸಾಗಿದಿರಾದರೆ, ನಿಮ್ಮ ಕಸುವಿಗೆ ಮೀರಿದ ಧುರಂಧರನೊಬ್ಬ ನಿಮ್ಮೊಳಗೆ ಸ್ಫುರಿಸಿ, ನಿಮ್ಮ ಹೆಗಲ ಒಳಗೆ ಶಕ್ತಿಸಂಚಾರವಾಗುವಂತೆ ಮಾಡುತ್ತಿರುವುದು ನಿಮಗೆ ಗೋಚರ ವಾದೀತು."

ಮೊದಲಿನಿಂದಲೂ ಹೊಣೆ ಹೊತ್ತವನು **ಆತನೇ**. ಆದುದರಿಂದ ಉತ್ಸಾಹವಿರಲಿ, ಆದರೆ ಅಭಿಮಾನವಿರದಿರಲಿ. ಅಹಂಕಾರವಶರಾಗಿ ಹತಾಶತೆ ಬರದಿರಲಿ. ಎಂಥೆಂಥ ದಿವ್ಯ ಬಂದರೂ ನಿಮ್ಮನ್ನು ಪ್ರೇರೇಪಿಸುವ ಶಕ್ತಿ ತ್ರೈಲೋಕ್ಯದ ಅಂತಶ್ಚಾಲಕ ಶಕ್ತಿಯಾಗಿಹುದು; ಇದ ನ್ನೆಂದಿಗೂ ಮರೆಯದಿರಿ ಎಂದು ಘೋಷಣೆ ಮಾಡುತ್ತ, ಆತ್ಮಸಾಮ್ರಾಜ್ಯದ ಬಾಧ್ಯತೆಯನ್ನು ದೀನದುರ್ಬಲರಿಗೂ ಶಾಸನ ಬರೆದು ಸಲಿಸಿರುವರು ಶ್ರೀ ಅರವಿಂದರು.

## ೩. ಗುರು

"ಪೂರ್ಣಯೋಗದ ಪ್ರಧಾನಶಾಸ್ತ್ರವು ಪ್ರತಿ ಮಾನವನ ಅಂತಃಕರಣದಲ್ಲಿ ಅವಿತು ಕೊಂಡ ಸನಾತನ ವೇದವಿರುವಂತೆ, ಪೂರ್ಣಯೋಗದ ಪ್ರಧಾನಗುರುವು ಪ್ರತಿ ಮಾನವ ಹೃದಯದಲ್ಲಿ ಕಾಣದಂತೆ ನಿಂತ ಜಗದ್ಗುರುವೇ ಅಹುದು. **ಆತನೇ** ತಿಳಿವಿನ ಬೆಳಕಿನಿಂದ ನಮ್ಮ ಕತ್ತಲೆಯನ್ನು ಕಳೆಯುವನು, ಮತ್ತಾ ತಿಳಿವು ಆತನು ಪ್ರಕಟಿಸುತ್ತಲಿರುವ ತನ್ನ ತೇಜವೇ ಅಹುದು."

ನಮ್ಮ ಹೃದಯದಲ್ಲಿ ಮಿನುಗುತ್ತಿರುವ ತತ್ತ್ವದೀಪವೇ ನಮಗೆ ದಾರಿ ತೋರುವ ನಮ್ಮ ಶಾಸ್ತ್ರ. ನಮ್ಮ ಮನದ ಮನೆಯಲ್ಲಿ ಯಜಮಾನನಾಗಿ ನಿಂತ ಆ ಪ್ರಭುವೇ ನಮ್ಮ ಗುರೂತ್ತ ಮನು. ಶಾಸ್ತ್ರವೂ ಗುರುವೂ ನಮ್ಮೊಳಗೇ ಇರುವರು. ಹೊರಗೆ ಎಲ್ಲಿಯೂ ಹುಡುಕ ಬೇಕಾಗಿಲ್ಲ. ಶಾಸ್ತ್ರವನ್ನು ಶೋಧಿಸುವುದಕ್ಕಾಗಿ ನಾವು ಯಾವ ಗ್ರಂಥರಾಜರಿಗೂ ಶರಣು ಹೋಗಬೇಕಿಲ್ಲ. ಅನೇಕ ಪುಸ್ತಕಗಳ ವ್ಯಾಸಂಗಮಾಡಿಯೂ ಮತ್ತೂ ನಮ್ಮ ಹೃದಯದಲ್ಲಿ ಉಲಿಯುವ ಶ್ರುತಿಯನ್ನೇ ಆಶ್ರಯಿಸಬೇಕಾಗುವುದು. ಗುರುವನ್ನು ಪಡೆದುಕೊಳ್ಳಲು ನಾವು ಯಾವ ನಿರ್ದಿಷ್ಟ ಗುರುಗಳನ್ನೂ ಅವಲಂಬಿಸಬೇಕಿಲ್ಲ. ಅನೇಕ ಅಧಿಕಾರಿ ಪುರುಷರ ಪಾದ ತಲದಲ್ಲಿ ಕುಳಿತೂ ಮತ್ತೂ ನಮ್ಮೊಳಗೆ ನಿಂತು ಸೊಲ್ಲುತ್ತಿರುವ ಆ ಗುರುಗಳ ಗುರುವನ್ನೇ ಭಜಿಸಬೇಕಾಗುವುದು. ಎಲ್ಲ ಶಾಸ್ತ್ರಗಳ ಉದ್ದೇಶವು ಒಳಗಿನ ಶಾಸ್ತ್ರದ ಅನುತ್ತಮತೆಯನ್ನು ತೋರ್ಪಡಿಸಲಿಕ್ಕೆಯೆ. ಹಾಗೆ ಮಾಡದೆ ಅಧ್ಯಾತ್ಮಮಾರ್ಗದ ಗುಟ್ಟುಮುಟ್ಟುಗಳನ್ನು ಹೇಳುವ ಸರ್ವಾಧಿಕಾರಗಳೂ ನಮಗೇ ಸಲ್ಲಿವೆಯೆಂದು ಅವು ಹೇಳಿಕೊಳ್ಳತೊಡಗಿದರೆ ಅದನ್ನೆಲ್ಲ ವಿಫಲ ವೆಂದೇ ಭಾವಿಸಬೇಕು. ಎಲ್ಲ ಗುರುಗಳ ಉದ್ದೇಶವು ಒಳಗಿನ ಗುರುನಾಥನ ನಿರಾಲಂಬ ಸಾರ್ವಭೌಮ ಪ್ರಭುತ್ವವನ್ನು ಸಮರ್ಥಿಸಲಿಕ್ಕೆಯೆ.

ಪೂರ್ಣಯೋಗದ ಸಾಧಕನು ಸಾಧನೆಯ ಆರಂಭಾವಸ್ಥೆಯಲ್ಲಿಯೇ ಈ ಕೆಲ ಮಾತು ಗಳನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ನಮ್ಮ ದೈವದ ಗಂಟು ನಮ್ಮ ದೇವನೊಡನೆ. ಆತನೇ ಪವಾಡಪುರುಷ; ನಮ್ಮ ಪ್ರಾಕೃತ ಜೀವನದೊಳಗಣ ಕರಿಕೆ-ಕಸರುಗಳನ್ನು ಕಿತ್ತು ತೆಗೆದು ಆನಂದ-ಸೌಂದರ್ಯ-ಶಕ್ತಿಗಳ ಮಧುರಫಲಗಳುಳ್ಳ ಪೈರನ್ನು ಹುಟ್ಟಿಸುವ ಪವಾಡಗಳನ್ನು

ಮಾಡುವ ಪರಮಪುರುಷ. **ಆತನೇ** ಲೀಲಾವತಾರಿ; ಎಂದರೆ ನಮ್ಮ ಹೃತ್ಪ್ರಾಂತದಲ್ಲಿ ಅವತರಿಸಿ ನಮ್ಮನ್ನು ಮೇಲಕ್ಕೆ ಕರೆದು ನಮ್ಮ ಜೀವರಾಜರಿಗೆ ತನ್ನ ಅನಂತಗುಣಗಳ ಸಂಭಾವನೆ ಕೊಟ್ಟು ಮನ್ನಿಸುವ 'ಏಕಮೇವಾದ್ವಿತೀಯ' ಅವತಾರಿ.

"ಹಾಗಾದರೆ **ಆತನು** ಅವಲಂಬಿಸುವ ರೀತಿ ಯಾವುದು, ಪದ್ಧತಿ ಯಾವುದು? **ಆತನು** ಒಂದು ಪದ್ಧತಿಯನ್ನೂ ಅವಲಂಬಿಸುವುದಿಲ್ಲ—ಅಥವಾ ಎಲ್ಲ ಪದ್ಧತಿಗಳನ್ನೂ ಅವಲಂಬಿಸುವನು. ನಮ್ಮ ಸ್ವಭಾವದಲ್ಲಿದ್ದ ಒಲವುಗಳನ್ನೇ-ಶಕ್ತಿಗಳನ್ನೇ (ಸ್ವಾಭಾವಿಕವಾಗಿಯೇ) ಪರಾಕಾಷ್ಠೆಗೆ ಒಯ್ದು ಮುಟ್ಟಿಸಿ ಅವುಗಳನ್ನು ಏಕತ್ರಿತವಾಗಿ ಚಿಕ್ಕಪುಟ್ಟ ಕೆಲಸಗಳಲ್ಲಿಯೂ ಉಪಯೋಗಿಸುವದು **ಆತನ**ದೊಂದು ರೀತಿ. ಇದು ಬಳಸಿಕೊಳ್ಳಲು ಬಾರದಷ್ಟು ಕಿರುಕುಳವು—ಅದು ಸಾಧಿಸಿಕೊಳ್ಳಲು ಬಾರದಷ್ಟು ದೊಡ್ಡದು--ಇಂಥ ಮಾತಿಗೆ **ಆತನ** ಯೋಗದಲ್ಲಿ ಆಸ್ಪದವೇ ಇಲ್ಲ. ತನ್ನಲ್ಲಿ ಇಂಥ ಕೊಂಕುಕೊರತೆಗಳುಂಟು, ತಾನು ಇಷ್ಟು ದೀನನು-ದುರ್ಬಲನು ಎಂದು ನಿರ್ವೇದವನ್ನು ತಾಳಲಿಕ್ಕೆ ಸಾಧಕನಿಗೆ ಅಧಿಕಾರವೇ ಇಲ್ಲ. ಏಕೆಂದರೆ ಆತನಲ್ಲಿ ತಳವೂರಿದ ಶಕ್ತಿಯು ಅಪೌರುಷೇಯವೂ ಅನಂತವೂ ಆಗಿಹುದು."

ಇದೆಲ್ಲ ಸರಿ. ಆದರೆ **ಆತನನ್ನು** ಯಾವ ಬಗೆಯಿಂದ ಗುರುತಿಸಬೇಕು? ಯಾವ ರೂಪದಿಂದ **ಆತನು** ನಮ್ಮೆದುರಿಗೆ ಪ್ರಕಟವಾಗುವನು? "ಯಾವ ಬಗೆಯಿಂದಲೂ ಯಾವ ರೂಪದಿಂದಲೂ ಆಗಬಹುದೆಂ"ದು ಶ್ರೀ ಅರವಿಂದರ ಉತ್ತರವು.

"ಅನುಷಂಗಿಕ ಸಂಸ್ಕಾರಗಳು ಗೊತ್ತುಪಡಿಸುವಂತೆ, ಆಯಾ ಜೀವದ ಸ್ವಭಾವಕ್ಕೆ ಸಮ್ಮತವಾಗುವಂತೆ ಹೇಗಾದರೂ ಆತನು ಕಾಣಬಹುದು. ಕೆಲವರಿಗೆ ನಾಮರೂಪಕ್ಕೆ ಹೊರತಾದ ವಿಜ್ಞಾನವೆಂದೂ, ಅತ್ಯಂತ ಕರುಣಾಲುವಾದ ತಾಯಕರುಳೆಂದೂ, ಅತೀಂದ್ರಿಯ ಶಕ್ತಿಯೆಂದೂ ಸ್ಫುರಿಸಬಹುದು; ಕೆಲವರಿಗೆ ನಿರ್ಗುಣವು ಸಗುಣರೂಪವನ್ನು ಧರಿಸಿ ಜೀವವನ್ನು ಹತ್ತರ ಕರೆದಂತೆಯೂ, ಕೆಲವರಿಗೆ 'ರಾಮ-ಕೃಷ್ಣ-ಶಿವ' ಎಂದು ವಿಶಿಷ್ಟರೂಪವನ್ನು ಧರಿಸಿದಂತೆಯೂ, ಕೆಲವರಿಗೆ ಮನಸ್ಸಿಗೆ ಅನಿಸಿ ಅನಿಸಿ ಹೋಗುವ ಆದರ್ಶಗಳಲ್ಲೊಂದಾಗಿಯೂ ತೋರಬಹುದು. ಕೊನೆಗೆ ಇವೆಲ್ಲ ಆತನ ನಿಲುವಿನ ಒಂದೊಂದು ಮೈಯೆಂಬುದಾಗಿ ಹೊಳೆಯುವುದು.

"ಪೂರ್ಣ ಸಾಕ್ಷಾತ್ಕಾರವನ್ನು ಗುರಿಯಾಗಿಟ್ಟುಕೊಂಡ ಸಾಧಕನಿಗೆ ಮೊದಲಿನಿಂದಲೂ ಇಂತಹ ಅಂತರ್ಯಾಮಿಯ ಮನವರಿಕೆಯಾಗುವುದು ಅತ್ಯಗತ್ಯ. ಇದು ಮೊದಲು ಬಿಗಿ. ಆದರೆ ಮುಂದೆ ಹೊಳೆಯುವುದು--ನಮ್ಮ ತಪ್ಪುತಾಗುಗಳನ್ನೇ ಸಾಧನವನ್ನಾಗಿಸಿ ನಮ್ಮನ್ನು **ಆತ** ಹೇಗೆ ಮುಂದಕ್ಕೆ ಒಯ್ಯುವನೆಂಬುದು—ನಮ್ಮ ಸ್ಖಲನ-ಪತನಗಳೂ ನಮ್ಮ ಆತ್ಮದ ಉತ್ಕರ್ಷಕ್ಕೆ ಹೇಗೆ ಬೇಕೇಬೇಕಾಗಿದ್ದವೆಂಬುದು. ಇಷ್ಟೇ ಅಲ್ಲ; ನಿಮಿಷನಿಮಿಷವೂ ನಮ್ಮ ಹೃದಯವನ್ನು ಅತಿಶುದ್ಧವಾದ ದೈವಿಕಪ್ರೀತಿಯೊಂದು ವ್ಯಾಪಿಸುತ್ತಿದ್ದುದು, ನಮ್ಮ ಬುದ್ಧಿಯ ವ್ಯಾಪಾರಗಳಲ್ಲಿ ನಮಗೆ ತೋಚದ ಆರ್ಷಶಕ್ತಿಯೊಂದು ವ್ಯವಹರಿಸುತ್ತಿದ್ದುದು, ನಮ್ಮ ಕಾರ್ಯಗಳಲ್ಲಿ ಸಿದ್ಧಶಕ್ತಿಯೊಂದು ಪ್ರಕಟವಾಗುತ್ತಿದ್ದುದು ನಮಗೆ ಅದಕ್ಕೂ ಮುಂದೆ ತಿಳಿದುಬರುವುದು. ಆ ಮುಂದೆ ನಮ್ಮ ಒಡೆಯನೆಂದು, ಗೆಳೆಯನೆಂದು, ನಲ್ಲನೆಂದು, ಅಯ್ಯನೆಂದು **ಆತನ** ಪ್ರತಿನಿಮಿಷದ ಪ್ರತೀತಿಯೂ ಬರುವುದು. ಇದಕ್ಕೂ ಮುಂದೆ ಯೋಗದರ್ಶನಗಳು ಹೇಳುವ

ಈಶ್ವರನೂ ಚೈತ್ಯಗುರುವೂ, ಅಜ್ಞೇಯವಾದಿಗಳ ಅಜ್ಞೇಯವೂ, ತತ್ತ್ವಜ್ಞಾನಿಯ ದಿಕ್ಕಾಲಾತೀತ ತತ್ತ್ವವೂ, ಭೌತಿಕವಾದಿಯ ಆಧಿಭೌತಿಕಶಕ್ತಿಯೂ, ಎಲ್ಲ ಧರ್ಮಗಳಿಂದ ವಿವಿಧವಾಗಿ ಹೊಗಳಿಸಿಕೊಂಡವನೂ **ಆತನೇ** ಎಂಬ ಶ್ರೇಷ್ಠತಮವಾದ ಜ್ಞಾನವೂ ಆಗುವುದು.

" ಇಂತು ನಮ್ಮೊಳಗೂ ಹೊರಗೂ **ಆತನನ್ನು** ಗುರುತಿಸಿ, ಅರಿತು, **ಆತನೇ** ನಾವಾಗುವುದೇ ನಾವೀ ಪೃಥ್ವೀಯಾತ್ರೆಯನ್ನು ಕೈಕೊಂಡುದರ ಮರ್ಮವು, ನಮ್ಮ ಜೀವಿತದ ಸಾರ್ಥಕ್ಯವು; ಇದೇ ಸ್ವಾರಾಜ್ಯವು, ಸಾಮ್ರಾಜ್ಯವು. ನಿಶ್ಶಬ್ದದ-ಅಕ್ಷರದ ನಿರಾಲಂಬ ಮೌನ, ಕ್ಷರಬ್ರಹ್ಮದ ಕರ್ಮಪ್ರವೃತ್ತಿ--ಎಂಬೀ ಪುರುಷೋತ್ತಮನ ಎರಡೂ ಅಂಗಗಳಲ್ಲಿ ಭಾಗಿಯಾಗಬೇಕೆಂಬುದೇ ನಮ್ಮ ಅಹಂಕಾರವು ಕುರಿಯುತ್ತಿರುವ ಗುರಿ. ಇದನ್ನು ಕುರಿತೇ ವಿಶ್ವರಥವು ಸಾಗಿರುವುದು. ಇದೇ ಪೂರ್ಣಯೋಗದ ಲಕ್ಷ್ಯವು."

ಇಷ್ಟೆಲ್ಲ ಮಾತುಗಳನ್ನು ಸಾಧಕಜೀವನು ಮೊದಲಿಸಿಂದಲೂ ನೆನಪಿನಲ್ಲಿಟ್ಟುಕೊಂಡು ಸಾಗುವುದು ಒಳಿತು. ಆದರೆ ಇದು ಕಷ್ಟವೆಂಬುದನ್ನು ಶ್ರೀ ಅರವಿಂದರು ತಿಳಿದವರಾದ್ದರಿಂದ ಸಾಧಕನಿಗೆ ಇಷ್ಟದೇವತೆ, ಅವತಾರ, ಕ್ಲೃಪ್ತಗುರು ಇತ್ಯಾದಿಗಳ ಮಹತ್ತ್ವವನ್ನೂ ಅಗತ್ಯವನ್ನೂ ವಿವರವಾಗಿ ಹೇಳಿರುವರು. ಕಣ್ಣಿಗೆ ಕಟ್ಟುವಂತೆ, ಮೈಯಿಂದ ಮುಟ್ಟುವಂತೆ ಸಾಕ್ಷಾತ್ತಾಗಿ ಪೂಜೆಯನ್ನು ಕೈಗೊಂಬ ವಿಗ್ರಹಕ್ಕಾಗಿ ಮಾನವ್ಯವು ಹಂಬಲಿಸುವುದು ಸಹಜ. ಇಷ್ಟೆಲ್ಲ ಒಪ್ಪಿಕೊಂಡೂ, ಇಷ್ಟೆಲ್ಲದರ ಆವಶ್ಯಕತೆಯನ್ನೂ ಪ್ರಾಶಸ್ತ್ಯವನ್ನೂ ಬಣ್ಣಿಸಿಯೂ, ಶ್ರೀ ಅರವಿಂದರು ಕೊನೆಗೆ—

" ಪೂರ್ಣಯೋಗದ ಸಾಧಕನು ಇವೆಲ್ಲವುಗಳ ನೆರವನ್ನು ತನ್ನ ಸ್ವಭಾವಕ್ಕೆ ಬೇಕೆನಿಸಿದರೆ ತೆಗೆದುಕೊಳ್ಳಬಹುದು. ಆದರೆ ಆತನು ಈ ಸಾಧನಗಳಿಗೆ ಏಕದೇಶೀಯತೆಯಿಂದ ಅಂಟಿಕೊಳ್ಳಕೂಡದು. 'ನನ್ನ ದೈವತ, ನನ್ನ ಅವತಾರ, ನನ್ನ ವಿಭೂತಿ, ನನ್ನ ಗುರು' ಎಂದು ಚೀರಿಕೊಳ್ಳುತ್ತ ಉಳಿದವರ ಉಳಿದ ಅನುಭೂತಿಯನ್ನು ಅಂಧವಾದ, ಅಸಹಿಷ್ಣುವಾದ ಸ್ವಮತಾಭಿಮಾನದ ಅತಿರೇಕದಿಂದ ಹೀಯಾಳಿಸುವ ವೃತ್ತಿಯು ಆತನಿಗೆ ಹೊಲ್ಲದು.

" ಇಂತಿಷ್ಟಲ್ಲದೆ, ದೈವತದ ಉಳಿದ ನಾಮರೂಪಗಳನ್ನು ದೈವತದ ಬಗೆಗಿರುವ ತನ್ನ ವಿಶಾಲ ಕಲ್ಪನೆಯ ಹೊಟ್ಟೆಯೊಳಗೆ ಸಮಾವೇಶ ಮಾಡುವ ವರೆಗೆ, ತನ್ನ ಇಷ್ಟದೇವತೆಯನ್ನು ಉಳಿದವರ ದೇವತೆಗಳಲ್ಲಿ ಕಂಡುಕೊಳ್ಳುವ ವರೆಗೆ, ಎಲ್ಲ ಅವತಾರಗಳನ್ನು ಅವತರಿಸುವ **ಆತನ** ಏಕಮೇವಾದ್ವಿತೀಯ ಸ್ವರೂಪದಲ್ಲಿ ಒಂದಾಗಿಸುವ ವರೆಗೆ, ಎಲ್ಲ ಶಾಸ್ತ್ರ-ಮತಗಳನ್ನು ಆ ಒಳಗಿನ ಸನಾತನ ವೇದದಲ್ಲಿ ಒಳಪಡಿಸುವವರೆಗೆ ಪೂರ್ಣ ಯೋಗದ ಸಾಧಕನು ಸುಮ್ಮನೆ ಕೂಡತಕ್ಕುದಲ್ಲ."

ಎಂದು ಅಸಂದಿಗ್ಧವಾಗಿ ಹೇಳುವರು.

ಒಂದು ಬಗೆಯಿಂದ ಪೂರ್ಣಯೋಗದ ಹೊಣೆಯನ್ನು ಶ್ರೀ ಅರವಿಂದರು ಸಾಧಕನ ಮೇಲೆಯೇ ಹೆಚ್ಚಾಗಿ ಹೊರಿಸಿರುವರು. ತಾನು ತನ್ನ ಗುರಿಯನ್ನು ಗುರುತಿಸಿಕೊಳ್ಳಬೇಕು; ಅಂತಃಕರಣಸ್ಥ ಪರಮಾತ್ಮನನ್ನೇ ಗುರುದೇವನನ್ನಾಗಿಟ್ಟುಕೊಳ್ಳಬೇಕು; ದಡದ ಮೇಲೆ ಅಧೀರವೃತ್ತಿಯಿಂದ ಕಾಯ್ದುಕೊಳ್ಳದೆ, ಕಡಲಲ್ಲಿ ಧುಮುಕಿಕೊಳ್ಳಬೇಕು—ಯಾವುದೋ ಒಂದು ಗುಪ್ತಶಕ್ತಿ ಈಸಲು ಕಲಿಸಿಯೇ ಕಲಿಸುವುದು—ಈಸಿ ಕೈಸೋತಾಗ, ತನ್ನ ಕೈಯನ್ನೇ

ಹರಗೋಲನ್ನಾಗಿ ಮಾಡಿ ಪಾರತೀರಕ್ಕೆ ಒಯ್ದೇ ತೀರುವುದು; ಮುಂದೆ ಸಾಗಿದಂತೆ ಅನುಭವವು ಬಂದೇ ಬರುವುದು, ಈಶ್ವರನ ವಿಶ್ವಂಭರ ವಾತ್ಸಲ್ಯವು ಅನಿಸಿಯೇ ಅನಿಸುವುದು, ಎದೆಯಲ್ಲಿ ಅಜಿಂಕ್ಯವಾದ ಆತ್ಮವಿಶ್ವಾಸವೊಂದು ಸ್ಥಿರವಾಗಿ ನೆಲಸಿಯೇ ನೆಲಸುವುದು— ಇಂತೀ ಮುಂತಾದ ಮಾತುಗಳು ಪೂರ್ಣಯೋಗದ ಆಯುಕಟ್ಟಿನ ಗುಟ್ಟುಗಳೆಂದು ಹೇಳಬಹುದು. ಆದುದರಿಂದ ಪೂರ್ಣಯೋಗದ ಹಾದಿಗನು ಸಾಹಸದ ರಾಶಿಯಾಗತಕ್ಕುದು, ಧೈರ್ಯದ ಮೇರುವಾಗತಕ್ಕುದು.

ಪೂರ್ಣಯೋಗದ ಉಪದೇಶಕನು ( ಎಂದರೆ ನಮ್ಮರ್ಥದಲ್ಲಿ ಗುರುವು ) ಇದನ್ನೇ ಮಾಡಿ ಮಾಡಿಸತಕ್ಕುದೆಂದು ಶ್ರೀ ಅರವಿಂದರು ಹೇಳುವರು. ಆತನು ಒಳಗಿನ ಗುರುವಿನ ( ಎಂದರೆ ಕೂಟಸ್ಥ ಪರಮಾತ್ಮನ ) ಪದ್ಧತಿಯನ್ನೇ ಅನುಸರಿಸತಕ್ಕುದೆಂದೂ, ಶಿಷ್ಯನ ಸ್ವಭಾವದ ಕಡೆಗೆ ಲಕ್ಷ್ಯಕೊಟ್ಟು ಶಿಷ್ಯನನ್ನು ಮುಂದಕ್ಕೆ ಒಯ್ಯತಕ್ಕುದೆಂದೂ, **ಅಧ್ಯಾಪನ, ಆಚಾರ, ವರ್ಚಸ್ವ**—ಎಂಬುವೇ ಆತನ ಉಪಕರಣಗಳೆಂದೂ ಹೇಳಿ, ಈ ಮೂರು ಮಾತುಗಳನ್ನು ವಿವರಿಸುವಾಗ ಮುಂದೆ ಬರಲಿರುವ ಪೂರ್ಣಯೋಗದ ಗುರುವಿನ ಲಕ್ಷಣಗಳನ್ನು ಪರ್ಯಾಯದಿಂದ ಹೇಳಿರುವರು.

**ಅಧ್ಯಾಪನ :**—

ದೇವರ ಜ್ಞಾನದ ಇಡುಗಂಟೆಲ್ಲಾ ತನ್ನ ತಲೆಯಲ್ಲಿಯೇ ಇದೆಯೆಂದು ಆತನು ಭಾವಿಸತಕ್ಕುದಲ್ಲ. ತಾನು ಮಾಡಿದುದೆಲ್ಲ ಶುದ್ಧ ಸಿದ್ಧವು—ತಾನು ಹೇಳಿದುದೆಲ್ಲ ಬ್ರಹ್ಮಲಿಪಿಯು— ಅಧ್ಯಾತ್ಮಜ್ಞಾನೋಪದೇಶದ ಸರ್ವಾಧಿಕಾರಗಳು ತನಗೇ ಸಂದಿವೆ ಎಂದು ಬಗೆಯದೆ, ತಾನು **ಆತನ ಮುಖವು**, ಹೇಳುವವನು ಹೇಳಿಸುವವನು ಆ **ಅನಾದಿ ದೇವನೇ, ಆತನು** ಒಡನುಡಿಸಿದಂತೆ ನುಡಿಯುವುದು ತನ್ನ ಕಾರ್ಯ, **ಆತನ** ಆದೇಶಕ್ಕಾಗಿ ತಪಿಸುತ್ತಲಿದ್ದು ಅದನ್ನಾಲಿಸಿ ಸೊಲ್ಲಿಸುವುದೇ ತನ್ನ ಪಂಥ, ತಾನು ಸ್ವತಃ ಪರಿಪೂರ್ಣನಲ್ಲ—**ಆತನ** ಪೂರ್ಣತ್ವದಲ್ಲಿ ಭಾಗಿಯಾದಷ್ಟು, ಭಾಗಿಯಾದಂತೆ ತಾನು ಪೂರ್ಣನಾಗುವನು; ಎಂಬೀ ಮಾತುಗಳು ಆತನಲ್ಲಿ ದೃಗ್ಗೋಚರವಾಗುತ್ತಿರಲು ಬೇಕು. ಹೀಗಿರುವುದರಿಂದ—

“ ಚತುರನಾದ ಗುರುವು ತನ್ನನ್ನಾಗಲಿ ತನ್ನ ಪ್ರೀತಿಯ ತತ್ತ್ವ-ಮತಗಳನ್ನಾಗಲಿ ಶಿಷ್ಯನ ಮೇಲೆ ಹೇರತಕ್ಕುದಲ್ಲ. ಶಿಷ್ಯನ ಗ್ರಹಣಶಕ್ತಿಯನ್ನು ನೋಡಿ ಎಷ್ಟು ಬೇಕೋ ಅಷ್ಟೇ ಹೇಳುವನು. ವಿಶೇಷವಾಗಿ ಬಾಯಿಯಿಂದ ಹೇಳಹೋಗದೆ, ಶಿಷ್ಯನಲ್ಲಿ ಹುದುಗಿದ ಜ್ಯೋತಿಯನ್ನೇ ಉದ್ದೀಪಿಸುವನು. ಕಟ್ಟಿಟ್ಟ ಪ್ರಕ್ರಿಯೆಗಳಿಂದ ಸಾಗದೆ ಸ್ವಾಭಾವಿಕವಾದ, ನೈಸರ್ಗಿಕವಾದ, ಪ್ರಕೃತಿಸಹಜವಾದ ಉಪಾಯಗಳನ್ನೇ ಅವಲಂಬಿಸುವನು. ”

**ಆಚಾರ :**—

“ ಅಧ್ಯಾಪನಕ್ಕಿಂತಲೂ ಆಚರಣೆಗೆ ಮಹತ್ತ್ವವು ಹೆಚ್ಚು. ಎಂದರೆ ಅದು ಗುರುವಿನ ಬಹಿರಂಗದ ಆಚರಣೆಯಲ್ಲ—ಸ್ವೀಯ ಶೀಲದ ಪ್ರದರ್ಶನವಲ್ಲ—ಆತನ ಅಂತರಂಗ-ಬಹಿರಂಗಗಳೆರಡನ್ನೂ ವ್ಯಾಪಿಸಿ, ಆತನ ಸಮಗ್ರ ಜೀವನವನ್ನೇ ಹೊತ್ತಿಸಿ ಪ್ರಜ್ವಲಿಸುತ್ತಿರುವ ಆತನ

ಜಾಜ್ವಲ್ಯವಾದ ದೈವತಾನುಸಂಧಾನ—ಪರಮಾತ್ಮನೊಡನೆ ಬಳಕೆ. ಇದೇ ಕೊನೆತನಕ ಉಳಿಯಬಹುದಾದ ಅಂಶವು. ಇದನ್ನೇ ಸಾಧಕನು ತನ್ನಲ್ಲಿ ಪಡಿಮೂಡಿಸಿಕೊಳ್ಳ ತಕ್ಕದ್ದು."

**ವರ್ಚಸ್ಸು :—**

"ಆಚಾರಕ್ಕಿಂತಲೂ ವರ್ಚಸ್ಸವು ಹೆಚ್ಚಿನದು. ಇದೆಂದರೆ ಶಿಷ್ಯನ ಮೇಲೆ ಆರೋಪಿಸ ಬಹುದಾದ ಬಹಿರಂಗದ ಅಧಿಕಾರವಲ್ಲ. ಇದೆಂದರೆ ಎದೆಎದೆಗಳ ಒಳಗಿನ ಹತ್ತುಗಡೆಯಿಂದ ಬರುವ ಗುರುವಿನ ಆಧ್ಯಾತ್ಮಿಕ ವರ್ಚಸ್ಸು. ಇದೆಂದರೆ ಮೌನದ ಮಡಿಲಲ್ಲಿ ಶಿಷ್ಯನನ್ನು ಮಲಗಿಸಿ ಕೇಳಿ ಕೇಳಿಸದಂತೆ ಹಾಡುವ ಆತ್ಮಗೀತೆ. ಇದೆಂದರೆ ತಾಯಿಯಂತೆ, ನಲ್ಲನಂತೆ ಕಣ್ಣಸನ್ನೆಯಿಂದ, ತುಟಿಯ ಅಲುಗುವಿಕೆಯಿಂದ ಶಿಷ್ಯನನ್ನು ಅಕಲ್ಪಿತ ವೇಗದಿಂದ ಮುಂದೊಯ್ಯುವ ಮೂಕತಂತ್ರ. ಹೀಗೆ ಒಳಗಿನಿಂದಲೇ ಶಿಷ್ಯನ ಎದೆಯ ಕೋಟೆಯನ್ನು ಗೆದ್ದುಕೊಂಡು, ತನ್ನ ಆತ್ಮಾನುಭವದ ಬೊಕ್ಕಸವನ್ನೆಲ್ಲ ಶಿಷ್ಯನಿಗೆ ಸಮರ್ಪಿಸುವುದು ಗುರುವಿನ ಬಿರುದು. ಇದೇ ಸದ್ಗುರುವಿನ ಸಾರ್ವಭೌಮ ಲಕ್ಷಣ.

"ಮತ್ತಿದೂ ಒಂದು ಆತನ ಹೆಗ್ಗುರುತು. ಅದೆಂದರೆ ತಾನೇ ಗುರುವೆಂದು ಗುರುತ್ವದ ನಿರಂಕುಶ ಪ್ರಭುತ್ವವನ್ನು ತನ್ನ ಸೊತ್ತನ್ನಾಗಿ ಆತನು ಮಾಡಲಾರ. ಆತನು ಸಾಧಕ ಜೀವಗಳಿಗೆ ಅಣ್ಣಯ್ಯನೋಪಾದಿಯಲ್ಲಿರುವ; ಅಥವಾ ಆತನು ಕೂಸುಗಳನ್ನು ಕರೆದುಕೊಂಡು ಹೋಗುವ ಒಂದು ಕೂಸು."

## ೪. ಕಾಲ

ಮೇಲಿನ ಸಾಧನತ್ರಯವು ಲಭಿಸಿದರೆ ಸಾಧಕನ ಉದ್ಧಾರವು ಕಟ್ಟಿಟ್ಟದ್ದೇ. ಸೋಲು ಗೆಲುವಿನ ಕೈಗೋಲಾಗಿಯೂ, ಹುಟ್ಟುಸಾವುಗಳು ಆತ್ಮನ ಪುರೋಗತಿಯ ಹಾದಿಯಲ್ಲಿ ನಿಲ್ದಾಣಗಳಾಗಿಯೂ ಆತನಿಗಾಗ ಪರಿಣಮಿಸುವವು.

"**ಕಾಲವು** ಕೊನೆಯ ಸಾಧನ. ಹೊತ್ತು ನಮ್ಮ ಪ್ರಯತ್ನಗಳಿಗೆ ಸಾಧನವೆಂದಾಗಲಿ ಬಂಧನವೆಂದಾಗಲಿ ಸಾಮಾನ್ಯವಾಗಿ ತೋರುವುದು. ನಿಜವಾಗಿ ನೋಡಿದರೆ ಅದು ಸಾಧನವೇ ಅಹುದು.

"ಕಾಲವೆಂದರೆ ಜೀವನ ಉದ್ಧಾರವು ಇಂಥಿಂಥ ಅವಧಿಗೆ ಇಂಥಿಂಥ ಪ್ರಮಾಣದಿಂದ ಆಗತಕ್ಕುದೆಂದು ದೇವರಾಯನು ರೇಖಿಸಿದ ನಕ್ಷೆಯು. ಅಹಂಕಾರಕ್ಕೆ ಅದು ಹಗೆಯಾಗಿ ಕಂಡರೆ, ದೇವರ ಕೈಯಲ್ಲಿ ಅದೊಂದು ಯಂತ್ರವು. ಕರ್ತೃತ್ವಾಭಿಮಾನವು ಅಳಿದುಹೋಗಿ ಜೀವನು ದೇವನ ಗುಣಗಳಲ್ಲಿ ಪಾಲುಗಾರನಾದಂತೆ ಮೊದಲಿಗೆ ಬಂಧನವಿದ್ದ ಕಾಲವು ತುದಿಗೆ ಸಾಧನವಾಗಿ, ಸೇವಕನಾಗಿ ಪರಿಣಮಿಸುವುದು.

" ಪೂರ್ಣಯೋಗದ ಸಾಧಕನು ಕಾಲದ ವಿಷಯವಾಗಿ ಎಂಥ ವೃತ್ತಿಯವನಿರಬೇಕು ? ತನ್ನ ಉದ್ಧಾರದ ಒಡಪವು ಒಡೆಯಲಿಕ್ಕೆ ಅನಂತಕಾಲವು ಬೇಕಾದರೂ ಸೈ—ಎನ್ನುವಷ್ಟು ತಾಳ್ಮೆಯು ಆತನಿಗಿರಬೇಕು ; ಮತ್ತು ಕಾಲಕಾಲಕ್ಕೆ ಒದಗುವ ಪರಿಸ್ಥಿತಿಯೊಳಗಿಂದ ಪ್ರಭುವಾಗಿ ದಾರಿ ತೆಗೆದು, ತನ್ನ ವಿಕಾಸವನ್ನು ಮಾಡಿಕೊಳ್ಳುತ್ತ ಧೀರಮಣಿಯಾಗಿ ಸಾಗಬೇಕು."*

* [ ಪ್ರಸ್ತುತ ಲೇಖನವು ಇ. ಸ. ೧೯೨೮ರ ಅಗಸ್ಟ ೧೫ರಲ್ಲಿ ಗೆಳೆಯರ ಗುಂಪಿನವರು ಜರುಗಿಸಿದ ಶ್ರೀ ಅರವಿಂದರ ಜನ್ಮದಿನೋತ್ಸವಕ್ಕಾಗಿ ಬರೆಯಲ್ಪಟ್ಟು, ಆಗ ಗೆಳೆಯರ ಮುಖಪತ್ರವಾಗಿ ಧಾರವಾಡದಿಂದ ಹೊರಡುತ್ತಿದ್ದ " ಸ್ವಧರ್ಮ " ಮಾಸಪತ್ರಿಕೆಯ ೪ನೆಯ ಸಂಪುಟದ ೫ನೆಯ ಸಂಚಿಕೆಯಲ್ಲಿ ಅಚ್ಚಾಗಿತ್ತು. ಅದು ಈಗಲೂ ಹೊಸದೆನಿಸಿದ್ದರಿಂದ ಇಲ್ಲಿ ಮತ್ತೆ ಪ್ರಕಟಿಸಲಾಗಿದೆ.—ಲೇಖಕ ]

—ರಾಮಚಂದ್ರ ವಿನೀತ

---

ಭಾವನೆಯು ಯೋಗಕ್ಕೆ ಅಗತ್ಯವಾಗಿರುವ ಒಳ್ಳೆಯ ಅಂಶವಾಗಿದೆ; ಆದರೆ ಭಾವನಾತ್ಮಕ ವಾಸನೆಯು ಅಶಾಂತತೆಯ ಸಾಧನವಾಗಿ ಸುಲಭವಾಗಿ ಪರಿಣಮಿಸಿ, ಯೋಗಕ್ಕೆ ಅಡೆತಡೆಯಾಗುವುದು.

× × × ×

ನಿಮ್ಮ ಭಾವನೆಗಳನ್ನು ಈಶನೆಡೆಗೆ ಹೊರಳಿಸಿರಿ, ಅವುಗಳ ಶುದ್ಧೀಕರಣಕ್ಕಾಗಿ ಹಾರಯಿಸಿರಿ: ಆಗ ಅವು ನಿಮ್ಮ ಹಾದಿಯಲ್ಲಿ ಸಾಹಾಯ್ಯವಾಗಿ ಪರಿಣಮಿಸುವವು, ಹಾಗೂ ನಿಮಗೆಂದಿಗೂ ದುಃಖದಾಯಕವಾಗವು.

× × × ×

ಭಾವನೆಯನ್ನು ಕೊಂದುಹಾಕದೆ, ಈಶನತ್ತ ಅದನ್ನು ಹೊರಳಿಸುವುದೇ ಸರಿಯಾದ ಯೋಗಮಾರ್ಗವು.

× × × ×

ಹಾಗಾಗಬೇಕಾದಲ್ಲಿ ಭಾವನೆಯು ಶುದ್ಧವಾಗಬೇಕು, ಆಧ್ಯಾತ್ಮಿಕ ಶಾಂತಿ-ಆನಂದಗಳು ಅದರ ತಳಹದಿಯಾಗಬೇಕು, ದಿವ್ಯಾನಂದದಲ್ಲಿ ಮಾರ್ಪಡಲು ಅದು ತಕ್ಕುದಾಗಿರಬೇಕು. ಮನ-ಪ್ರಾಣಗಳಲ್ಲಿ ಸಮತೆ-ಸ್ಥಿರತೆಗಳೂ ಹೃದಯದಲ್ಲಿ ಉತ್ಕಟ ಆಂತರಿಕ (psychic) ಭಾವವೂ ಕೂಡಿರುವುದು ಅಸಾಧ್ಯವಲ್ಲ.

— ಶ್ರೀ ಅರವಿಂದರು

# ಪೂರ್ಣಯೋಗದಲ್ಲಿ ಕ್ರಿಯೆಯ ಸ್ಥಾನ

ದೈವೀ ಸಾಕ್ಷಾತ್ಕಾರದ ಸಾಧನೆಯಲ್ಲಿ ಕರ್ಮಯೋಗವನ್ನು ಒಂದು ಮಹತ್ತ್ವದ ಅಂಗವೆಂದು ಎಂದಿನಿಂದಲೂ ಪರಿಗಣಿಸಲಾಗಿದೆ. ಹೀಗಿದ್ದೂ ಅಧ್ಯಾತ್ಮಸಾಧನೆಯೆಂದರೆ ಕ್ರಿಯಾಶೂನ್ಯತೆಯೆಂಬ ಗ್ರಹಿಕೆ ಸಾಮಾನ್ಯ ಜನತೆಯಲ್ಲಿ ಹೇಗೋ ಬೆಳೆದು ಬಂದಿದೆ; 'ವೇದಾಂತಿಗಳು' ಎಂಬ ಪದವನ್ನು 'ನಿರುಪಯೋಗಿ ಜನ' ಎಂಬರ್ಥದಲ್ಲಿ ಉಪಯೋಗಿಸುವುದೂ ಉಂಟು. ಅಧ್ಯಾತ್ಮಸಾಧನೆಗೆ ತೊಡಗಿದವರು ಜ್ಞಾನಧ್ಯಾನಗಳಲ್ಲಿ ನಿರತರಾಗಿ ಕ್ರಿಯಾಶೂನ್ಯರಾಗುತ್ತಾರೆ ಎಂಬ ಅಭಿಪ್ರಾಯವಿಲ್ಲಿದೆ. ಇನ್ನೂ ಮುಂದುವರಿದು ಕ್ರಿಯಾಶೂನ್ಯತೆಯೇ ಅಧ್ಯಾತ್ಮ ಸಾಧನೆಯ ಲಕ್ಷಣವೆಂದು ಭಾವಿಸುವುದೂ ಉಂಟು. ಇಂತಹ ಭಾವನೆ ಬೆಳೆದುಬರುವುದಕ್ಕೆ ಕೆಲವೊಂದು ಧಾರ್ಮಿಕ ಪರಂಪರೆಗಳು, ಕೆಲವು ವೈರಾಗಿಗಳ ಸಂಪ್ರದಾಯಗಳು ಕಾರಣವಾಗಿರಬಹುದು. ಯೋಗಕ್ಕೂ ವೈರಾಗಿಗಳಿಗೂ ಸಂಬಂಧ ಕಲ್ಪಿಸುವ ಮೂಲಕ ಮೇಲ್ಕಂಡ ಅಭಿಪ್ರಾಯ ಬೆಳೆದು ಬಂದಿರಬೇಕು. ವೈರಾಗಿಗಳೆಲ್ಲರೂ ಅಧ್ಯಾತ್ಮಸಾಧಕರಾಗಿರಲಿಕ್ಕಿಲ್ಲ; ಅಧ್ಯಾತ್ಮಸಾಧಕರೆಲ್ಲರೂ ವೈರಾಗಿಗಳಾಗಬೇಕಾಗಿಯೂ ಇಲ್ಲ. ಜೀವಾತ್ಮ-ಪರಮಾತ್ಮರನ್ನೊಂದುಗೂಡಿಸುವ ಸಾಧನೆಯೇ ಯೋಗ. ಹೊಂದಿಕೊಂಡಿರುವುದು, ಒಂದುಗೂಡುವುದು ಎಂಬರ್ಥವೇ 'ಯೋಗ' ಪದದಲ್ಲಿದೆ. ಕ್ರಿಯೆಯಲ್ಲಿ ನಿರತರಾಗಿಯೂ ಪರಮಾತ್ಮನೊಂದಿಗೆ ಹೊಂದಿಕೊಳ್ಳುವ ಸಾಧನೆಯನ್ನು ಮಾಡುವುದು ಸಾಧ್ಯವಿದೆ; ಇಷ್ಟೇ ಅಲ್ಲ, ಅದು ಅನಿವಾರ್ಯವೂ ಆದೀತು.

ಶ್ರೀ ಅರವಿಂದರು ಪೂರ್ಣಯೋಗವನ್ನು ಬೋಧಿಸುತ್ತಿದ್ದಾರೆ. ಭಕ್ತಿ, ಕರ್ಮ, ಜ್ಞಾನ ಇವೆಲ್ಲವುಗಳನ್ನೂ ಆ ಯೋಗವು ಒಳಗೊಳ್ಳುತ್ತಿದೆ. ಪೂರ್ಣಯೋಗದಲ್ಲಿ ಆವುದನ್ನೂ ಕಡೆಗಣಿಸುವಂತಿಲ್ಲ. ಮಾನಸಿಕ, ಅತಿಮಾನಸಿಕ ಇವುಗಳ ಮಧ್ಯದಲ್ಲಿರುವ ತೆರೆಯನ್ನು ತೊಡೆದು ಹಾಕುವುದೇ ಯೋಗದ ಕಾರ್ಯವೆಂದು ಶ್ರೀ ಅರವಿಂದರು ತಿಳಿಯುತ್ತಾರೆ. ಸಾಧಕನಿಗೆ ಅವಿಭಾಜ್ಯ ಏಕತೆಯ ಚೇತನವನ್ನು ತಂದುಕೊಡುವಲ್ಲಿ ಯೋಗವು ಸಾಧನವಾಗುತ್ತಿದೆ. ಯೋಗ ಸಾಧನೆಯಲ್ಲಿ ಕ್ರಿಯೆಯನ್ನು ಬಿಡಬೇಕಾಗಿಲ್ಲ. ಮಾಡುವ ಕ್ರಿಯೆಯನ್ನು ಕುರಿತು ಸರಿಯಾದ ಮನೋಭಾವ ತಲೆದೋರಬೇಕಾದುದು ಮಾತ್ರ ಆವಶ್ಯಕ. ಕ್ರಿಯೆಯನ್ನು ಮಾಡುವುದು ಫಲಾಪೇಕ್ಷೆಯಿಂದಲ್ಲ; ಅಹಂಕಾರಕ್ಕಾಗಿಯೂ ಅಲ್ಲ; ಲೋಭ ಮೋಹಗಳ ಪ್ರೇರಣೆಯಿಂದಲ್ಲ; ಆದರೆ ದೈವೀ ಪ್ರಯೋಜನಕ್ಕಾಗಿ. ಈ ಭಾವನೆ ನಮ್ಮಲ್ಲಿ ಮೊಳೆತು ಬಲಿತಂತೆ ಯೋಗದಲ್ಲಿ ಪ್ರಗತಿಯಾಗುವುದು. ಆದ್ದರಿಂದ ಪೂರ್ಣಯೋಗದಲ್ಲಿ ಕ್ರಿಯಾಶೂನ್ಯತೆಗೆ ಅವಕಾಶವೇ ಇಲ್ಲ. ಕ್ರಿಯೆಯನ್ನು ಶ್ರೇಷ್ಠವಾದ ದೈಹಿಕ ಪ್ರಾರ್ಥನೆಯೆಂದು ಭಾವಿಸಲಾಗಿದೆ. ಕ್ರಿಯೆಯು ನಾವು ದೇವನಿಗೆ ಸಲ್ಲಿಸಬೇಕಾದ ಅರ್ಪಣೆಯಾಗಬೇಕು. ಸಾಧಕನು ತಾನು ಮಾಡುತ್ತಿರುವ ಕ್ರಿಯೆಯ

ಬಗೆಗಿರುವ ತನ್ನ ಅಹಂಕಾರವನ್ನು ತೊರೆಯಬೇಕು. ತಾನೊಂದು ದೈವೀ ಸಾಧನವಾಗಿ ಕ್ರಿಯೆಯನ್ನು ನಡೆಯಿಸಬೇಕು. ಕ್ರಿಯೆಯನ್ನು ನಡೆಯಿಸುವವನು ತಾನಲ್ಲ, ದೇವನು; ತಾನೊಂದು ದೈವೀ ವಾಹಕ ಮಾತ್ರ ಎಂಬ ಭಾವನೆ ಬಲಿಯಬೇಕು. ಆದರೆ ಈ ಭಾವನೆ ಬಲಿತಂತೆ ತಾನೇ ದೈವೀ ವಾಹಕ ಎಂಬ ಹೆಮ್ಮೆಗೆ ಬಲಿಬೀಳದಂತೆ ಜಾಗರೂಕತೆ ವಹಿಸಬೇಕು. ಇನ್ನೂ ಮುಂದುವರಿದು ನಾನು, ದೇವ ಎಂಬ ದ್ವೈತಭಾವನೆಯೂ ಅಳಿದು ಹೋಗಬೇಕು. ಮಾನವರಲ್ಲಿ ಈ ಬಗೆಯ ಬೆಳವಣಿಗೆಯು ಕ್ರಿಯಾಶೂನ್ಯತೆಯಿಂದ ಉಂಟಾಗಲಾರದು. ಯೋಗಸಾಧನೆಯೆಂದರೆ ನಮ್ಮ ದೈನಂದಿನ ಜೀವನದ ಬಗೆಗೆ ವಿರಕ್ತಿಯೇನೂ ಅಲ್ಲ; ನಮ್ಮ ಸುತ್ತಲೂ ಇರುವ ಜೀವನದ ಬಗೆಗೆ ಹೊಸ ಚೇತನವನ್ನು ತಂದು ಕೊಡುವ ಪ್ರಯತ್ನವದು. "Life is the field of a divine manifestation, not yet complete. Here, in life, on earth, in the body, we have to unveil the Godhead. Life, then, we must accept in our Yoga in order utterly to transmute." ಪೂರ್ಣಯೋಗದ ಗುರಿಯನ್ನು ಕುರಿತ ಶ್ರೀ ಅರವಿಂದರ ಈ ಉಕ್ತಿಗಳು ಅರವಿಂದದರ್ಶನದ ತಿರುಳನ್ನು ಸರಿಯಾಗಿ ಹೊರಹೊಮ್ಮಿಸುತ್ತಿವೆ. "ಇಲ್ಲಿ, ಈ ಭೂಮಿಯಲ್ಲಿ, ಈ ದೇಹದಿಂದ ದೈವೀ ಆವಿರ್ಭಾವವಾಗಬೇಕಾಗಿದೆ. ನಮ್ಮ ಯೋಗದಲ್ಲಿ ಜೀವನವನ್ನು ಆಮೂಲಾಗ್ರ ಮಾರ್ಪಾಟುಗೊಳಿಸಲೆಂದೇ ಅದನ್ನು ಸ್ವೀಕರಿಸಬೇಕಾಗಿದೆ" ಎಂಬ ಸ್ಪಷ್ಟವಾದ ಅಭಿಪ್ರಾಯ ಈ ಉಕ್ತಿಗಳಲ್ಲಿದೆ. ಈ ಜೀವನವು 'ಕರ್ತಾರನ ಕಮ್ಮಟ'ವೆಂಬ ಬಸವಣ್ಣನವರ ವಚನವೂ 'ಈಸಬೇಕು ಇದ್ದು ಜೈಸಬೇಕು' ಎಂಬ ಪುರಂದರದಾಸರ ವಚನವೂ ಇದೇ ಮಾತನ್ನು ಹೇಳುತ್ತವೆ. ಈ ಜೀವನವನ್ನು ಬಿಟ್ಟು ಓಡಿಹೋಗಬೇಕೆಂಬ ಅಭಿಪ್ರಾಯವೇನೂ ಇಲ್ಲಿಲ್ಲ. ಜೀವನವನ್ನು,—ಅದಕ್ಕೆ ಹೊಂದಿಕೊಂಡು ಬರುವ ತೊಂದರೆಗಳನ್ನು— ಸಾಧಕನು ಎದುರಿಸಲೇ ಬೇಕು. ಆದುದರಿಂದ ಜೀವನಕ್ಕೆ ಅಂಟಿಕೊಂಡು ಬಂದಿರುವ ಕ್ರಿಯೆಯನ್ನು ಸಾಧಕನು ತೊರೆಯಲಾರ. ಕ್ರಿಯೆಗೆ ಮಹತ್ತ್ವದ ಸ್ಥಾನವಿದೆ, ಶ್ರೀ ಅರವಿಂದ ದರ್ಶನದಲ್ಲಿ. ಈ ಮಾತನ್ನು ತಮ್ಮೊಂದು ಪತ್ರದಲ್ಲಿ ಶ್ರೀ ಅರವಿಂದರು ಹೀಗೆ ಸ್ಪಷ್ಟಗೊಳಿಸಿದ್ದಾರೆ: "ಹಿಂದಿನ ಯೋಗಗಳ ಉದ್ದೇಶವು ಜೀವನದಿಂದ ಸಿಡಿದುಹೋಗಿ ದೇವನನ್ನು ಅರಸುವುದಾಗಿತ್ತು. ನಮ್ಮ ಇಂದಿನ ಯೋಗದ ಉದ್ದೇಶವು ಜೀವನದಿಂದಲೇ ದೇವನನ್ನು ಸಾಧಿಸಿ, ಆ ದೈವೀ ಶಕ್ತಿಯನ್ನು ನಮ್ಮ ಜೀವನದಲ್ಲಿ ಸ್ಥಾಪಿಸುವುದಾಗಿದೆ. ಅಂತೆಯೆ **ನಮ್ಮ ಯೋಗದಲ್ಲಿ ಕ್ರಿಯೆ ಅನಿವಾರ್ಯವಾಗಿದೆ.**"

ದೈವೀ ಭಾವದ ಚೇತನ ನಮ್ಮಲ್ಲಿ ಅರಳುವುದೇ ಯೋಗಸಾಧನೆಯ ಉದ್ದೇಶ. ಈ ಉದ್ದೇಶವನ್ನು ಸಾಧಿಸಲು ಧ್ಯಾನವು ಒಂದು ಸಾಧನೆ; ಕ್ರಿಯೆಯು ಇನ್ನೊಂದು; ಭಕ್ತಿಯು ಮಗುದೊಂದು. ಆದರೆ ನಮ್ಮ ಸುತ್ತಲಿನ ಜೀವನದಲ್ಲಿ ನವೀನ ಸ್ಥಿತ್ಯಂತರವುಂಟಾಗಬೇಕಾದರೆ ಕ್ರಿಯೆಯು ತುಂಬ ಆವಶ್ಯಕವೆಂದು ಶ್ರೀ ಅರವಿಂದರು ಉದ್ಘೋಷಿಸಿದ್ದಾರೆ. ಅರ್ಥಾತ್ ಶ್ರೀ ಅರವಿಂದರ ತತ್ತ್ವದಲ್ಲಿ ಕ್ರಿಯಾಶೂನ್ಯತೆಯನ್ನು ಕಾಣಹೋಗುವುದು ಅರವಿಂದದರ್ಶನದ ಅಪಾರ್ಥ ಮಾಡಿಕೊಂಡಂತೆಯೆ ಸರಿ.

ಭಗವದ್ಗೀತೆಯು ಕರ್ಮಯೋಗಕ್ಕೆ ಪ್ರಾಶಸ್ತ್ಯ ಕೊಟ್ಟಿದೆ. ಅದರ ಮಹತಿಯನ್ನರಿತೇ ಶ್ರೀ ಅರವಿಂದರು ಗೀತೆಯನ್ನು ಕುರಿತು 'Essays on Gita' ಎಂಬ ಘನವಾದ ಗ್ರಂಥ

ಬರೆದಿದ್ದಾರೆ. ಅಂತರ್ಮುಖರಾಗಲು ಕ್ರಿಯೆಯು ತೊಡಕಾಗುವುದೆಂಬ ವಿಚಾರಸರಣಿಯನ್ನು ಶ್ರೀ ಅರವಿಂದರು ಒಪ್ಪುವುದಿಲ್ಲ. ಅಂತರ್ಮುಖ, ಬಹಿರ್ಮುಖವೆಂಬ ತಾರತಮ್ಯವು ಬರಿಯ ಕ್ರಿಯೆಯಲ್ಲಿಲ್ಲ; ಕ್ರಿಯೆಯನ್ನು ಆಚರಿಸುವ ದೃಷ್ಟಿಯಲ್ಲಿದೆ. ನಮ್ಮ ದೃಷ್ಟಿ ಅಂತರ್ಮುಖವಾಗಿದ್ದರೆ ಕ್ರಿಯೆಯು ದೈವೀ ಸಾಕ್ಷಾತ್ಕಾರದ ಸಾಧನೆಯಾಗುತ್ತಿದೆ. ಕ್ರಿಯೆಯ ಒಡೆಯನಾದ ದೇವನನ್ನು ಸಂಧಿಸಲು ಕ್ರಿಯೆಯು ಒಳ್ಳೆಯ ಸಾಧನವಾಗಿದೆ. ಬಹಿರ್ಮುಖವಾಗಿರುವ ನಮ್ಮ ಜೀವನವನ್ನು ಅಂತರ್ಮುಖವನ್ನಾಗಿಸುವ ಉದ್ದೇಶಸಾಧನೆಯಲ್ಲಿ ಕ್ರಿಯೆಗಿರುವ ಮಹತ್ತ್ವವನ್ನು ಶ್ರೀ ಅರವಿಂದರು ಸ್ಪಷ್ಟಗೊಳಿಸಿದ್ದಾರೆ. ಬರಿಯ ಧ್ಯಾನದಿಂದ ಸಾಧಿಸಲಾರದ ಉದ್ದೇಶವನ್ನು ಕೂಡ ಕ್ರಿಯೆಯು ಈಡೇರಿಸಬಲ್ಲುದು.

ಇದುವರೆಗೆ ಕ್ರಿಯೆಯ ಆವಶ್ಯಕತೆಯನ್ನು ವಿವೇಚಿಸಲಾಯಿತು. ಆದರೆ ಕ್ರಿಯೆಯನ್ನು ನಡೆಯಿಸುವಾಗ ಸರಿಯಾದ ಮನೋಭಾವ, ಉಚಿತವಾದ ಚೇತನ ಇವುಗಳಿದ್ದರೆ ಮಾತ್ರ ಕ್ರಿಯೆಯು ದೈವೀ ಸಾಕ್ಷಾತ್ಕಾರದ ಸಾಧನೆಯಾಗುವುದೆಂಬುದನ್ನು ಮರೆಯುವಂತಿಲ್ಲ.

ಸ್ವಂತದ ಪ್ರಯೋಜನಕ್ಕಾಗಿ ಇಲ್ಲವೆ ನಮ್ಮ ಅಹಂಭಾವನೆಯ ಸಮಾಧಾನಕ್ಕಾಗಿ ನಾವು ಕ್ರಿಯೆಯನ್ನಾಚರಿಸುವುದುಂಟು. ಪರೋಪಕಾರಕ್ಕೆಂದು, ಲೋಕೋದ್ಧಾರಕ್ಕೆಂದು ಕೈಕೊಳ್ಳುವ ಕ್ರಿಯೆಯಲ್ಲಿ ಈ ಅಹಂಭಾವನೆಯು ಸುಳಿಯಬಹುದು. ಸ್ವಂತದ ಪ್ರಯೋಜನಕ್ಕಾಗಿ ನಡೆಯುವ ಕ್ರಿಯೆ ಒಂದು ರೀತಿಯದು; ಸ್ವಾರ್ಥತ್ಯಾಗವೆಂದು ಹೇಳಿ 'ಕೀರ್ತಿಗೋಸುಗ ಕೋಳುಹೋಗುವ' ಮನೋಭಾವದಿಂದ ನಡೆಯುವ ಕ್ರಿಯೆ ಇನ್ನೊಂದು ಮಾದರಿಯದು. ಪ್ರಾಚೀನ ಕನ್ನಡ ಕವಿ ಚಾಮರಸನು ಸಿದ್ಧರಾಮನ ಪ್ರಸಂಗದಲ್ಲಿ ಇಂತಹ ಮಾದರಿಯನ್ನು ಯಥಾರ್ಥವಾಗಿ ಬಣ್ಣಿಸಿದ್ದಾನೆ.

ನೂಲ ಸಂಕಲೆಗಡಿದು ಕನಕದ
ಕೋಳವನು ಕಾಲಿಂಗೆ ಕೀಲಿಪ
ಕಾಳುಮತಿಯವನಂತೆ.................... ।
ಬಾಳಿಕೆಯನತಿಗಳೆದು ಮರಳಿಯು
ಬೋಳುಮುಂಡೆಯ ಕೀರ್ತಿಗೋಸುಗ
ಕೋಳುಹೋದನೆ................ ...... ॥
ಚಿಕ್ಕ ಸಂಸಾರವನು ಸಡಲಿಸಿ
ಹೊಕ್ಕನಲ್ಲಾ ಹಿರಿಯ ಸಂಸಾ-
ರಕ್ಕಟಾ ವಿಖ್ಯಾತಿ-ಪೂಜಾ-ಲಾಭದಿಚ್ಛೆಯಲಿ। (ಪ್ರಭುಲಿಂಗಲೀಲೆ)

'ವಿಖ್ಯಾತಿ-ಪೂಜಾ-ಲಾಭದಿಚ್ಛೆ'ಯಿಂದ ನಡೆಯಿಸಲಾಗುವ ಕ್ರಿಯೆಯು ಸಂಕುಚಿತ ಸ್ವಾರ್ಥ ದೃಷ್ಟಿಯ ಕ್ರಿಯೆಯಂತೆ ತ್ಯಾಜ್ಯವೆಂದೇ ಭಾವಿಸಬೇಕು. ಪರೋಪಕಾರ-ಲೋಕೋದ್ಧಾರಗಳ ತೆರೆಯಲ್ಲಿ ಅಡಗಿದ್ದ ಅಹಂಕಾರವು ಹೆಚ್ಚು ಪ್ರಖರವೂ ಆಗಬಹುದು. ಅಂತೆಯೇ ಶ್ರೀ ಅರವಿಂದರ ಬೋಧೆಯಲ್ಲಿ ಈ ಮಾದರಿಯ ಕ್ರಿಯೆಯ ಬಗೆಗೆ ವಿಶೇಷ ಜಾಗರೂಕತೆಯನ್ನು ಸೂಚಿಸಲಾಗಿದೆ. ಮಾನವನ ಈಗಿನ ಮಾನಸಿಕ ಮಟ್ಟದಲ್ಲಿ ಇಂತಹ ದೋಷ ಅನಿವಾರ್ಯ. ಅಂತೆಯೆ ನೈತಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಸುಧಾರಣೆಗೆಂದು ನಡೆಯಿಸಲಾಗುವ

ಕ್ರಿಯೆಗಳ ಬಗೆಗೆ ಮಹರ್ಷಿ ಅರವಿಂದರು ಸಾವಧಾನವನ್ನು ಸೂಚಿಸುತ್ತಾರೆ. 'ಖ್ಯಾತಿ-ಪೂಜಾ–ಲಾಭದಿಚ್ಛೆ'ಯ ಪ್ರಲೋಭನವು ಸಂಕುಚಿತ ಸ್ವಾರ್ಥಕ್ಕಿಂತಲೂ ಹೆಚ್ಚು ಭಯಾನಕವಾಗಬಹುದೆಂಬುದನ್ನು ಅರಿತಾಗ ಈ ಸಾವಧಾನವು ಸಮರ್ಪಕವೆಂದೇ ತೋರುತ್ತಿದೆ. ಕ್ರಿಯೆ ವ್ಯಕ್ತಿಯದೇ ಆಗಿರಲಿ, ಸಮಷ್ಟಿಯದೇ ಆಗಿರಲಿ, ಉಚಿತ ಮನೋಭಾವ ಮಾತ್ರ ಆವಶ್ಯಕ. ಮಾಡಬೇಕಾದ ಕ್ರಿಯೆಯೆಲ್ಲ ದೇವನಿಗಾಗಿ, ದೈವೀ ಪ್ರೇರಣೆಯಿಂದ—ಎಂಬ ಮನೋಭಾವ ನೆಲೆಗೊಂಡಾಗ ಮಾತ್ರ ಕ್ರಿಯೆಯು ದೈವೀ ಸಾಕ್ಷಾತ್ಕಾರದ ಸಾಧನೆಗೆ ಪೋಷಕವಾಗುತ್ತಿದೆ. ಚಾಮರಸ ಕವಿಯ ನುಡಿಗಳಲ್ಲಿ ಹೇಳುವುದಾದರೆ 'ಖ್ಯಾತಿ-ಪೂಜಾ-ಲಾಭದಾಶಾ-ಪ್ರೀತಿಯಿಂದಲಿ.. ....ಮಾಡಿದಡೆ' ಮುಕ್ತಿಯಿಲ್ಲ; ನಿಜವನು ಅರಿತಂತೆಯೂ ಅಲ್ಲ. ಈ ಬಗೆಯ ಕ್ರಿಯೆಯಿಂದ 'ಜೀವ-ಪರಮರನು ಒಂದುಮಾಡುವ ಶಕ್ತಿಭಕ್ತಿಯ ಹೊಂದಿಕೆ'ಯೂ ಇಲ್ಲ. ಸಂತತವೂ ಶರಣಪದದಲ್ಲಿ ನಿಂತು ಪರಮಾನಂದಸುಖಭರಿತನಾಗಿ ನಿರ್ಲೇಪವಾಗಿರುವುದಾದರೆ ಮಾತ್ರ ಪರಮನಾಗಲು ಸಾಧ್ಯ. ಅರ್ಥಾತ್, ಯೋಗಸಾಧನೆಯಲ್ಲಿ ಕ್ರಿಯಾಶೂನ್ಯತೆ ಇರಬೇಕಾಗಿಲ್ಲ; ಕ್ರಿಯೆಯ ಆಚರಣೆಯಲ್ಲಿ ನಿರ್ಲೇಪಭಾವವಿರಬೇಕಾದುದು ಮಾತ್ರ ಮುಖ್ಯವಾದ ಮಾತು. ಚಾಮರಸ ಕವಿಯು ಅಲ್ಲಮಪ್ರಭುವಿನಿಂದ ಸಿದ್ಧರಾಮನಿಗೆ "ಹಸನು ಮಡಿ ಹರಗಿದ ಹೊಲದಲಿ ಕಸವ ಬಿತ್ತುವ ಮರುಳನಂತೆ ಅಂತರ್ಮಾರ್ಗದ ಓಜೆಗೆ ಬಂದ ತನುಮನವ ಕಿಸುಕುಳದ ಬಹಿರಂಗದಿಚ್ಛೆಯ ಬೆಸನದಲಿ ಬೇಯಿಸದೆ ನಿನ್ನಯ ವಸವ ಮಾಡಲು ನೀನೆ ನಿತ್ಯನು" ಎಂಬುದಾಗಿ ಹೇಳಿಸುತ್ತಾನೆ. ಈ ತಿರುಳನ್ನು ಸರಿಯಾಗಿ ಅರಿತು ಕ್ರಿಯೆಗೆ ತೊಡಗುವ ಜಾಗರೂಕತೆ ಕ್ರಿಯೆಯನ್ನು ಕೈಕೊಂಡಾಗ ಬೇಕಾಗುತ್ತದೆ. ಕೆರೆ ಅರವಟ್ಟಿಗೆಗಳನ್ನು ಕಟ್ಟಿಸುತ್ತ ಅಹಂಭಾವನೆಯಲ್ಲಿದ್ದ ಸಿದ್ಧರಾಮನನ್ನು ಅಲ್ಲಮಪ್ರಭು ಜರಿದು ನುಡಿದಾಗ, ಬಸವಣ್ಣನವರ ಮಹಾಮನೆಯಲ್ಲಿ ಕಾಯಕದ ಆಚರಣೆಯಲ್ಲಿ ಇಂತಹದೊಂದು ಭಾವನೆ ತಲೆದೋರಬಹುದೆಂದು ಅದನ್ನು ಖಂಡಿಸಿದಾಗ ಇಂತಹ ಜಾಗರೂಕತೆಯ ಮಹತ್ತ್ವ ಹೊರಹೊಮ್ಮಿದೆ.

ದೈಹಿಕ ಕ್ರಿಯೆಯು ಚಿತ್ತಶುದ್ಧಿಗೆ ಸಹಾಯಕಾರಿ. ಕ್ರಿಯೆಯನ್ನು ಆಚರಿಸುವಾಗ ಉಚಿತ ಮನೋಭಾವವಿದ್ದರೆ ಮಾಡಿದ ಕ್ರಿಯೆಯು ಕರ್ಮಯೋಗವಾಗಿ ದೈವೀ ಸಾಕ್ಷಾತ್ಕಾರದ ಸಾಧನವಾಗುತ್ತಿದೆಯೆಂಬ ಮಾತನ್ನು ಮರೆಯುವಂತಿಲ್ಲ. ಯೋಗಸಾಧಕನಿಗೆ ಕ್ರಿಯೆ ಬೇಕೇ ಬೇಕು; ಇದನ್ನು ತೊರೆಯಬೇಕೆಂಬ ಉಪದೇಶ ಶ್ರೀ ಅರವಿಂದರ ದರ್ಶನದಲ್ಲಿ ಎಲ್ಲಿಯೂ ಇಲ್ಲ.

ಆದರೆ ಕ್ರಿಯೆಯೇ ಕೊನೆಯ ಗುರಿಯಲ್ಲ. ಅಂತೆಯೇ ಧ್ಯಾನವೂ ಅಲ್ಲ. ಕ್ರಿಯೆಯಾಗಲಿ ಧ್ಯಾನವಾಗಲಿ ದೈವೀ ಸಾಕ್ಷಾತ್ಕಾರದ ಪೂರ್ವಸಿದ್ಧತೆಗಳು ಮಾತ್ರ. ಧ್ಯಾನಕ್ಕಿರುವ ಮಹತ್ತ್ವವೇ ಕ್ರಿಯೆಗೂ ಇದೆ. 'Meditation is not greater than the Yoga of Works—ಧ್ಯಾನವು ಕರ್ಮಯೋಗಕ್ಕಿಂತ ದೊಡ್ಡದಲ್ಲ' ಎಂಬುದು ಶ್ರೀ ಅರವಿಂದರ ವಾಣಿಯಾಗಿದೆ. ಕ್ರಿಯೆ ನಡೆಯಿಸಬೇಕಾದ ನಿರ್ದಿಷ್ಟ ಅವಧಿಯಲ್ಲಿ ಧ್ಯಾನದಲ್ಲಿ ಮೈಮರೆಯಲಾಗದೆಂಬ ಸೂಚನೆಯನ್ನು ಅವರು ಒಂದೆಡೆ ಮಾಡಿದ್ದಾರೆ. ದೈವೀ ಸಂಪರ್ಕಕ್ಕಾಗಿ ಧ್ಯಾನದಂತೆಯೇ ಕ್ರಿಯೆಯನ್ನೂ ಉಪಯೋಗಿಸಬಹುದು.

ಭಕ್ತಿ, ಜ್ಞಾನ, ಕರ್ಮಗಳೆಂಬ ಸಾಧನತ್ರಯದಲ್ಲಿ ಕರ್ಮಯೋಗವು ಸುಲಭವಾದುದು. ಕರ್ಮ ಮಾಡುತ್ತಿರುವಾಗ ದೈವೀ ಚೇತನವನ್ನು ಬಲಿಸಿಕೊಳ್ಳುತ್ತಿರಬೇಕು. ದೈವೀ ಚೇತನವು

ಹಿಂದೆ ಉಳಿದು ಕರ್ಮದ ಅಹಂಭಾವವೇ ಬಲಿಯುತ್ತಿದ್ದರೆ ಅದು ಕರ್ಮಯೋಗವಾಗುವುದಿಲ್ಲ. ಕರ್ಮದ ಭ್ರಮೆಯಲ್ಲಿ ದೈವೀ ಚೇತನವನ್ನು ಮರೆಯತೊಡಗಿದ್ದ ಸಿದ್ಧರಾಮನನ್ನು ಅಲ್ಲಮಪ್ರಭು ಎಚ್ಚರಿಸಿದುದು ಇದಕ್ಕಾಗಿಯೇ. ಪ್ರಕೃತಿಯಿಂದ ಪುರುಷನನ್ನು ಬೇರ್ಪಡಿಸಲು ಕರ್ಮಯೋಗ ದಿಂದ ಸಾಧ್ಯವೆಂದು ಶ್ರೀ ಅರವಿಂದರು ಉಪದೇಶಿಸುತ್ತಾರೆ. ಅಂದರೆ ಕ್ರಿಯೆಯಲ್ಲಿ ತೊಡಗಿದ ಮಾನವನು ಬಾಹ್ಯ ಮಾನವೀಯ ಚೇತನೆಯಿಂದ ಅಂತರಾತ್ಮನನ್ನು ಬೇರ್ಪಡಿಸಿ ಶಾಂತ ವಾಗಿರಬೇಕು. ಕ್ರಿಯೆಯು ಬಾಹ್ಯವಾಗಿ ನಡೆಯುತ್ತಿದ್ದರೂ ಅಂತರಾತ್ಮನ ನಿಯಂತ್ರಣ-ಮಾರ್ಗ ದರ್ಶನಗಳಲ್ಲಿ ಕರ್ತೃವು ಮುನ್ನಡೆಯಬೇಕು. ಅಂತರಾತ್ಮನ ಸಂಬಂಧ ತಪ್ಪಿದರೆ ಕರ್ಮವು ಕೇವಲ ಕರ್ಮವಾಗುತ್ತಿದೆ, ಕ್ರಿಯೆಯಾಗುವುದಿಲ್ಲ. ಬಾಹ್ಯಕ್ರಿಯೆಗಳು ಕೇವಲ ಮೇಲ್ಭಾಗದ ತೆರೆಗಳಂತಿದ್ದು ಆಳದಲ್ಲಿ ಗಂಭೀರ ಶಾಂತಿ ನೆಲಸಿದ್ದು ಅಂತರಾತ್ಮನು ಜಾಗೃತನಾಗಿದ್ದರೆ, ಪರ ಮಾತ್ಮನೊಂದಿಗೆ ಯೋಗವು ಸಾಧ್ಯವಾಗುತ್ತದೆ. ಇದಕ್ಕೆ ಜನಕರಾಜನ ಉದಾಹರಣೆಯನ್ನು ಕೊಡಬಹುದು. ಕ್ರಿಯೆಯಲ್ಲಿ ತೊಡಗಿಯೂ ಸಿದ್ಧಿಯನ್ನು ಪಡೆದವನು ಜನಕರಾಜನು. ಇಲ್ಲಿ ಕ್ರಿಯೆಯು ದೈವೀ ಸಾಕ್ಷಾತ್ಕಾರಕ್ಕೆ ಹೇಗೆ ಪೋಷಕವಾಗುತ್ತಿದೆಯೆಂಬುದನ್ನು ಕಾಣಬಹುದು. ಅನುಭಾವ, ಧ್ಯಾನಗಳಿಂದ ಪಡೆಯಬಹುದಾದ ಪ್ರಯೋಜನವನ್ನೇ ಕ್ರಿಯೆಯಿಂದಲೂ ಪಡೆಯ ಬಹುದೆಂದು ಶ್ರೀ ಅರವಿಂದರು ಬೋಧಿಸುತ್ತಾರೆ.

ಕ್ರಿಯೆ ( ಕಾಯಕ ) ಬೌದ್ಧಿಕವಿರಬಹುದು, ಇಲ್ಲವೆ ದೈಹಿಕವಿರಬಹುದು. ದೈಹಿಕ ವಾದ ಕ್ರಿಯೆ ಕೆಳಗಿನ ಮಟ್ಟದ್ದೆಂದು ತಿಳಿಯಬೇಕಾಗಿಲ್ಲ. ಓದುವ ಇಲ್ಲವೆ ಬರೆಯುವ ಕ್ರಿಯೆ ಯಲ್ಲಿ ತೊಡಗಿದಾಗ ವಾಚನದ, ಲೇಖನದ ವಿಷಯದಲ್ಲಿ ಮನವು ನೆಟ್ಟು ದೈವೀ ಸಂಪರ್ಕದ ಅರಿವು ಮರೆತು ಹೋಗಬಹುದು. ಸಾಮಾನ್ಯರಿಗೆ ಹೀಗಾಗುವ ಸಂಭವವೂ ಹೆಚ್ಚು. ಆದರೆ ದೈಹಿಕ ಕ್ರಿಯೆಯಲ್ಲಿ ಹೀಗಾಗುವ ಹೆದರಿಕೆ ಕಡಿಮೆಯಿರುತ್ತದೆ. ಏಕೆಂದರೆ ದೈಹಿಕ ಕ್ರಿಯೆಯಲ್ಲಿ ಮನಸ್ಸಿನ ಬಾಹ್ಯಾಂಗವು ಮಾತ್ರ ಕ್ರಿಯೆಯಲ್ಲಿ ನಿರತವಾದರೆ ಸಾಕು. ಮನಸ್ಸಿನ ಆಂತರಿಕ ಅಂಗವು ಯಾವ ಬಂಧನವೂ ಇಲ್ಲದೆ ನಿಶ್ಚಲವಾಗಿದ್ದು ಅನುಭವ ಪಡೆಯಬಲ್ಲುದು. ಆದುದ ರಿಂದ ದೈಹಿಕ ಕ್ರಿಯೆಯು ಸಾಮಾನ್ಯರ ದೃಷ್ಟಿಯಿಂದ ದೈವೀ ಸಾಕ್ಷಾತ್ಕಾರಕ್ಕಾಗಿ ಹೆಚ್ಚು ಅನುಕೂಲವಾದ ಸಾಧನವಾಗಿ ಪರಿಣಮಿಸುವುದು.

ಪೂರ್ಣಯೋಗದಲ್ಲಿ ಮುಖ್ಯವಾಗಿ ಬೇಕಾದುದು ಮನೋಭಾವದಲ್ಲಿಯ ಬದಲಾವಣೆ ; —ಉಚಿತವಾದ ದೃಷ್ಟಿ, ಅಂತರಾತ್ಮನ ಜಾಗೃತಿ, ನವೀನ ಚೇತನ. ಕ್ರಿಯೆಯನ್ನಾಗಲಿ ದೈನಂದಿನ ವ್ಯವಹಾರವನ್ನಾಗಲಿ ತೊರೆಯದೆ ಅವುಗಳನ್ನೇ ಅಧ್ಯಾತ್ಮ ಸಾಧನೆಗಾಗಿ ಬಳಸಿ ಕೊಳ್ಳಬಹುದು. ಶ್ರೀ ಅರವಿಂದರ ಯೋಗವು ಜೀವನದಲ್ಲಿಯೇ ದೈವೀ ಶಕ್ತಿಯನ್ನು ಆಹ್ವಾನಿಸುವುದಾಗಿದೆ. ಅರ್ಥಾತ್ ಮಾನವ ಜೀವನಕ್ಕೆ ಹೊಂದಿಕೊಂಡೇ ಈ ಸಾಧನೆಯು ನಡೆಯಬೇಕಾಗಿದೆ. ಮಾನವ ಜೀವನದಲ್ಲಿ ಕ್ರಿಯಾಶೂನ್ಯತೆಯು ಹೇಗೆ ತಾನೇ ಸಾಧ್ಯ ? ಅಂತೆಯೇ ಯೋಗಸಾಧನೆಯೆಂದರೆ ಕ್ರಿಯಾಶೂನ್ಯತೆ ಎಂಬ ಗ್ರಹಿಕೆ ಶ್ರೀ ಅರವಿಂದರ ಯೋಗಕ್ಕಂತೂ ಅನ್ವಯಿಸಲಾರದೆಂಬುದು ಸುಸ್ಪಷ್ಟವಿದೆ.

**—ಸ. ಸ. ಮಾಳವಾಡ**

# ಸ್ವಾನುಭವ

ಶ್ರೀ ಗುರು ಅರವಿಂದರ ಈ ಪಥವು
ಮಾಗುವ ಜೀವಕೆ ಸಹಜವು, ಹಿತವು !—
ಹಾಡುವೆ ಹೃದಯದ ಮುದವುಕ್ಕೇರಿ,
ನೀಡಿದ ತನುಮನಗಳ ಕಾವೇರಿ !

ತೇದಿಹೆ ತೇದಿಹೆ ದಿನವೂ ದಿನವೂ
ಕಾದಿಹೆ ಕಾದಿಹೆ ಕ್ಷಣವೂ ಕ್ಷಣವೂ—
ಗುರುವಿನ ಕೃಪೆಯದು ಸುರಿದೋ ಸುರಿದೂ
ಹರಿವುದು ನನ್ನೀ ಬಾಳೊಳು ಬೆರೆದು !

* *

ಶ್ರೀ ತಾಯಿಯು ಬಳಿ ಸಾರೆನು ಎಂದು
ಈ ತುಂಟನು ಹಟ ಹಿಡಿದನು ಅಂದು—
ಆ ತಾಯಿಯ ಹರಕೆಯು ಕೈ ಬಂದು
ಈ ತರಳನ ತಾನೆತ್ತಿತೊ ಇಂದು !

ಬೆಳಗಿನ ಕನಸಿನೊಳನುಭವವುಂಡೆ
ನಳಿನಗಳೆಲ್ಲಾ ತೆರೆದುದ ಕಂಡೆ—
ನಾವರ್ಘ್ಯವ ಪಿಡಿದಿರೆ, ರಸದಾಯಿ
ತಾವೂ ಬೆರೆದರು ನಮ್ಮೊಳು—ತಾಯಿ !

* *

ಮಧ್ಯಾಹ್ನದ ಕನಸಿದು: ನಾವ್ ಸೇರಿ
ಇದ್ದೆವು ದೇಗುಲದಲಿ ನೆಲೆಯೂರಿ—
ಪಾವನಗೊಳಿಸಲು ಶ್ರೀ ಅರವಿಂದರು
ಧಾವಿಸಿ ನಮ್ಮೆಡೆ ತಾವೇ ಬಂದರು !

ಸ್ವಾನುಭವ

ನಾವಿತ್ತಿಹ ಕಂಬಳಿಯೋ ಹರುಕ;
ತಾವದರೊಳೆ ತೋರಿದರೋ ಮರುಕ—
"ಮಾತಾರ್ ಮಂತ್ರಬಿಚಾರ್ ಅನಂತೀರ್"*
ಈ ತೆರ ಬೋಧಿಸೆ, ಮುನ್ನಡೆಯಿತು ತೇರ್ !

* ಇದು ವಂಗ ವಾಕ್ಯ. ಮಾತೆಯ ಮಂತ್ರವಿಚಾರವೆಲ್ಲಾ ಅನಂತತೆಯನ್ನು ಕುರಿತುದು ಎಂದರ್ಥ.

—ಪ್ರಹ್ಲಾದ ನರೇಗಲ್ಲ

---

ನೀನು ಧ್ಯಾನವೆಂದು ಏತಕ್ಕೆನ್ನುವಿ ? ಕಣ್ಣುಮುಚ್ಚಿ ಮನಸ್ಸನ್ನೇಕಾಗ್ರಗೊಳಿಸುವುದಕ್ಕೋ ? ಸತ್ಯ ಚೇತನವನ್ನು ಕೆಳಗೆ ಆಹ್ವಾನಿಸಲು ಅದು ಒಂದು ರೀತಿ ಮಾತ್ರ. ಸತ್ಯಸಂವಿತ್ತಿನೊಡನೆ ಹೊಂದಿಕೊಳ್ಳುವುದು ಇಲ್ಲವೆ ಅದರ ಅವತರಣದ ಅನುಭೂತಿಯನ್ನು ಪಡೆಯುವುದು—ಇದು ಮಾತ್ರವೇ ಮಹತ್ತ್ವದ ಸಂಗತಿಯಾಗಿದೆ; ಅದು ರೂಢಿಬದ್ಧ ಮಾರ್ಗವನ್ನು ಬಿಟ್ಟು ಪ್ರಾಪ್ತವಾದರೆ ಒಳ್ಳೆಯದೇ. ( ನನಗೆ ಅದು ಯಾವಾಗಲೂ ಹಾಗೆಯೆ ಬಂದಿತು. ) ಧ್ಯಾನವು ಒಂದು ಸಾಧನ ಇಲ್ಲವೆ ಯುಕ್ತಿಮಾತ್ರವಾಗಿದೆ; ನಡೆದಾಡುವಾಗಲೂ ಕೆಲಸ ಮಾಡುವಾಗಲೂ ಮಾತನಾಡುವಾಗಲೂ ಸಾಧನಮಗ್ನನಾಗಿರುವುದೇ ನಿಜವಾದ ಅಂತರ್ಗತಿಯಾಗಿದೆ.

—ಶ್ರೀ ಅರವಿಂದರು

# ಶ್ರದ್ಧೆ

## (೧)

( ಶ್ರೀ ಅರವಿಂದರ ' **More Lights on Yoga** " ಎಂಬ ಗ್ರಂಥದಲ್ಲಿಯ " **Faith** " ಎಂಬ ಪರಿಚ್ಛೇದದ ಅನುವಾದ)

ಶ್ರದ್ಧೆ ಬೇಕು ದೈವಿಕತೆಯಲ್ಲಿ! ಶ್ರದ್ಧೆ ಬೇಕು ದೈವೀಪ್ರಸಾದದಲ್ಲಿ; ಸಾಧನೆಯ ಸತ್ಯತೆಯಲ್ಲಿ; ಮನಸ್ಸಿನ, ಪ್ರಾಣದ, ದೇಹದ ಅಡೆತಡೆಗಳನ್ನೆಲ್ಲ ದುರಿಸಿ ಆತ್ಮವು ಕೊನೆಗೆ ಗಳಿಸಲಿರುವ ಗೆಲುವಿನಲ್ಲಿ! ಶ್ರದ್ಧೆಯಿರಲಿ ಸಾಧನಮಾರ್ಗದಲ್ಲಿ ಮತ್ತು ಗುರುವಿನಲ್ಲಿ; ಹೆಕೆಲ್, ಹಕ್ಸ್ಲೇ ಇಲ್ಲವೆ ಬರ್ಟ್ರ್ಯಾಂಡ್ ರಸೆಲ್ಲರ ತತ್ತ್ವವಿವೇಚನೆಗಳಲ್ಲಿ ಉಲ್ಲೇಖಿಸಲ್ಪಡದಿದ್ದ ಸಂಗತಿಗಳ ಅನುಭೂತಿಯಲ್ಲಿ; --ಏಕೆಂದರೆ ಈ ಸಂಗತಿಗಳು ಅಸತ್ಯವಾದರೆ ಯೋಗದಲ್ಲಿ ಹುರುಳಿಲ್ಲ.

* * * * *

ಭೌತಿಕ ಜಗತ್ತಿನಲ್ಲಿ ಅಸಾಮಾನ್ಯತೆ (abnormal) ತುಂಬಿದೆ; ಸಾಮಾನ್ಯಕ್ಕೆ ಅತೀತವಾದುದೂ (super-normal) ಇದೆ. ಇಂಥ ವಿಷಯಗಳನ್ನು ಕುರಿತು ನಮ್ಮ ದೃಷ್ಟಿ ಹೇಗಿರಬೇಕು? ಶ್ರದ್ಧೆಯ ಮಾತನ್ನು ಒಂದಿಷ್ಟು ಬದಿಗಿಟ್ಟೇ ವಿಚಾರ ಮಾಡೋಣ. ಪೂರ್ವಗ್ರಹದೂಷಿತ ಅಪನಂಬಿಕೆಯ ಮುಪ್ಪುರಿಯಿಂದ ಎಲ್ಲ ಕಡೆಯಿಂದ ತಮ್ಮನ್ನು ಬಿಗಿದುಕೊಂಡೂ ಸ್ವತಂತ್ರವಿಚಾರದವರೆಂದು ಮೆರೆಯುತ್ತಿರುವ ಬುದ್ಧಿಪ್ರಮಾಣವಾದಿಗಳು (Rationalists) ಏನೇ ಭಾವಿಸಲಿ, ನಿಜವಾಗಿಯೂ ಸ್ವತಂತ್ರ ಮನಸ್ಸುಳ್ಳ ಯಾವ ಬುದ್ಧಿವಂತ ಮನುಷ್ಯನೂ ಈ ಅಸಾಮಾನ್ಯತೆ–ಸಾಮಾನ್ಯಾತೀತತೆಗಳ ಬಗ್ಗೆ " ಇದು ಠಕ್ಕು! ಇದು ಮೋಸ!" ಎಂಬ ಕೂಗನ್ನು ಒಮ್ಮೆಲೇ ಎಬ್ಬಿಸಕೂಡದು. ತನಗೆ ಆ ಬಗ್ಗೆ ತಕ್ಕ ಅನುಭವ ಹಾಗೂ ಜ್ಞಾನ ವುಂಟಾಗುವ ವರೆಗೆ ನಿರ್ಣಯವನ್ನು ಮುಂದೂಡಬೇಕು. ಅಜ್ಞಾನದಿಂದ ಅಲ್ಲಗಳೆಯುವದು ಮತ್ತು ಜ್ಞಾನವಿಲ್ಲದೆ ಒಪ್ಪಿಗೆ ಕೊಡುವದು ಇವೆರಡೂ ಒಂದೇ ತರಗತಿಯ ಪ್ರಮಾದಗಳು.

* * * * *

ಆಧ್ಯಾತ್ಮಿಕ ಸಂಗತಿಗಳ ಬಗ್ಗೆ ಸಾಧಕನಲ್ಲಿ ಇರಬೇಕಾದ ಶ್ರದ್ಧೆ ಅಂಧಶ್ರದ್ಧೆಯಲ್ಲ, ಉಜ್ಜ್ವಲ ಶ್ರದ್ಧೆ; ಅದು ಬೆಳಕಿನ ಬಗ್ಗೆ ಶ್ರದ್ಧೆ, ಕತ್ತಲೆಯ ಬಗ್ಗೆ ಅಲ್ಲ. ಈ ಶ್ರದ್ಧೆಯನ್ನು ಸಂಶಯಾತ್ಮರಾದ ಬುದ್ಧಿವಾದಿಗಳು ಕುರುಡು ನಂಬಿಕೆ ಎಂದೆನ್ನುತ್ತಾರೆ. ಏಕೆಂದರೆ ಶ್ರದ್ಧೆಯು, ತೋರಿಕೆಯ ಸಂಗತಿ–ಹೊರನೋಟ ಮೊದಲಾದವುಗಳಿಂದ ತನ್ನ ಹಾದಿಯನ್ನು ಗೊತ್ತುಪಡಿಸುವದಕ್ಕೆ ಒಪ್ಪುವದಿಲ್ಲ. ಅದು ವಸ್ತುಗಳ ಹಿಂದೆ ಅಡಗಿರುವ ಸತ್ಯವನ್ನು ಅರಸುತ್ತದೆ, ಮತ್ತು

ಸಾಕ್ಷಿ-ಪ್ರಮಾಣಾದಿಗಳ ಊರುಗೋಲುಗಳ ಸಹಾಯವನ್ನು ನಿರಾಕರಿಸಿ ನಡೆಯುತ್ತದೆ. ಶ್ರದ್ಧೆಯೊಂದು ಅಂತಃಪ್ರೇರಣೆ (intuition); ಅನುಭವದಿಂದ ಖಚಿತಗೊಳ್ಳಲು ಸಮಯ ಕಾಯುವ ಅಂತಃಪ್ರೇರಣೆ ಮಾತ್ರ ಇದಲ್ಲ; ಆದರೆ ಅಂಥ ಅನುಭವಕ್ಕೆ ಸೋಪಾನವೂ ಅದು ಅಹುದು. ಸ್ವಪ್ರಯತ್ನದಿಂದ ಗುಣಹೊಂದುವೆನೆಂಬ ವಿಶ್ವಾಸವು ನನ್ನಲ್ಲಿ ಇದ್ದುದೇ ಆದರೆ, ತುಸು ಸಮಯದಲ್ಲಿಯೇ ನಾನು ಹಾಗೆ ಗುಣಹೊಂದಲು ತಕ್ಕ ಹಾದಿಯನ್ನು ಕಂಡುಕೊಳ್ಳುವೆನು. ಸ್ವಭಾವಪಲ್ಲಟವಾಗುವದರಲ್ಲಿ ( transformation ) ನಾನು ಶ್ರದ್ಧೆಯುಳ್ಳವನಾದರೆ, ಆ ಸ್ವಭಾವವನ್ನು ರೂಪಾಂತರಗೊಳಿಸುವ ಉಪಾಯವನ್ನೂ ಅದರ ಕ್ರಮವನ್ನೂ ನಿಃಸಂದೇಹವಾಗಿ ಕೊನೆಗಾದರೂ ಕಂಡುಕೊಳ್ಳುವೆ. ಆದರೆ ಪ್ರಾರಂಭದಲ್ಲಿಯೇ ಸಂಶಯಗೊಂಡು ಹೆಚ್ಚೆಚ್ಚು ಸಂಶಯಪಡುತ್ತ ಮುಂದೆ ಸಾಗಿದರೆ ಮಾರ್ಗಕ್ರಮಣ ಎಷ್ಟರಮಟ್ಟಿಗೆ ಮುಂದುವರಿದೀತು ?

* * * * *

ಶ್ರದ್ಧೆಯು ಅನುಭವವನ್ನು ಅವಲಂಬಿಸಿರುವದಿಲ್ಲ; ಅನುಭವಕ್ಕಿಂತಲೂ ಮೊದಲೇ ಇದ್ದಂಥ ಒಂದು ಬಗೆಯ ಮನಃಸ್ಥಿತಿಯದು. ಯಾರೊಬ್ಬರೂ ಯೋಗವನ್ನು ಕೈಕೊಳ್ಳುವದು ಸಾಧಾರಣವಾಗಿ ಅನುಭವದ ಆಧಾರದಿಂದಲ್ಲ, ಶ್ರದ್ಧೆಯ ಬಲದ ಮೇಲೆ. ಯೋಗ ಮತ್ತು ಅಧ್ಯಾತ್ಮ ಜೀವನಗಳಲ್ಲಿಷ್ಟೇ ಈ ಮಾತು ನಿಜವಾಗಿರದೆ ದೈನಂದಿನ ಸಾಮಾನ್ಯ ಬಾಳಿನಲ್ಲಿಯೂ ಇದು ನಿಜವಾಗಿದೆ. ಕರ್ಮವೀರರು, ತತ್ತ್ವಶೋಧಕರು, ಯಂತ್ರಶೋಧಕರು, ಜ್ಞಾನ-ನಿರ್ಮಾತೃಗಳು ಶ್ರದ್ಧೆಯಿಂದಲೇ ಮೊದಲ ಹೆಜ್ಜೆ ಇಟ್ಟು ಮುಂದುವರಿಯುತ್ತಾರೆ. ಕೈಕೊಂಡ ಕಾರ್ಯವು ಸಿದ್ಧಿಸುವ ವರೆಗೆ ಇಲ್ಲವೆ ತಮ್ಮ ಶ್ರದ್ಧೆಗೆ ಪ್ರಮಾಣವೊದಗುವ ವರೆಗೆ ಅವರು ನಿರಾಶೆ, ಅಪಜಯ, ವಿರುದ್ಧಪ್ರಮಾಣ ಮತ್ತು ನಿರಾಕರಣೆಗಳನ್ನು ಎದೆಗುಂದದೆ ಎದುರಿಸುತ್ತಾರೆ. ಏಕೆಂದರೆ ಅವರ ಅಂತರಾಳದಲ್ಲಿ " ಇದು ಸತ್ಯ; ಇದು ದಾರಿ; ಇದೇ ಮಾಡಬೇಕಾದ ಕಾರ್ಯ " ಎಂಬೊಂದು ನುಡಿ ಸ್ಫುರಿಸುತ್ತಿರುತ್ತದೆ. ರಾಮಕೃಷ್ಣ ಪರಮಹಂಸರು ಇದಕ್ಕೂ ಮುಂದೆ ಹೋಗಿ, ' ಅಂಧಶ್ರದ್ಧೆ ತಪ್ಪಲ್ಲವೇ ?' ಎಂಬೀ ಪ್ರಶ್ನೆಗೆ ' ಶ್ರದ್ಧೆ ಅಂಧವಾಗಿದ್ದರೆ ತಾನೆ ಶ್ರದ್ಧೆ ! ಶ್ರದ್ಧೆ ಅಂಧವಿರದಿದ್ದರೆ ಅದು ಮತ್ತೆ ಬೇರೆ ಏನಾದರೂ—ತರ್ಕಬದ್ಧ ಊಹೆ, ಪ್ರಮಾಣಪೂರ್ವಕವಾದ ಮನವರಿಕೆ ಇಲ್ಲವೆ ನಿರ್ಧಾರಗೊಂಡ ಜ್ಞಾನ ಇರುತ್ತದೆ ' ಎಂದಿದ್ದಾರೆ.

ಯಾವೊಂದು ಮಾತು ಇನ್ನೂ ವರೆಗೆ ವ್ಯಕ್ತವಾಗದೆ ಸಿದ್ಧವಾಗದೆ ಅನುಭವಕ್ಕೆ ಬರದೆ ಇದ್ದ ಕಾಲದಲ್ಲಿಯೂ, ಯಾವ ಪೂರ್ವಸೂಚನೆಗಳೂ ತೋರದಿದ್ದ ಕಾಲದಲ್ಲಿಯೂ, ನಮ್ಮೊಳಗಿನ ಜ್ಞಾನಪುರುಷನಿಗೆ ಆ ಮಾತು ಸತ್ಯವೆಂದು ಅನಿಸುವದಕ್ಕೆ ಇಲ್ಲವೆ ತಾನು ಅದನ್ನು ಬೆಂಬತ್ತಿ ಸಾಧಿಸಿಕೊಳ್ಳುವದು ಶ್ರೇಯಸ್ಕರವೆಂದು ಅವನಿಗೆ ತೋರುವದಕ್ಕೆ ಶ್ರದ್ಧೆಯೇ ಅಂತರಾತ್ಮನ ಸಾಕ್ಷಿಯಾಗಿದೆ. ನಮ್ಮ ಮನಸ್ಸಿನಲ್ಲಿ ನಿಶ್ಚಿತ ನಂಬಿಕೆ ಇಲ್ಲದಿರುವಾಗಲೂ, ಪ್ರಾಣವು ( the vital ) ಹೋರಾಡುತ್ತ ಬಂಡೇಳುತ್ತ ಅಲ್ಲಗಳೆಯುತ್ತಿರುವಾಗಲೂ, ಶ್ರದ್ಧೆಯು ನಮ್ಮೊಳಗಿದ್ದು ಬಾಳಬಲ್ಲುದು. ಯೋಗಾಭ್ಯಾಸಿಗಳಲ್ಲಿ ಯಾರಿಗೆ ಇಂಥ ನಿರಾಶೆ, ಅಪಜಯ, ಅವಿಶ್ವಾಸ, ಅಂಧಕಾರಗಳಿಂದ ತುಂಬಿದ ಕಾಳರಾತ್ರಿಗಳ, ಸುದೀರ್ಘ ಅವಧಿಗಳ ಪರಿಚಯವಿಲ್ಲ? ಆದಾಗ್ಯೂ ಸಾಧಕನನ್ನು ಅಂಥ ವಿಪ್ಲವದಲ್ಲಿಯೂ ಎತ್ತಿಹಿಡಿಯುವ, ಕೆಲವು ಸಲ ಅವನನ್ನೂ ಲೆಕ್ಕಿಸದೆ

ಮುಂದೆ ಸಾಗುವ ಯಾವುದೋ ಹುಮ್ಮಸ್ಸೊಂದು ಅವನಲ್ಲಿರುತ್ತದೆ. ಅದಕ್ಕೆ ತಾನು ಹಿಡಿದ ಹಾದಿಯೇ ಕೊನೆಗೂ ಸರಿಯೆಂದೆನಿಸುವದು; ಅನಿಸುವದಷ್ಟೇ ಅಲ್ಲ, ಆ ಹಾದಿ ನಿಶ್ಚಿತವಾಗಿ ಸರಿಯೆಂದು ಅದಕ್ಕೆ ಗೊತ್ತು. "'ದೇವನು' ಇದ್ದಾನೆ ಮತ್ತು ಆ ದೇವನನ್ನು ಅನುಸರಿಸುವದೊಂದೇ ಹಾದಿ; ದೈವಿಕತೆಯೊಡನೆ ಹೋಲಿಸುವದಾದಲ್ಲಿ ಬೇರೆ ಎಲ್ಲವೂ ಬೆಲೆ ಇಲ್ಲದ್ದು" ಎಂಬೀ ದೃಢವಾದ ನಂಬಿಕೆಯೇ ಯೋಗಮಾರ್ಗದ ಮೂಲಭೂತ ಶ್ರದ್ಧೆಯಾಗಿದ್ದು ಅದು ಆತ್ಮಕ್ಕೆ ಅಂತರ್ಗತವಾದುದಾಗಿದೆ. ಯಾವೊಬ್ಬ ಮನುಷ್ಯನಲ್ಲಿ ಆ ಬಗೆಯ ಶ್ರದ್ಧೆ ಇರುವವರೆಗೆ ಅವನಿಗಾಗಿ ಅಧ್ಯಾತ್ಮಜೀವನ ಕಾದಿದೆ ಎಂದು ಹೇಳಬಹುದು. ಮತ್ತು ಅವನ ಪ್ರಕೃತಿಯು ಅಡೆತಡೆಗಳಿಂದ ತುಂಬಿಹೋಗಿದ್ದರೂ, ಸಂಕಟ-ನಿರಾಕರಣೆಗಳು ಸಾಲುಗಟ್ಟಿಯೇ ಆ ಜೀವನದಲ್ಲಿ ಮೈದೋರಿದರೂ ಮತ್ತು ಅನೇಕ ವರ್ಷಗಳ ಹೋರಾಟವೇ ಅಂಥವನ ಬಾಳಿನ ಕಥೆಯಾದರೂ ಅವನಿಗೆ ಅಧ್ಯಾತ್ಮಜೀವನದಲ್ಲಿ ಜಯ ಕಟ್ಟಿಟ್ಟದ್ದೆಂದು ಖಂಡಿತವಾಗಿ ಹೇಳುವೆ.

ಇಂಥ ಶ್ರದ್ಧೆಯನ್ನು ನೀನು ಬೆಳಿಸಿಕೊಳ್ಳಬೇಕು. ಅದು ಬುದ್ಧಿ ಮತ್ತು ವಿವೇಕಗಳಿಗೆ ಸಮ್ಮತವಾಗುವಂತೆ ಇರಬೇಕು. ದೈವಿಕತೆಯೊಂದು ಇದ್ದುದಾದರೆ ಮತ್ತು ಅದು ನಿನಗೆ ಅಧ್ಯಾತ್ಮ ಜೀವನದ ಕರೆಯನ್ನು ಕೊಟ್ಟದ್ದೇ ಆದರೆ, (ಅದು ಸುಸ್ಪಷ್ಟವೇ ಇದೆ)--ದೈವೀ ಪ್ರೇರಣೆಯೊಂದು ನಿನ್ನ ಬೆಂಗಾವಲಿಗೆ ಖಂಡಿತವಾಗಿಯೂ ಇದೆ. ಸಕಲ ಸಂಕಟಗಳಿಂದ ಪಾರಾಗಿ, ಎಲ್ಲ ಅಡೆ-ತಡೆಗಳನ್ನು ಕಡೆಗಣಿಸಿ ನೀನು ನಿನ್ನ ಗುರಿಯನ್ನು ಮುಟ್ಟುವಿ. ವಿರೋಧಕ ಧ್ವನಿಗಳು ಸೋಲನ್ನು ಸೂಚಿಸಲಿ,—ತಾಳ್ಮೆಯರಿಯದ ಅಗತ್ಯದ ದುಡುಕಿನ ಸ್ವರಗಳು ಆ ವಿರೋಧಧ್ವನಿಗಳನ್ನು ಪ್ರತಿಧ್ವನಿಸಲಿ,--ಅವುಗಳಿಗೆ ಕಿವಿಗೊಡಬೇಡ. ಕಠಿಣ ಕಂಟಕಗಳು ಇದ್ದೊಡನೆ ಗೆಲವು ಅಸಾಧ್ಯವೆಂದು ಭಾವಿಸದಿರು. ಇದುವರೆಗೆ ದೇವರ ಸಾಕ್ಷಾತ್ಕಾರವಾಗಿಲ್ಲವೆಂದಾಗಿ ಅವನು ಎಂದೆಂದೂ ತನ್ನನ್ನು ಕಾಣಿಸಿಕೊಳ್ಳನೆಂದು ನಂಬದಿರು. ಕಷ್ಟಸಾಧ್ಯವಾದ ಉಚ್ಚ ಧ್ಯೇಯವನ್ನು ಮನಸ್ಸಿನಲ್ಲಿ ಅಚ್ಚೊತ್ತಿಸಿಕೊಂಡು ಅದರೆಡೆಗೆ ಸಾಗಲುದ್ಯುಕ್ತನಾದ ವ್ಯಕ್ತಿಯಂತೆ, "ಜಯ ದೊರಕಿಸುವ ವರೆಗೆ ಮುನ್ನುಗ್ಗುವೆ! ಬೇಕಾದ ತೊಡಕು-ತೊಂದರೆಗಳು ಬರಲಿ, ಕೈಕೊಂಡ ಕಾರ್ಯವನ್ನು ಸರ್ವಥಾ ಬಿಡೆನು" ಎಂಬ ದೃಢನಿಶ್ಚಯದಿಂದ ಹೊರಡು. ಈ ಪ್ರಕಾರದ ನಿರ್ಧಾರದ ಜೊತೆಗೆ ದೈವಿಕತೆಯಲ್ಲಿ ವಿಶ್ವಾಸವಿದ್ದವನು, "ದೇವರಿದ್ದಾನೆ. ದೈವಿಕತೆಯನ್ನು ಹಿಂಬಾಲಿಸುವ ನನ್ನ ಯತ್ನ ಸೋಲದು. ದೇವನನ್ನು ಕಾಣುವವರೆಗೆ ಏನು ಬಂದರೂ ವಿರಮಿಸೆನು" ಎಂಬ ಉತ್ಸಾಹವನ್ನೂ ತಾಳುತ್ತಾನೆ.

* * * * *

ನಾನು ಯಾರಿಂದಲೂ ತಾರತಮ್ಯರಹಿತ ಶ್ರದ್ಧೆಯನ್ನು ಬಯಸುವದಿಲ್ಲ. ನಾನು ಅಪೇಕ್ಷಿಸುವದು ತಾಳ್ಮೆಯನ್ನು ಮತ್ತು ಶಾಂತ ವಿವೇಚನಾಶಕ್ತಿಯಿಂದ ಕೂಡಿದ ಮೌಲಿಕ ಶ್ರದ್ಧೆಯನ್ನು. ಏಕೆಂದರೆ ಇವೇ ಅಧ್ಯಾತ್ಮ ಮಾರ್ಗದಲ್ಲಿರುವ ಸಾಧಕನ ಚೇತನದಲ್ಲಿ ಸಾಮಾನ್ಯವಾಗಿ ಇರತಕ್ಕ ಯೋಗ್ಯ ಗುಣಗಳು. ಇವುಗಳ ಸಹಾಯವನ್ನು ನಾನಾದರೂ ತೆಗೆದುಕೊಂಡಿದ್ದೇನೆ; ಮತ್ತು ಅದರ ಪರಿಣಾಮವಾಗಿ, ಭೌತಿಕವಾದಿಗಳ ಬಂಡವಾಳವಾಗಿರುವ "ನೀವು ಪ್ರಕೃತಿಯನ್ನು ಮೀರಿದ ಎಲ್ಲದರ ವಿಷಯವಾಗಿ ಸಂಶಯ ತಾಳಬೇಕು, ಅಥವಾ ಎಲ್ಲವನ್ನೂ

ವಿಚಾರವಿಲ್ಲದೆ ಸಂಪೂರ್ಣವಾಗಿ ನಂಬಬೇಕು" ಎಂಬೀ ಅಕಾರಣ ಇರುಕಿನಿಂದ ಪಾರಾಗಿರುವೆ. ನಿನ್ನನ್ನು ಬಾಧಿಸುತ್ತಿರುವ ಸಂದೇಹವು, ಮೇಲ್ಕಾಣಿಸಿದ ನಿರರ್ಥಕ ವಾದವನ್ನು ಮುಂದೆ ಮಾಡಿಕೊಂಡು ಪುನಃಪುನಃ ತನ್ನ ತಲೆಯೆತ್ತುತ್ತಿದೆಯೆಂದು ನನಗೆ ತೋರುತ್ತದೆ. ಆದರೆ ಈ ಬಗೆಯ ಸಂಶಯುವನ್ನು ಅಲ್ಲಗಳೆಯುವಾಗ ಈ ಮೊದಲು ನಾನು ಹೇಳಿದಂತೆ ಸಂದೇಹಮನಸ್ಕರಿಗೆ ಮನದಟ್ಟುಮಾಡಿಕೊಡುವದೆಂದರೆ ಅಸಾಧ್ಯ ಕೆಲಸ. ನಂಬಲೊಲ್ಲದುದೇ ಸಂಶಯದ ನಿಸರ್ಗಸಿದ್ಧ ಸ್ವಭಾವವಾಗಿದ್ದುದರಿಂದ ಅದನ್ನು ನಂಬಿಸುವದು ಆಗದ ಮಾತು. ಸಂದೇಹರಾಯನು ಸಂಶಯನಾಮಾವಳಿಯ ಜಪದಲ್ಲಿಯೇ ಯಾವಾಗಲೂ ನಿರತನಾಗಿರುತ್ತಾನೆ.

* * * * *

ಜೀವಬೀಜಗಳಲ್ಲಿ (Cells) ಶ್ರದ್ಧೆಯಿಟ್ಟು ಸಾಗಬೇಕೆಂಬ ಪದ್ಧತಿಯನ್ನು ಚಂದಿರನ ತುಣುಕನ್ನು ಸವಿಯ ಹೋಗುವ ರೀತಿಗೆ ಹೋಲಿಸುವದು ಸರಿಯಾಗದು. ಚಂದಿರನ ತುಣುಕು ಯಾರ ಕೈಗೂ ಎಂದಿಗೂ ದೊರೆತುದಿಲ್ಲ; ಆದರೆ ಜೀವಬೀಜಗಳಲ್ಲಿಟ್ಟ ವಿಶ್ವಾಸದಿಂದ ಪ್ರಕೃತಿಯಲ್ಲಿ ಗುಣವಾಗುವದು ಅನೇಕರ ಅನುಭವಕ್ಕೆ ಬಂದ ಪ್ರತ್ಯಕ್ಷ ಸಂಗತಿಯೂ ನಿಸರ್ಗನಿಯಮವೂ ಆಗಿದೆಯೆಂಬ ಮಾತು ಯೋಗದಿಂದಲ್ಲದೆ ಬೇರೆ ರೀತಿಯಿಂದಲೂ ಸಿದ್ಧಮಾಡಲ್ಪಟ್ಟಿದೆ. ಶ್ರದ್ಧೆ ಮತ್ತು ಇತರ ವಸ್ತುಗಳನ್ನು ದೊರಕಿಸುವ ಮಾರ್ಗವೆಂದರೆ ಅವುಗಳನ್ನು ದೊರಕಿಸಲು ಮೊದಲು ಹಟ ತೊಡುವದು; ಹಾಗೂ ಅವು ದೊರಕುವ ವರೆಗೆ ನಿರಾಶೆ ಹೊಂದಲಿಕ್ಕೆ ಇಲ್ಲವೆ ಗುರಿಯನ್ನೇ ಬಿಟ್ಟುಬಿಡಲಿಕ್ಕೆ ಒಪ್ಪದಿರುವದು. ಸಂಕಟಗಳಿಂದ ತುಂಬಿದ ಈ ಜಗತ್ತಿನಲ್ಲಿ ಬುದ್ಧಿ-ಅಭೀಪ್ಸೆಗಳಿಂದ ಪ್ರೇರಿತರಾದ ಪ್ರಾಣಿಗಳು ಇರತೊಡಗಿದಂದಿನಿಂದ ಎಲ್ಲ ಸಿದ್ಧಿಗಳೂ ಇದೇ ಹಾದಿಯಿಂದ ದೊರಕುತ್ತ ಬಂದಿವೆ. ಯಾವಾಗಲೂ ಹೃದಯ-ಮನಗಳನ್ನು ಹೊಸ ಬೆಳಕಿಗಾಗಿ ವಿಶಾಲವಾಗಿ ತೆರೆದಿಡುವದೂ ಅಜ್ಞಾನಾಂಧಕಾರದತ್ತ ಬೆನ್ನು ತಿರುಹುವದೂ ಇದರ ರೀತಿ. "ಇದು ನಿನ್ನಿಂದಾಗದು; ಇದನ್ನು ನೀನು ಮಾಡಕೂಡದು; ನೀನು ಕೈಲಾಗದವನು; ಕನಸಿನ ಕೈಗೊಂಬೆಯಾದ ಮರುಳ ನೀನು" ಎಂಬುದಾಗಿ ಎಡೆಬಿಡದೆ ಧೃತಿಗೆಡಿಸಲು ಯತ್ನಿಸುವ ಧ್ವನಿಗಳಿಗೆ ಕಿವಿಗೊಡದಿರುವದು ಈ ಮಾರ್ಗದ ಲಕ್ಷಣ. ಏಕೆಂದರೆ ಈ ಬಗೆಯ ಧ್ವನಿಗಳು ಶತ್ರುವಿನ ಕೂಗುಗಳು. ಮೊದಲು, ಬರಲಿರುವ ಫಲವು ಬರದಂತೆ ತಮ್ಮ ಏರಿಕೆಯ ಆರ್ಭಟಿಯ ಮೂಲಕ ನಮ್ಮನ್ನು ವಂಚಿಸಿ—ಬಳಿಕ, ಆ ಫಲಾಭಾವವೇ ತಮ್ಮ ಸಿದ್ಧಾಂತದ ಸತ್ಯತೆಯ ಪ್ರಮಾಣವೆಂದು ಜಯಭೇರಿಯನ್ನು ಮೊಳಗಿಸುವದು ಶತ್ರುಧ್ವನಿಗಳ ಸ್ವಭಾವ. ಪ್ರಯತ್ನವು ಕಠಿಣಸಾಧ್ಯವೆಂಬುದು ತಿಳಿದ ವಿಷಯವೇ ಆಗಿದೆ; ಆದರೆ ಕಠಿಣವೆಂದರೆ ಅಶಕ್ಯವಲ್ಲ. ದುಃಸಾಧ್ಯವಿದ್ದುದೇ ಯಾವಾಗಲೂ ಸಾಧಿಸಲ್ಪಟ್ಟಿದೆ. ಕಠಿಣವಿರುವದನ್ನು ಪರಾಕ್ರಮದಿಂದ ಸಾಧಿಸಿದುದರ ಉದಾಹರಣೆಗಳೇ ಜಗತ್ತಿನ ಅತಿ ಮಹತ್ತ್ವದ ಘಟನೆಗಳಾಗಿವೆ. ಅಧ್ಯಾತ್ಮ ವಿಷಯದಲ್ಲಿಯೂ ಹಾಗೆ ಆಗುವದು ಖಂಡಿತ.

ನೀನು ಕೃತನಿಶ್ಚಯನಾಗಿ ಆಸುರೀಶಕ್ತಿಗಳ ನಿರ್ಮೂಲನಕ್ಕೆ ಅಣಿಯಾದರೆ, ತಮ್ಮ ಮನೋನಿಷ್ಠ ಪ್ರಾಣನಿಷ್ಠ ಸ್ವಭಾವದ ಬಂಧನದಲ್ಲಿ ಸಿಲುಕಿದ ಅನೇಕರ ಅನುಭವಕ್ಕೆ ಬಂದಂತೆ ನಿನಗೂ ಬಿಡುಗಡೆಯ ಬಾಗಿಲುಗಳು ತೆರೆಯುವದು ನಿಶ್ಚಯ.



## ಸಮರ್ಪಣ

### ( ೨ )

( Sri Aurobindo Circle, Bombay ಇವರ ೫ನೆಯ ವಾರ್ಷಿಕ ಸಂಚಿಕೆಯಲ್ಲಿ ಪ್ರಕಟವಾದ ಶ್ರೀ ತಾಯಿಯವರ **Words of the Mother.(2)Faith** ಎಂಬ ಲೇಖನದ ಅನುವಾದ)

ಬಾಹ್ಯಜಾಗೃತಿಯ ದೃಷ್ಟಿ ಚೈತ್ಯಶಕ್ತಿಯ ( psychic ) ದೃಷ್ಟಿಯನ್ನು ಅಲ್ಲಗಳೆಯ ಬಹುದು. ಆದರೆ ಚೈತ್ಯಶಕ್ತಿಯ ಜ್ಞಾನವೇ ಇಂಥ ಸಂದರ್ಭಗಳಲ್ಲಿ ನಿಜವಾದದ್ದಿರುತ್ತದೆ. ಏಕೆಂದರೆ ಅದಕ್ಕೊಂದು ಅಂತರ್‌ದೃಷ್ಟಿಯ ಸಹಜಪ್ರವೃತ್ತಿಯ ಅರಿವು ಇದೆ. ಅದು, " ನಾನು ಬಲ್ಲೆ : ಕಾರಣಗಳನ್ನು ಒದಗಿಸಲರಿಯೆನಾದರೂ ನಾನು ಅದನ್ನು ಬಲ್ಲೆ " ಎಂಬುದಾಗಿ ಅನ್ನುವದು. ಏಕೆಂದರೆ ಅದರ ಜ್ಞಾನವು ಮಾನಸಿಕವಲ್ಲ; ಎಂದರೆ ಪ್ರತ್ಯಕ್ಷ ಪ್ರಮಾಣಗಳಿಂದ ಸ್ಥಾಪಿತವಾದದ್ದಾಗಲಿ ಇಲ್ಲವೆ ಸಿದ್ಧಮಾಡಿ ತೋರಿಸಲ್ಪಟ್ಟ ರೀತಿಯಲ್ಲಾಗಲಿ ಅದು ಇರುವದಿಲ್ಲ. ಅದು ಸಾಕ್ಷಿಪಟ್ಟಿಗಳ ಆಧಾರದಿಂದ ಮನಗಂಡು ನಂಬಲು ಹೋಗುವದಿಲ್ಲ. ಜ್ಞಾನವನ್ನು ನೇರವಾಗಿ ಒಮ್ಮೆಲೇ ಅಂತಃಸ್ಫೂರ್ತಿಯಿಂದ ಪಡೆಯಬಲ್ಲ ಆತ್ಮದ ಮಿಡಿತವೇ ಶ್ರದ್ಧೆ. ಇಡಿ ಪ್ರಪಂಚವೇ ಆ ತಿಳುವಳಿಕೆಯನ್ನು ಅಲ್ಲಗಳೆದು ಪ್ರತಿಯಾಗಿ ಸಾವಿರಾರು ವಿರುದ್ಧ ಪ್ರಮಾಣಗಳನ್ನು ಮುಂದೆ ಮಾಡಿದರೂ ಚಲಿಸದೆ ತನ್ನ ಒಳಗಿನ ಜ್ಞಾನದ ಮೂಲಕ, ಎಲ್ಲದರ ವಿರುದ್ಧವಾಗಿ ತಲೆಯೆತ್ತಿ ನಿಲ್ಲಬಲ್ಲ ಪ್ರತ್ಯಕ್ಷ ದೃಷ್ಟಿಯನ್ನು ಅದು ಬಲ್ಲದು. ಈ ದೃಷ್ಟಿ ತಾದಾತ್ಮ್ಯದ ದೃಷ್ಟಿ. ಚೈತ್ಯಶಕ್ತಿಯ ಜ್ಞಾನವು ಗೋಚರವೂ ನೈಜವೂ ಆಗಿ ಇರುವ ಮೊತ್ತವಾದ ಒಂದು ಚೊಕ್ಕ ಗಟ್ಟಿ. ನೀವು ಅದನ್ನು ನಿಮ್ಮ ಮನಸ್ಸಿನಲ್ಲಿ, ನಿಮ್ಮ ಪ್ರಾಣದಲ್ಲಿ, ನಿಮ್ಮ ಶರೀರದಲ್ಲಿ ತರಲೂ ಸಾಧ್ಯವಿದೆ. ಹಾಗೆ ಅದನ್ನು ತಂದಾಗಲೇ, ಪರ್ವತಗಳನ್ನೂ ಅಲ್ಲಾಡಿಸಬಲ್ಲ ಅದೊಂದು ಸಮಗ್ರ ಶ್ರದ್ಧೆ ನಿಮ್ಮಲ್ಲಿ ಒಡಮೂಡುವದು. ಆದರೆ ಜೀವಸತ್ತ್ವದ ( the being ) ಯಾವ ಅಂಶವೂ ಮುಂದೆ ಬಂದು, " ಅದು ಹಾಗೆ ಅಲ್ಲ " ಎಂದೆನ್ನಕೂಡದು; ಅಥವಾ ಅದನ್ನು ಯಾವ ಒರೆಗೂ ಹಚ್ಚಕೂಡದು. ನಸುವಾದರೂ ಅರೆನಂಬಿಗೆಯುಂಟಾದಲ್ಲಿ ಕೆಲಸವು ಹದಗೆಡುವದು. ಶ್ರದ್ಧೆ ಅಚಲವೂ ಸಮಗ್ರವೂ ಇರದಿದ್ದರೆ ಆ ಪರಾತ್ಪರಶಕ್ತಿ ಹೇಗೆ ಪ್ರಕಟಗೊಂಡೀತು ? ಶ್ರದ್ಧೆಯೆಂದರೇನೇ ಸದಾ ಅಚಲವಾಗಿರುವಂತಹದು. ಅಚಲತೆ ಅದರ ಹುಟ್ಟುಗುಣ; ಅಚಲವಾಗಿರದಿದ್ದರೆ ಅದು ಶ್ರದ್ಧೆಯೇ ಆಗಲಾರದು. ಒಮ್ಮೊಮ್ಮೆ ಮನಸ್ಸಾಗಲಿ ಪ್ರಾಣವಾಗಲಿ ಶರೀರವಾಗಲಿ ಚೈತ್ಯಶಕ್ತಿಯ ಚಲನೆಯನ್ನು ಬೆಂಬತ್ತಲಾರದೆ ಹೋಗಬಹುದು. ಯಾವೊಬ್ಬ ಮನುಷ್ಯನು ಒಬ್ಬ ಯೋಗಿಯ ಬಳಿಗೆ ಬಂದೊಡನೆಯೇ ಈತ ತನ್ನನ್ನು ತನ್ನ ಗುರಿಗೆ ಒಯ್ದು ಮುಟ್ಟಿಸಬಲ್ಲನೆಂಬ ಶ್ರದ್ಧೆಯನ್ನು ಆ ಕ್ಷಣದಲ್ಲಿಯೇ ತಾಳಬಹುದು. ಆ ಯೋಗಿಯಲ್ಲಿ ಜ್ಞಾನವಿದೆಯೋ ಇಲ್ಲವೋ ಎಂಬುದು ಅವನಿಗೆ ಗೊತ್ತಿರುವದಿಲ್ಲ. ಚೈತ್ಯಶಕ್ತಿಯ ಅದೊಂದು ವಿದ್ಯುತ್ಸಂಚಲನದಿಂದ ತನ್ನ ಗುರುವನ್ನು ತಾನು ಕಂಡೆನೆಂದು ಅವನು ತಿಳಿಯಬಲ್ಲನು. ಅವನ ವಿಶ್ವಾಸವು ದೀರ್ಘ ವಿಚಾರದ ಫಲವೂ ಅಲ್ಲ; ಇಲ್ಲವೆ ಅನೇಕ ಪವಾಡಗಳ ಪ್ರತ್ಯಕ್ಷ ದರ್ಶನದ ಫಲವೂ ಅಲ್ಲ. ನಾವು ತಾಳಬೇಕಾದ ಶ್ರದ್ಧೆ ಇದೇಯಾಗಿದೆ. ನೀವು ವಾದಿಸಲು ಹೊರಟರೆ ನಿಮ್ಮ ಭಾಗ್ಯಕ್ಕೆ ಖಂಡಿತವಾಗಿ ಎರವಾಗುವಿರಿ. ಕೆಲವು ಜನರು ಅಂತಃಪ್ರೇರಣೆಯು ( psychic impulse ) ಸಮಂಜಸವಾದುದೋ ಅಲ್ಲವೋ ಎಂಬುದನ್ನು ಆಲೋಚಿಸುತ್ತ ತಟಸ್ಥರಾಗಿದ್ದು ಬಿಡುವರು.

ಶ್ರದ್ಧೆ

ನಿಜವಾಗಿಯೂ ಜನರು ಮೋಸ ಹೋಗುವದು 'ಅಂಧ' ವೆಂದು ಕರೆಯಲ್ಪಡುವ ಶ್ರದ್ಧೆಯಿಂದಲ್ಲ. "ನಾನು ಇಂಥಿಂಥವನನ್ನು ನಂಬಿದೆ; ಆದರೆ ಅವನು ನನ್ನನ್ನು ವಂಚಿಸಿದನು" ಎಂದು ಜನರಾಡುವದುಂಟು. ಆದರೆ ನಿಜವಾಗಿಯೂ, ವಂಚಿಸಿದನೆಂದೆನ್ನುವ ಆ ವ್ಯಕ್ತಿಯಲ್ಲಿ ತಪ್ಪು ಇರದೆ, ನಂಬುವವನಲ್ಲಿಯೇ ಇರುವದು. ಅದು ಅವನಲ್ಲಿರುವ ಒಂದು ಬಗೆಯ ಹೃದಯದೌರ್ಬಲ್ಯ. ಆತ ತನ್ನ ಶ್ರದ್ಧೆಯನ್ನು ನಿಶ್ಚಲವಾಗಿ ಇಟ್ಟಿದ್ದರೆ ಆ ವ್ಯಕ್ತಿಯನ್ನೇ ಪಲ್ಲಟಿಸಿ ಬಿಡಬಹುದಾಗಿತ್ತು. ಒಂದೇ ಬಗೆಯ ಶ್ರದ್ಧೆಯ ಚೇತನವಲ್ಲಿ (Faith Consciousness) ತಾನು ನಿಲ್ಲಲಿಲ್ಲವಾದ್ದರಿಂದಲೇ ತಾನು ವಂಚಿತನಾಗಿ ಆ ವ್ಯಕ್ತಿಯನ್ನು ತನ್ನಿಚ್ಛೆಯ ಪ್ರಕಾರ ಪಲ್ಲಟಿಸಲಾಗಲಿಲ್ಲವೆಂದೇ ಅರ್ಥ. ಶ್ರದ್ಧೆಯಿಂದಲೇ ಸದಾ ಪವಾಡಗಳು ಜರುಗುವವು. ಒಬ್ಬನು ಇನ್ನೊಬ್ಬನ ಬಳಿಗೆ ಹೋಗಿ ದೈವೀ ಸಾಂನಿಧ್ಯದೊಡನೆ ಸಂಪರ್ಕ ಬೆಳೆಸುತ್ತಾನೆ. ಅವನು ಈ ಸಂಪರ್ಕವನ್ನು ಶುಚಿಯಾಗಿಯೂ ಅವ್ಯಾಹತವಾಗಿಯೂ ಉಳಿಸಿಕೊಳ್ಳಬಲ್ಲನಾದರೆ ದೈವೀ ಚೇತನವು ಅತ್ಯಂತ ಜಡವೆನ್ನುವದರಲ್ಲಿಯೂ ಪ್ರಕಟವಾಗುವಂತೆ ಆ ಸಂಪರ್ಕವು ಪರಿಣಾಮಕಾರಿಯಾಗಬಲ್ಲುದು. ಎಲ್ಲವೂ ನಿಮ್ಮ ನಿಮ್ಮ ಮಟ್ಟ (standard) ಮತ್ತು ನಿಷ್ಠೆ (sincerity) ಗಳನ್ನವಲಂಬಿಸಿದೆ. ನಿಮ್ಮೊಳಗಿನ ಚೈತ್ಯಶಕ್ತಿಯ ಮೂಲಕ ನೀವು ಹೆಚ್ಚು ಹೆಚ್ಚು ಸಿದ್ಧರಾದಂತೆ, ಸರಿಯಾದ ಸೆಲೆಯ ಬಳಿಗೆ, ತಕ್ಕ ಗುರುವಿನ ಬಳಿಗೆ ಹೆಚ್ಚು ಹೆಚ್ಚು ನಿಕಟವಾಗಿ ನೀವು ಸುಳಿಯಬಲ್ಲಿರಿ. ಚೈತ್ಯಶಕ್ತಿಯೂ ಅದರ ಶ್ರದ್ಧೆಯೂ ಯಾವಾಗಲೂ ನಿಷ್ಠಾಯುಕ್ತವಾಗಿರುತ್ತವೆ. ಆದರೆ ನಿಮ್ಮ ಬಾಹ್ಯಸತ್ತ್ವದಲ್ಲಿ ನಿಷ್ಠೆ ಒಡಮೂಡದಿದ್ದರೆ ಮತ್ತು ನೀವು ಅಧ್ಯಾತ್ಮಜೀವನವನ್ನು ನಿರಾಕರಿಸಿ ವೈಯಕ್ತಿಕ ಶಕ್ತಿಸಂಪಾದನೆಯ ಆಸೆಗೆ ಬಿದ್ದರೆ ನೀವು ತಪ್ಪುದಾರಿ ಹಿಡಿಯುವಿರಿ. ಈ ಆಸೆಯೇ ನಿಮ್ಮನ್ನು ತಪ್ಪುದಾರಿಗೊಯ್ಯುವದಲ್ಲದೆ ನಿಮ್ಮ ಶ್ರದ್ಧೆಯಲ್ಲ. ಮೂಲತಃ ನಿರ್ಮಲವಾದ ಶ್ರದ್ಧೆಯು ಮಾನವನಲ್ಲಿಯ ಅಧಃಪ್ರವೃತ್ತಿಗಳೊಡನೆ ಬೆರಕೆಗೊಂಡಾಗಲೇ ನೀವು ತಪ್ಪು ದಾರಿ ಹಿಡಿಯುವದು.

— ವಸಂತ ಕುಲಕರ್ಣಿ

(ಅನುವಾದಕ)

ಸೂರ್ಯನು ತನ್ನುದಯದ ಪೂರ್ವದಲ್ಲಿ ಕಳಿಸಿದ ಪ್ರಭಾಸೂಚನೆಯೇ ಶ್ರದ್ಧೆ. ಸೂರ್ಯನು ಉದಿತನಾಗಿಯೇ ಆಗುವನು, ಆಗ ಆ ಕಾಂತಿಸೂಚನೆಯು ಅಗತ್ಯವುಳಿಯುವುದಿಲ್ಲ.

ಶ್ರೀ ಅರವಿಂದರು

# ದರ್ಶನ

ಎತ್ತರದಿ ಕಣ್ಣಸಿರಿಸುತ್ತ ಗುರಿಯು ಗಿರಿಯೇರಲೆಂದು ಹಿರಿಹಿಗ್ಗಿ ನಡೆಯೆ
ಸುತ್ತೆಲ್ಲ ಕಾಡು ಕೆಳಗೆ ಕುಸಿಮಣ್ಣು ತತ್ತರಿಸೆ ಕಾಲು ಎತ್ತೆತ್ತರಾಗೆ
ಇಳಿತರದ ಎಳೆತ ಕೆಳಬಗೆಯ ಮಣಿತ ಕೈಮೀರೆ ಕೊಸರಿ ಏರಳಿದು ಜಾರಿ
ತಿಳಿತಿಳಿದು ಇಳಿದೆ ಇಳಿದು ಬಸವಳಿದೆ ಏನಿದೆಂಬರಿವು ಹೋದ ಕಂದರದಿ ॥ ೧ ॥

ತಣಿವು ಕಳಕೊಂಡು ಕನಸುಮುರದಲ್ಲಿ ಸಿಕ್ಕ ಕೊಳೆಹಣ್ಣು ತಿಂದು ತೇಗಿರಲು
ಚಣಚಣವು ಬಿಟ್ಟ ನಿಟ್ಟುಸಿರು ತಂಪು ಗಾಳಿಯನು ತಟ್ಟೆ ಬಿಸುಪಾಗಿಸಿರಲು
ಮುಗಿಲತ್ತ ನೋಡಿ ಮನದೊಳಗೆ ಬೇಡಿ ಕರೆಕರೆದು ಸೋತು ನಿನ್ನಲ್ಲಿ ಓತು
ದರ್ಶನಕೆ ಬಂದೆ, ದರ್ಶನದ ಮುನ್ನ ಏನಿದ್ದೆ ಅಂತೆ ಇರುವೆ ನಾ ಗುರುವೆ ! ॥ ೨ ॥

ಹಿರಿಮೆ-ತಾಣದೆಡೆ ಹೊರಟ ಜನದಿರುವೆಸಾಲಿನಲಿ ಸೇರಿ ಸರಿಯುತಿರೆ ನಾನು
ಏನು ಆ ತವಕ ! ಬಂತು ರಸನಿಮಿಷ ! ಈ ಯುಗದ ಹೊಸದು ಬಿಸವಂದವೊಂದು
ಕಂಡೆನಕೊ ನಿನ್ನ ಋಷಿವರನೆ ಅರಿವುಮುರದ ಬಿಳಲಂತೆ ನರೆಗೂದಲಿರಲು
ನಡೆದಂತೆ ನೋಡುತಿರೆ ಕೈಯ ಮುಗಿದು ಮುನ್ನಡೆದೆ ಚಣದ ನೋಟ ಚೆದರಿರಲು ॥ ೩ ॥

ದರ್ಶನದಿ ಭಾವಸಂಸ್ಪರ್ಶವಿರದೆ ಜೀವ ಹೂತಿರದೆ ಎಂದಿನಂತಿದ್ದೆ
ತೊಲಗದಿಹ ಹಾಗೆ ಯುಗಯುಗದಿ ತೊಡೆದುಕೊಂಡಿರುವ ಮರವು ಮರನಿದ್ದೆ
' ನೀ ಕಂಡ ನೋಟವಂತಿರಲಿ ಗುರುವ ಕರುಣೆಯಾ ಕಣ್ಣು ಬೀಳುವುದೆ ಹಿರಿದು '
ಎಂಬ ಕೆಳೆವಾತು ಹುರಿದುಂಬಿಸಿರಲು ಮರಳಿದೆನು ಅದುವೆ ದರ್ಶನವಾಗಲು ॥ ೪ ॥

ಎಂದಿನೊಲು ಬಾಳು ಕಾಮನೆಯ ಕೂಳು ಭಯಶೋಕದಾಳು ಸಾಗಿಹುದು ಮುಂದೆ.
ನಿನ್ನ ನೆನೆಯುತಿಹೆ, ತಾಯ ನೆನೆಯುತಿಹೆ ' ಚಿತ್ತವನು ಎತ್ತು, ಸತ್ತ್ವವನು ಬಿತ್ತು '
ಎಂದು ದಿನದಿನವು ಹಂಬಲಿಸಿ ಕರೆವೆ ಪಡೆದೆನೆಂಬಂತೆ ಹಲವು ಚಣ ನಲಿಯೆ
ಮರಳಿ ನಾನಿರುವೆ ನನ್ನಂತೆ ಅಳುಕು-ಸೆಳಕುಗಳ ಸುಳಿಗೆ ಸಿಕ್ಕ ತರಗೆಲೆಯೆ ॥ ೫ ॥

ಈ ಅರಿವೆ ಗುರುವು ಇಂದೆನಗೆ, ನಿನಗೆ ಗುರುವಿನಾ ಗುರುವಿಗಾಗಿಲ್ಲ ಶರಣ
ಇಂತು ನಾನಿರಲು ಇಂತೆ ಅರಿತಿರಲು ಅದು ಗುರುವೆ ನಿನ್ನ ಕರುಣೆಯಾ ಕಿರಣ
ನನ್ನಲಿಹ ಕಿಲುಬ ನಾನೆಯೇ ತೊಳೆದು ತಿಳಿವಾಗಿ ಹೊಳೆದು ಬಲವಾಗಿ ಬೆಳೆದು
ಕರೆದೊಡನೆ ಬರುವೆ ಎಂಬರಿವೆ ಇಂದು ದರ್ಶನವು —ಬಾಳ ಕಾವ ಸುದರ್ಶನವು ! ॥ ೬ ॥

—**ರಸಿಕ ರಂಗ**

# ನಿನ್ನ ದರ್ಶನ

(ರಾಗ: ಕಲ್ಯಾಣಿ)

೧

ನಿನ್ನ ದರ್ಶನ
ಪರಮ ಪಾವನ
ದೂರ ಕರೆಯುವಾ
ಮುರಲಿಯಾ ಸ್ವನ ||

೨

ಬದ್ಧ ಜನರ ಸಂ-
ಬೋಧಿ ಮಂತ್ರದಿಂ
ಮುಕ್ತಗೊಳಿಸುವ
ಶಕ್ತಿಸಾಧನ ||

೩

"ಹೊತ್ತು ಶಿಲುಬೆಯ
ಹತ್ತು ಬೆನ್ನನು"
ಎಂದ ಬೋಧೆಯ
ನವನಿರೂಪಣ ||

೪

ಬುವಿಯೊಳಡಗಿದ
ದಿವಿಯ ತೋರುವ
ರಾಜಸಿದ್ಧಿಯಾ
ತೇಜದಂಜನ ||

೫

ಮೋಹನಾಶನ
ರೋಮಹರ್ಷಣ
ತೃಷಿತ ಮನಕೆ ಪೀ-
ಯೂಷವರ್ಷಣ ||

೬

ಚಿತ್ತಶೋಧನ
ಭಾವದೀಪನ
ಧೀ-ವಿಮೋಚನ
ಜ್ಞಾನಸೇಚನ ||

೭

ಹೃದ್ವಿಕಾಸನ
ಚಿತ್ಪ್ರಕಾಶನ
ಜೀವ-ದೇವ ಸಂ-
ಯೋಗಕಾರಣ ||

—ರಾಮಚಂದ್ರ ವಿನೀತ

# ಮಾನವತೆಯ ಏಳಿಗೆ

" ಏಳಿರೇಳಿರಿ ಬಂಟರೆಲ್ಲರು ಧರ್ಮಯುದ್ಧಕೆ ಸಾಗುವಾ
ಏಳು ಜನುಮದ ಭಾಗ್ಯದಿಂದಲಿ ಬಂದುದನು ಬರಗೊಳ್ಳುವಾ "

—ಹಳೆಯ ಕಾಳಗದ ಉತ್ಸಾಹಗೀತದ ಪಲ್ಲವಿಯೊಂದು ಎತ್ತ ಕಡೆಯಿಂದಲೋ ಮನಸ್ಸಿನಲ್ಲಿ ಮಾರ್ದನಿಗೊಳ್ಳುತ್ತಲಿದೆ. 'ನಮ್ಮ ಇಂದಿನ **ಏಳು** (ಎಚ್ಚರಿಕೆ) ಹಿಂದಿನ ಏಳು ಜನುಮದ ಭಾಗ್ಯದಿಂದಲೆ' ಎಂಬ ಮಾತು ತುಂಬ ಅರ್ಥಗರ್ಭಿತವಾಗಿರುವುದು. ಅದರೊಳಗೆ ರಣೋತ್ಸಾಹದ ಚೈತನ್ಯವಿರುವಂತೆ, ನಮ್ಮ ಪೂರ್ವದ ತತ್ತ್ವಜ್ಞಾನದ ತಿರುಳೂ ಒಂದು ಎಳ್ಳಿನಲ್ಲಿರುವಂತೆ ಅಡಕವಾಗಿರುವುದು. ಇದರ ಜೊತೆಗೆ "ಏಳು ಮಾತಿನ ಗಿಣಿಯೆ, ಏಳು ಮುದ್ದಿನ ಕಣಿಯೆ ! ಏಳು ಸದ್ಗುಣಮಣಿಯೆ ಏಳಯ್ಯ ಬೆಳಗಾಯಿತು" ಎಂಬ ಚಿಕ್ಕ ಮಕ್ಕಳಿಗೆ ಕಲಿಸುವ ಹಳೆಯ ಕ್ರಮಿಕ ಪುಸ್ತಕದೊಳಗಿನ ಉದಯರಾಗದ ಪಲ್ಲವಿಯನ್ನು ನೆನಪಿಗೆ ತರಬಹುದು. ಏಳು ಏಳು .... ಎಂದು ಎಚ್ಚರಿಸುವುದು ಬೆಳಗಾದುದರಿಂದ; ಏಕೆಂದರೆ, ಎಚ್ಚರಿಕೆ ಬೆಳಕಿನ ಲಕ್ಷಣ. ಬೆಳಕು ಎಚ್ಚರವನ್ನು ತರುವುದು. ಆಗ ಮನುಷ್ಯನು ಎಚ್ಚರಾಗುವನು. ಹಗಲೆಲ್ಲ ಎಚ್ಚರದಿಂದ ಬಾಳುವನು. ತನ್ನ ಎಚ್ಚರಿಕೆಯನ್ನು ಹೆಚ್ಚಾಗಿ ಬೆಳಿಸಿಕೊಳ್ಳಲು 'ಕರುಣಾಳು ಬಾ ಬೆಳಕೆ' ಎಂದು ಹೊಸ ಬೆಳಕನ್ನು ಬಯಸುವನು.

ಎಚ್ಚರದಿಂದಿರುವುದೇ ಅರಿವಿನ ಲಕ್ಷಣ. ಇಲ್ಲವಾದರೆ ಎಲ್ಲವೂ ಮರೆವು. ಈ ಅರಿವಿನ ಮರೆವಾಗಲಿ, ಅರೆಮರೆವಾಗಲಿ ಜೀವದ ಜೀವಂತತನದ ಲಕ್ಷಣವಲ್ಲ. ಗಿಡಮರಗಳೂ ಪಶುಪಕ್ಷಿಗಳೂ ಬರೀ ಬೆಳೆಯುತ್ತಿರುವ ಬಗೆಯು ಅದು. 'ಅರಿತರೆ ಶರಣ, ಮರೆತರೆ ಮಾನವ' ಎಂದಿರುವರು ವಚನಕಾರರು. ಇರುಳ ಕತ್ತಲೆಯೊಳಗಿಂದ, ಮರೆವಿನ ಮಬ್ಬಿನೊಳಗಿಂದ, ಅಜ್ಞಾನದ ಅಂಧಕಾರದೊಳಗಿಂದ ಏಳುವುದು ಪ್ರತಿಯೊಬ್ಬ ಮಾನವನಿಗೆ ಆವಶ್ಯಕವಾಗಿರುವುದು. ಆ ಕತ್ತಲೆ, ಆ ಮಬ್ಬು, ಆ ಅಂಧಕಾರಗಳೊಡನೆ ಹೋರಾಡುವುದಾದರೂ ಒಂದು 'ಧರ್ಮಯುದ್ಧ'ವೇ. ಅದಕ್ಕಾಗಿ 'ಏಳ' ಬೇಕಾದರೂ ಏಳು ಜನುಮದ ಭಾಗ್ಯ ಬೇಕು ! ಅಹ ಏನಿದು ಏಳು-ಏಳಿಗೆಗಳ ಸಹಭಾಗ್ಯ ! ಸೌಭಾಗ್ಯ !

ಹೌದು, **ಏಳಿಗೆ** ಸೌಭಾಗ್ಯವೇ ಸರಿ. ಏಕೆಂದರೆ, ಅದರ ಹಿಂದೆ ಏಳರ ಸಾತತ್ಯವಿರುವುದೆಂದು. ಈ 'ಏಳು' ಎಂಬುದು ಒಂದು ನಾಮ, ಒಂದು ಕ್ರಿಯೆ, ಒಂದು ಅಂಕೆ— ಇವೆಲ್ಲವುಗಳ ಅಂಕಿತ; ಮೇಲಾಗಿ ಇವೆಲ್ಲವುಗಳನ್ನು ಅಂಕೆಯಲ್ಲಿಟ್ಟುಕೊಳ್ಳುವ ಅಂಕಕಾರನೂ ಹೌದು. ಈ ಅಂಕೆಯು ಬಹಳ ಮಹತ್ತ್ವದ್ದಿದೆ. ಅದರ ಮಹತ್ತ್ವವನ್ನು ತಿಳಿದುಕೊಂಡರೆ, ಇನ್ನುಳಿದ

ನಾಮ-ಕ್ರಿಯೆಗಳ ಮಾಹಾತ್ಮ್ಯವೂ ಮನಸ್ಸಿಗೆ ಹೊಳೆಯದಿರದು. ಆದುದರಿಂದ ನಮ್ಮ ಮೊದಲಿಗರ ಮನಸ್ಸಿನಲ್ಲಿ ಈ ಏಳನ್ನು ತರುವ ಏಣಿಯ ಕಲ್ಪನೆಯು ಹೇಗೆ ಅಂಕುರಿಸಿದ್ದಿರ ಬಹುದೆಂಬುದನ್ನು ಕುರಿತು ಈ ಕೆಳಗಿನಂತೆ ಒಂದು ಊಹೆಯನ್ನು ಕಟ್ಟಬಹುದು.

ಮೊದಲಿಗೆ 'ಒಂದ'ರ ಕಲ್ಪನೆ: ಅದು ಮೂಡಿದುದು ಬೀಜದ ಮೂಲಕವಾಗಿಯೇ ಇರಬೇಕು. ಅದು ಸ್ಥಿರವಾಗಿ ನಿಂತುದು ಸೂಕ್ಷ್ಮವಾಗಿ ಬಿಂದುವಿನಲ್ಲಿ; ಸ್ಥೂಲವಾಗಿ ದೇಹದಲ್ಲಿ. ಪ್ರತಿಯೊಬ್ಬನಿಗೆ ತಾನೆಂಬುದೇ ಒಂದರ ಪ್ರತೀಕವಾಗಿರಬೇಕು. ಬೀಜ ಮೊಳೆತು 'ಎರಡು' ದಳವಾಗಿ ಭೂಮಿಯೊಳಗಿಂದ ಎದ್ದು ಬರುವುದು. ದೇಹದಲ್ಲಿ ಎರಡು ಕಣ್ಣು, ಎರಡು ಕಿವಿ, ಎರಡು ಮೂಗಿನ ಸೊಳ್ಳೆ, ಎರಡು ಕೈ, ಎರಡು ಕಾಲು—ಇತ್ಯಾದಿ ಈ ಎರಡೆರಡರ ಕ್ರಿಯೆ ಯೆಂಬುದೇ ಒಂದು ಕಾರ್ಯವೆಂದು ಹೊಳೆದಾಗ, ಒಂದು ರೇಖೆಯೆಂದರೆ ಎರಡು ಬಿಂದುಗಳ ಒಕ್ಕೂಟವೆಂದು ತಿಳಿದುಬರುವುದು. ಗಂಡು-ಹೆಣ್ಣು ಇಬ್ಬರ ಕೂಟದಿಂದ ಮತ್ತೊಂದು ಹೊಸ ಜೀವ ಹುಟ್ಟುವುದು 'ಮೂರ'ರ ಕಲ್ಪನೆಯನ್ನು ತಂದಿರಬೇಕು. ಒಂದು ಗೆರೆ ಮತ್ತೊಂದು ಬಿಂದುವನ್ನು ಅಪ್ಪಿಕೊಂಡಾಗ ಅದೊಂದು ತ್ರಿಕೋಣವಾಗುವುದು. ತ್ರಿಕೋಣವನ್ನೇ ಮೇಲಿನ ಪಾತಳಿಯಲ್ಲಿಯ ಒಂದು ಬಿಂದುವಿನತ್ತ ಬೆಳಿಸಿದಾಗ ಅದೊಂದು ಘನಾಕೃತಿಯಾಗಿ 'ನಾಲ್ಕು' ತ್ರಿಕೋಣಗಳ ಹೊರ ಮೈಯುಳ್ಳುದಾಗುವುದು. ಅದನ್ನೇ ಸಮಪಾತಳಿಯ ಮೇಲೆ ರೂಪಿಸುವು ದಾದರೆ ಒಂದು ಚತುಷ್ಕೋಣದಂತೆ ಕಾಣುವುದು. ನಿಜವಾಗಿ ನೋಡಿದರೆ ಅವಕಾಶ (space) ದೊಳಗಿನ ಉದ್ದ-ಅಗಲಗಳಿಂದಲೇ ಚೌಕೋನಿನ ಕಲ್ಪನೆ ಬಂದುದು. ಅದೇ 'ನಾಲ್ಕ'ರ ಕುರುಹು. ಮುಂದಿನ ಅಂಕೆಗಳಿಗೆ ಮೂರನೆಯ ಪ್ರಮಾಣವು (third dimension) ಆವಶ್ಯಕ. ಒಂದು ಚೌಕೋನವನ್ನು ಮೇಲಿನ ಬಿಂದುವಿನತ್ತ ಬೆಳಿಸಿದರೆ, 'ಐದು' ಮೈಯುಳ್ಳ ಒಂದು ಘನಾಕೃತಿಯಾಗುವುದು ( ತಳದ ಚೌಕೋನ ಹಾಗು ಮೇಲಿನ ನಾಲ್ಕು ತ್ರಿಕೋಣ ಕೂಡಿ). ಅದರಂತೆ ಉದ್ದ-ಅಗಲಗಳೆರಡನ್ನೂ ಸರಿಯಾದ ಎತ್ತರದಲ್ಲಿ ಬೆಳಿಸಿದರೆ ಇಟ್ಟಂಗಿಯಂಥ ಒಂದು ಘನಾಕೃತಿಯಾಗುವುದು. ಅದರ ಮೈ 'ಆರು'. ಈ ಆರು ಮೈಯುಳ್ಳ ಘನಾಕೃತಿಯ ಚತುಷ್‌ಕೋನದ ಒಳಭಾಗದ ಘನಮಾನವೇ (content) 'ಏಳ'ನೆಯ ಪದಾರ್ಥ. ಅವಕಾಶ (space) ವನ್ನು ಅಳೆಯುವ ಎಣಿಕೆಯೆಂದರೆ ಈ ಏಳನೆಯ ಪದಾರ್ಥವಾದ ಘನಮಾನವು. ಎಂದರೆ ಅವಕಾಶದ ಅರಿವಿಗೆ ಏಳು ಒಂದು ಸಾಧನವು. ಅವಕಾಶದ ಅಂಶಗಳಾದ ಮೂರು ಪ್ರಮಾಣಗಳು (three dimensions) ಏಳರ ಕಲ್ಪನೆಯಲ್ಲಿ ಪರಿಪೂರ್ಣಾವಸ್ಥೆಯನ್ನು ಪಡೆದಿರುವುದಲ್ಲದೆ, ಏಳು ಎಂಬುದು ಅವಕಾಶದ ಒಂದು ಪ್ರತಿನಿಧಿಯೇ ಆಗಿರುವುದು. ಮೇಲಾಗಿ, ಒಂದರಿಂದ ಆರರ ವರೆಗಿನ ಎಲ್ಲ ಅಂಕೆಗಳ ಕಲ್ಪನೆಗಳ ಸಮನ್ವಯವೂ ಸಾಮುಂಜಸ್ಯವೂ ಏಳರಲ್ಲಿ ಪೂರ್ಣತೆಯನ್ನು ಹೊಂದಿರುವುವು. ಅವಕಾಶದ ಕಲ್ಪನೆಗೂ ಅದೋಂದು ಮಾನದಂಡವಾಗಿರುವುದು. ಮಂತ್ರಶಾಸ್ತ್ರದಲ್ಲಿ ಏಳು ಇದೊಂದು ರಹಸ್ಯಮಯ ಸಂಖ್ಯೆ (mystic number) ಎಂದು ತಿಳಿಯುವರು. ಅಂತೂ ಏಳರ ರಹಸ್ಯ ಎಷ್ಟೆಂಬುದು ಇದರ ಮೇಲಿಂದ ತಿಳಿಯುವಂತಿದೆ. ಒಂದರಿಂದ ಬೆಳೆಯುತ್ತ ಸಾಗಿದ ಅಂಕೆಯ ಅಂಕಿತವು ಒಂದೇ ಏಣಿಯ ಮೆಟ್ಟಲುಗಳಂತೆ ಮೇಲಕ್ಕೇರುತ್ತ ಹೋಗಿ, ಏಳನೆಯ ಮೆಟ್ಟಲನ್ನು ಮುಟ್ಟಿದಾಗ ಒಂದು ವಿಶಾಲವಾದ ಅಟ್ಟವನ್ನು ಸೇರುತ್ತೇವೆ, ಎಂಬುದೇ ಆ ರಹಸ್ಯದ ಒಂದು ರೂಪಕವಾಗಬಹುದು.

"ಏಳು ನೆಲೆಯ ತಿಳುವಳಿಕೆ" ಎಂಬುದು ಮನೋವಿಜ್ಞಾನದ ಒಂದು ಹೊಸ ಸಾಧನೆ. ಯಾವ ವಿಚಾರವನ್ನೇ ಆಗಲಿ ಏಳು ಅಂತಸ್ತುಗಳಿಂದ ಅಳೆದು ನೋಡಲು ಬರುತ್ತದೆ ಎಂಬುದು ಅದರ ಪ್ರಮೇಯ. ನಾವು ನಿಚ್ಚಳವಾಗಿ ತಿಳಿದುಕೊಂಡಿರುವೆವು ಎಂದು ಭಾವಿಸಿದ ಎಷ್ಟೋ ಅಂಶಗಳ ಬಗೆಗಿರುವ ನಮ್ಮ ಜ್ಞಾನವು ಅವುಗಳ ಕೇವಲ ಒಂದೇ ಮುಗ್ಗಲಿನ ಅರಿವೇ ಆಗಿರ ಬಹುದು. ತಿಳಿದಿರುವೆವೆನ್ನುವುದಕ್ಕಿಂತ ತಿಳಿದುಕೊಳ್ಳಬೇಕಾದ ಅಂಶಗಳು ಹೆಚ್ಚಾಗಿ ಇರ ಬಹುದು. ಉದಾಹರಣಾರ್ಥವಾಗಿ: ಯಾವುದೊಂದು ತತ್ತ್ವವು ನೀರಿನಷ್ಟು ನಿರ್ಮಲ, ಆಕಾಶದಷ್ಟು ಸ್ವಚ್ಛ, ಸೂರ್ಯಪ್ರಕಾಶದಷ್ಟು ಸ್ಪಷ್ಟ ಎಂದು ಮುಂತಾಗಿ ನಾವು ಅನ್ನುವುದುಂಟು. ಅಚ್ಚ ತಿಳಿನೀರಿನ ಒಂದು ಹನಿಯನ್ನು ತೆಗೆದುಕೊಂಡು, ಇದರೊಳಗೆ ಏನಾದರೂ ಮಿಶ್ರವಾಗಿರು ವುದೇ ಎಂದು ಕೇಳಿದರೆ, ಯಾರಾದರೂ "ತಿಳಿನೀರಿನೊಳಗೆ ಮಿಶ್ರಣವೆಂದರೇನು?" ಎಂದು ತಟ್ಟನೆ ಉದ್ಗಾರ ತೆಗೆಯಬಹುದು. ಆದರೆ ಆ ತಿಳಿನೀರಿನ ಹನಿಯಲ್ಲಿಯೂ $H_2O$ ಇವುಗಳ ಮಿಶ್ರಣವುಂಟೆಂಬುದು ಅಷ್ಟೇ ಸತ್ಯವಲ್ಲವೆ? ಆಕಾಶವು ಸ್ವಚ್ಛವೆಂಬುದು ಸರಿಯೇ; ಆದರೆ, ಎಂದು? ಹಗಲಿನಲ್ಲಿಯೋ ರಾತ್ರಿಯಲ್ಲಿಯೋ, ಎಂಬುದು ಮನಗಾಣಿಸಿಕೊಳ್ಳಬೇಕಾದ ವಿಷಯ. ಸೂರ್ಯಪ್ರಕಾಶದಷ್ಟು ಸ್ಪಷ್ಟವಾದುದು ಯಾವುದೂ ಇಲ್ಲವೆಂಬುದು ಸುತರಾಂ ಸತ್ಯವು. ಆದರೆ ಆ ಪ್ರಕಾಶದಲ್ಲಿ ಆಕಾಶದೊಳಗಿನ ಯಾವುದೊಂದು ಗ್ರಹ-ನಕ್ಷತ್ರವೂ ಕಾಣಿಸುವುದಿಲ್ಲ, ಎಂಬುದನ್ನು ನೆನೆದುಕೊಂಡಾಗ—ಅದೊಂದು ಸತ್ಯದ ಆಭಾಸವೆಂದಂತೆ ಆಗುವುದಲ್ಲದೆ, ಆ ಸತ್ಯದ ಅವಹೇಳನವನ್ನು ಮಾಡಿದಂತೆಯೂ ಆಗುವುದು. ಆದುದರಿಂದ ನಾವು ನಿರ್ಮಲವೂ, ಸ್ವಚ್ಛವೂ, ಸ್ಪಷ್ಟವೂ ಎಂದು ತಿಳಿದುಕೊಂಡಿರುವ ಎಷ್ಟೋ ತತ್ತ್ವಗಳ ಸತ್ಯತೆಯು, ನಾವು ತಿಳಿದುಕೊಂಡಿರುವುದಕ್ಕಿಂತ ಹೆಚ್ಚಾಗಿ ಅವುಗಳ ಹಿಂದೆ ಹುದುಗಿ ಕೊಂಡಿರುವುದೆಂದರೆ ಅತಿಶಯೋಕ್ತಿಯಾಗಲಾರದು. ಎಲ್ಲ ಗಡ್ಡೆ-ಗೆಣಸುಗಳಂತೆ ಉಳ್ಳಿಯ ಗಡ್ಡೆಯೂ ಒಂದು ಗಡ್ಡೆಯೆಂದು ತಿಳಿದುಕೊಂಡರೆ ಮುಗಿಯಲಿಲ್ಲ. ಅದರ ತಿರುಳನ್ನು ತಿಳಿದು ಕೊಳ್ಳಬೇಕಾದರೆ ಅದರ ಹೊರಗಿನ ಒಂದೊಂದೇ ಪರೆಯನ್ನು ಸುಲಿಯಬೇಕಾಗುವುದು. ಹಾಗೆ ಎಲ್ಲ ಪರೆಗಳನ್ನು ಹೊರಪಡಿಸಿದಾಗಲೇ ಅದರ ತಿರುಳಿನ ತೀವ್ರತೆಯ ವಿಷಯವಾಗಿ ನಮಗೆ ಮನವರಿಕೆಯಾಗುವುದು. ಅದರಂತೆಯೇ, ಯಾವುದೊಂದು ವಿಚಾರವನ್ನು ಅಥವಾ ತತ್ತ್ವವನ್ನು ಏಳು ಪರೆಯಾಗಿ ಪರಿಭಾವಿಸಿ ನೋಡಿದಾಗ, ಒಂದಕ್ಕಿಂತ ಹಿಂದಿನ ಮತ್ತೊಂದು ಪರೆಯಲ್ಲಿ ಸತ್ಯಾಂಶವು ಹೆಚ್ಚೆಚ್ಚಾಗಿ ಸ್ಪಷ್ಟವಾಗುತ್ತ ಹೋಗುವುದು. ಹಾಗೂ ಏಳನೆಯ ಪರೆಯಲ್ಲಿ ಅದರ ತಿರುಳು ಗೋಚರಿಸುವುದು. ಇದು ಈ ಹೊಸ ತಿಳುವಳಿಕೆಯ ರಹಸ್ಯವು. ಏಳು ನೆಲೆಗಳಲ್ಲಿ ಒಂದು ವಿಚಾರವು ಪರಿಪೂರ್ಣತೆಯನ್ನು ಪಡೆಯುವುದು ಎಂಬುದು ಈ ತಿಳುವಳಿಕೆಯೊಳಗಿಂದ ಸ್ಥಾಪಿತವಾದ ಸಿದ್ಧಾಂತವು.

ಒಂದರಿಂದ ಏಳರ ವರೆಗಿನ ಅಂಕೆಗಳ ಕಲ್ಪನೆಯು ಊಹೆಯನ್ನು ಅವಕಾಶದ ಆಧಾರ ದಿಂದ ಮೇಲೆ ಕಟ್ಟಲಾಗಿದೆಯಷ್ಟೇ. ಇನ್ನು ನಾಲ್ಕನೆಯ ಪ್ರಮಾಣವಾದ (fourth dimension) ಕಾಲದ ಆಧಾರದಿಂದ ಒಂದು ಉದಾಹರಣೆಯನ್ನು ಎತ್ತಿಕೊಳ್ಳಬಹುದು. ಕಾಲವು ಗತಿಪ್ರಧಾನವಾದುದು. ಆದುದರಿಂದ ಕಾಲವನ್ನು ಗತಿಯ ಮೇಲಿಂದ ಎಣಿಸುವರು. ಬೆಳವಣಿಗೆಯನ್ನು ಹೊಂದುವ ಪ್ರತಿಯೊಂದು ವಸ್ತುವೂ ಅವಕಾಶವನ್ನು ವ್ಯಾಪಿಸುವಂತೆ ಕಾಲ ವನ್ನೂ ವ್ಯಾಪಿಸುವುದು. ಎಲ್ಲ ವಸ್ತುಗಳೂ ಗತಿಬದ್ಧವಾಗಿರುವವು. ಅವುಗಳಲ್ಲಿ ಗತಿಯು

ಎರಡು ಪ್ರಕಾರವಾಗಿ ಕಾಣಿಸಿಕೊಳ್ಳುವುದು: ಅಂತರ್ಗತಿ ಮತ್ತು ಬಾಹ್ಯಗತಿ. ಹುಲ್ಲಿನ ಒಂದು ಎಳೆಯನ್ನೂ ಸೂಕ್ಷ್ಮದರ್ಶಕ ಯಂತ್ರದ ಕೆಳಗೆ ನೋಡಿದಾಗ, ಅದರೊಳಗೆ ಅಡಕವಾದ ಪರಮಾಣುಗಳ ಅಂತರ್ಗತಿಯು ಕಂಡುಬರುವುದು. ಬಾಹ್ಯಗತಿಯನ್ನು ನಾವು ಸಾಮಾನ್ಯವಾಗಿ ನಿಮಿಷ, ಗಳಿಗೆ, ತಾಸು, ಪ್ರಹರ, ದಿನ, ವಾರ, ಮಾಸ, ವರುಷ ಎಂದು ಎಣಿಸುವೆವು. ಇವೆಲ್ಲವೂ ವರ್ತಮಾನವೆಂಬ ಹರಿನಳಿಗೆಯೊಳಗಿಂದ ಹಾದು ಹೋಗುವ ಭೂತ ಭವಿಷ್ಯತ್ತುಗಳೆಂಬ ಅನಂತ ಪ್ರವಾಹದ ಹನಿಗಳು ಅಷ್ಟೆ. ಈ ಯಾಂತ್ರಿಕಯುಗದಲ್ಲಿ ಕಾಲಮಾನದ ಎಣಿಕೆಯನ್ನು ಗಡಿಯಾರಕ್ಕೆ ಒಪ್ಪಿಸಲಾಗಿದೆ. ಆದುದರಿಂದ ಬುದ್ಧಿವಾದಿಯೆನಿಸಿದ ಮನುಷ್ಯನು ತನಗೆ ಯಾವ ಗತಿಯ ಸಂಬಂಧವೂ ಇಲ್ಲ, ತಾನು ಸ್ವತಂತ್ರನಾಗಿರುವೆನೆಂದು ಕಲ್ಪಿಸಿಬಿಡುತ್ತಾನೆ. ಆದರೆ ಕಾಲಮಾನದ ಅದೆಷ್ಟು ಗತಿಗಳಿಗೆ ಅವನು ಸಂಬದ್ಧನಾಗಿರುವನೆಂಬುದನ್ನು ತಿಳಿದುಕೊಳ್ಳುವುದು ತೀರ ಆವಶ್ಯಕವಾಗಿದೆ:—

೧. **ಬ್ರಹ್ಮಾಂಡಗತಿ** (Cosmic Age):—ಜ್ಯೋತಿರ್ವಿಜ್ಞಾನದ ಮೇರೆಗೆ ಆಕಾಶದೊಳಗಿನ ಧ್ರುವನಕ್ಷತ್ರವೊಂದೇ ಸ್ಥಿರವಾದುದು, ಉಳಿದ ನಕ್ಷತ್ರಗಳೆಂದೊಡಗೂಡಿದ ಬ್ರಹ್ಮಾಂಡವೆಲ್ಲವೂ ಅದರ ಸುತ್ತಲೂ ತಿರುಗುವುದು. ಸೂರ್ಯನೂ ಒಂದು ನಕ್ಷತ್ರ. ಪೃಥ್ವಿಯೇ ಮೊದಲಾದ ಗ್ರಹಗಳು ಅದರಿಂದ ಬೇರೆಯಾಗುವ ಪೂರ್ವದಲ್ಲಿ ಅದೊಂದು ದೊಡ್ಡ ನಕ್ಷತ್ರಪುಂಜವಾಗಿದ್ದಿತು. ತನ್ನ ಗ್ರಹೋಪಗ್ರಹಗಳೊಂದಿಗೆ ಸೂರ್ಯನು ಧ್ರುವನಕ್ಷತ್ರದ ಸುತ್ತು ತಿರುಗುವ ಗತಿಗೆ ಬ್ರಹ್ಮಾಂಡಗತಿಯೆನ್ನುವರು.

೨. **ಸೌರಗತಿ** (Solar Age):—ಈ ಕೇಂದ್ರಪಿಕಿರಣ ಶಕ್ತಿಯಿಂದ ಸೂರ್ಯಪುಂಜವು ಒಡೆದು ಬುಧ, ಶುಕ್ರ, ಪೃಥ್ವಿಯೇ ಮೊದಲಾದ ಗ್ರಹಗಳುಂಟಾದುವು. ಅವೆಲ್ಲವೂ ಸೂರ್ಯನ ಸುತ್ತಲೂ ತಿರುಗುವುವು. ಪೃಥ್ವಿಯು ತನ್ನ ಸುತ್ತು ತಿರುಗುತ್ತ ಸೂರ್ಯನ ಸುತ್ತಲೂ ತಿರುಗುತ್ತಿರುವ ಗತಿಯು ಸೌರಗತಿಯು.

೩. **ಭೂಗರ್ಭಗತಿ** (Geological Age):—ಸೂರ್ಯನಿಂದ ಬೇರೆಯಾದ ಪೃಥ್ವಿಯೊಳಗೆ ವಿವಿಧವಾದ ಭೌತಿಕ-ರಾಸಾಯನಿಕ ಕ್ರಿಯೋಪಕ್ರಿಯೆಗಳ ಪರಿಣಾಮವಾಗಿ ವಾಯುರೂಪವು ಜಲರೂಪಕ್ಕಿಳಿದು ಘನರೂಪವನ್ನು ಹೊಂದುವುದು. ಜಡಸೃಷ್ಟಿಯಲ್ಲಿ ಅವ್ಯಾಹತವಾಗಿ ನಡೆಯುತ್ತಲಿರುವ ಈ ಗತಿಯು ಭೂಗರ್ಭಗತಿಯು.

೪. **ಪ್ರಾಣಗತಿ** (Biological Age):—ಜಡಸೃಷ್ಟಿಯು ವಿಕಸಿತವಾಗುತ್ತಿರುವಂತೆ ಪ್ರಾಣವು ಜೀವಾಣುಗಳ (cells) ಪರಿಣತಿಯಿಂದ ಚೈತನ್ಯವನ್ನು ಬೆಳೆಯಿಸುತ್ತಿರುವುದು. ಅದು ಪ್ರಾಣಗತಿ.

೫. **ಮಾನವೀಯಗತಿ** (Human Age):—ಪ್ರಾಣದ ವಿಕಾಸಕ್ರಮದಲ್ಲಿ ಮನಸ್ಸಿನ ಆವಿರ್ಭಾವವಾಗಿ ಮೂಲಮನುಷ್ಯನಿಂದ ಮೊದಲುಗೊಂಡು ಈ ಗತಿಯು ಮುಂದುವರಿಯುವದು.

೬. **ಸಾಂಸ್ಕೃತಿಕಗತಿ** (Cultural Age):—ಮನಸ್ಸಿನ ಪರಿಣತಿಯಿಂದ ಬುದ್ಧಿ, ವಿಚಾರ, ಭಾವನೆಗಳ ಉನ್ನಯನವಾಗಿ ಉಚ್ಚಗತಿಯೊಂದು ವೈಚಾರಿಕ ಲೋಕದಲ್ಲಿ ಪಸರಿಸುವುದು. ಅದು ಸಾಂಸ್ಕೃತಿಕ ಗತಿ.

**೭. ವ್ಯಕ್ತಿಗತಿ** ( Personal Age ):— ಪ್ರತಿಯೊಬ್ಬ ವ್ಯಕ್ತಿಯ ಜನ್ಮ-ಮರಣಗಳಿಗೆ ಸಂಬಂಧಪಟ್ಟ ಒಂದು ಗತಿಯು ಆ ವ್ಯಕ್ತಿಯನ್ನು ಬಾಲ್ಯ-ಯೌವನವೇ ಮೊದಲಾದ ಅವಸ್ಥೆಗಳೊಳಗಿಂದ ಸಾಗಿಸುವುದು. ಅದು ವ್ಯಕ್ತಿಗತಿ.

ಇಂತು ನೋಡಿದರೆ ಈ ಭೂತಲದ ಮೇಲಿನ ಪ್ರತಿಯೊಬ್ಬ ವ್ಯಕ್ತಿಯು ಕಾಲಮಾನದ ಎಷ್ಟೊಂದು ಗತಿಗಳಿಗೆ ಒಳಗಾಗಿರುವನೆಂಬುದು ತೋರುವುದು. ಅವೆಲ್ಲವುಗಳ ಪರಿಣಾಮವೂ ಅವನ ಮೇಲೆ ಏಕಕಾಲಕ್ಕೆಯೇ ಆಗುವುದು. ಗತಿಯಿಲ್ಲವೆಂದು ಗೋಳಾಡುವ ನಿರ್ಗತಿಕರೂ ಕಾಲಮಾನದ ಇಷ್ಟೆಲ್ಲ ಗತಿಗಳಿಗೆ ಅಧೀನರಾಗಿರದೆ ಗತ್ಯಂತರವಿಲ್ಲ. ಅಥವಾ, ಇವೆಲ್ಲ ಗತಿಗಳ ಮೊತ್ತವೇ ಅವರಾಗಿರುವರೆಂದರೆ ಅತಿಶಯೋಕ್ತಿಯಾಗಲಾರದು. ಅಂತೆಯೇ ನಮ್ಮ ಪೂರ್ವಜರು ' ಕಾಲಾಯ ತಸ್ಮೈ ನಮಃ ' ಎಂದು ತ್ರಿಕಾಲಸ್ತುತಿಯನ್ನು ಮಾಡುತ್ತಿದ್ದರೆಂದು ತೋರುತ್ತದೆ.

ಅಖಿಲ ವಿಶ್ವವು ಉದ್ದ-ಅಗಲ-ಎತ್ತರಗಳೆಂಬ ಮೂರು ಪ್ರಮಾಣಗಳಿಂದ ಕೂಡಿದ ಅವಕಾಶದಲ್ಲಿ ( space ) ಪರಿಮಿತವಾಗಿರುವಂತೆ, ಕಾಲವೂ ಅದರ ನಾಲ್ಕನೆಯ ಪ್ರಮಾಣ ( fourth dimension ) ವಾಗಿರುವುದೆಂದು ಇಂದಿನ ವಿಜ್ಞಾನವು ಸಾರುವುದು. ಕಾಲಾವಕಾಶಗಳ ಎಣಿಕೆಗೆ ಆವಶ್ಯಕವಾಗಿರುವ ಮಾನದಂಡದ ಕಲ್ಪನೆಗೆ **ಏಳು** ಹೇಗೆ ಮಹತ್ತ್ವದ ಸಂಖ್ಯೆಯಾಗಿರುವುದೆಂಬುದನ್ನು ನಾವು ಮೇಲಿನ ವಿವೇಚನೆಯಿಂದ ಮನಗಾಣಬಹುದು. ಮನುಷ್ಯನ ಆಯುರ್ಮಾನದಲ್ಲಿಯೂ ಈ ಏಳರ ಪ್ರಭಾವವೇ ಕಂಡುಬರುವುದೆಂಬ ಮಾತನ್ನು ಆಂಗ್ಲ ಮಹಾಕವಿ ಶೇಕ್ಸಪಿಯರನು ಸಾರಿರುವುದನ್ನು ಇಲ್ಲಿ ನೆನೆಯಬಹುದು :

*All the world's a stage,*
*And all the men and women merely players ;*
*They have their exits and their entrances ;*
*And one man in his time plays many parts,*
*His acts being seven ages* ........................
.........................................

*( As You Like It, Act II )*

ತಿಳುವಳಿಕೆ ಮನೋವಿಜ್ಞಾನಕ್ಕೆ ಸಂಬಂಧಿಸಿದ ವಿಷಯವಷ್ಟೇ ! ಕಾಲ ಮತ್ತು ಅವಕಾಶ ಇವುಗಳ ಉದಾಹರಣೆಗಳ ಅವಗಾಹನೆಯಿಂದ ಭೌತಿಕ ಜಗತ್ತಿನಲ್ಲಿಯ ಏಳ್-ನೆಲೆಯ ಮಹತ್ತ್ವವನ್ನು ಅರಿತಂತೆ, ಮಾನಸಿಕ ಹಾಗು ಆಧ್ಯಾತ್ಮಿಕ ಲೋಕಗಳಲ್ಲಿಯೂ ಅದು ಹೇಗೆ ಅಧಿಷ್ಠಿತವಾಗಿರುವುದೆಂದು ಮನವರಿಕೆ ಮಾಡಿಕೊಡುವುದೇ ಈ ಲೇಖನದ ಉದ್ದೇಶವಾಗಿರುವುದು. ಏಳು ವಿಧದ ಅಜ್ಞಾನದಿಂದ ಏಳು ವಿಧಧ ಸುಜ್ಞಾನದ ಕಡೆಗೆ ಸಾಗುವ ಸೂಕ್ಷ್ಮ ವಿವೇಚನೆಯನ್ನು ಆಧುನಿಕ ಮಹರ್ಷಿಗಳಾದ ಶ್ರೀ ಅರವಿಂದರು ತಮ್ಮ " ದಿವ್ಯಜೀವನ " ( The Life Divine ) ಎಂಬ ಉದ್ಗ್ರಂಥದಲ್ಲಿಯೂ " ವೇದರಹಸ್ಯ " ( The Secret of the Vedas ) ಎಂಬ ಗ್ರಂಥದಲ್ಲಿಯೂ ಕೂಲಂಕಷವಾಗಿ ಮಾಡಿರುವರು.

ಶ್ರೀ ಅರವಿಂದರು ಸಾಧಿಸುತ್ತಿರುವ ಆಧ್ಯಾತ್ಮಿಕ ಸಿದ್ಧಿಯು ಯಾವ ಅಣುಬಾಂಬಿಗಿಂತಲೂ ಕಡಿಮೆಯಾಗಿಲ್ಲವೆಂದರೆ ಅಣುವಿನ ಅಭ್ಯಾಸದಲ್ಲಿ ತೊಡಗಿದ ಪದಾರ್ಥವಿಜ್ಞಾನಿಗಳು ಆಶ್ಚರ್ಯಚಕಿತರಾಗಬಹುದು. ಆದರೆ ಅಚೇತನ ಪದಾರ್ಥಗಳ ಅಣುವಿನ ಶೋಧಕ್ಕಿಂತ ಮುನ್ನವೇ ಚೇತನೆಯ ಅಣುವು ಪಾರಮಾರ್ಥಿಕ ಸಾಧನೆಗೆ ಅಳವಟ್ಟಿರುವುದು. ಶ್ರೀ ಅರವಿಂದರ ಈ ಹೊಸ ಸಿದ್ಧಿಯ ದಿಗ್ದರ್ಶನವನ್ನು ಏಳ್‌-ನೆಲೆಯ ತಿಳುವಳಿಕೆಯ ಕ್ರಮದಲ್ಲಿ ಸ್ವಲ್ಪಮಟ್ಟಿಗೆ ಮಾಡಲು ಇಲ್ಲಿ ಪ್ರಯತ್ನಿಸಲಾಗಿದೆ.

ಶ್ರೀ ಅರವಿಂದರು ಮಹಾಯೋಗಿಗಳು. ಅವರದು ಯೋಗಮಾರ್ಗ. ನಮ್ಮಲ್ಲಿ ಭಕ್ತಿಯೋಗ, ಕರ್ಮಯೋಗ, ಹಠಯೋಗ, ಜ್ಞಾನಯೋಗ ಮುಂತಾದ ಬೇರೆ ಬೇರೆ ಯೋಗಮಾರ್ಗಗಳು ಪ್ರಾಚೀನ ಕಾಲದಿಂದಲೂ ಇರುವವು. ಶ್ರೀ ಅರವಿಂದರು ಭಾರತೀಯ ನವಜನ್ಮದ ಅರುಣೋದಯಕಾಲದಲ್ಲಿ ಪೂರ್ವದಿಗಂತದಲ್ಲಿ ಉದಯಿಸುತ್ತಿರುವ ರವಿಯಂತಿರುವರು. ಪೂರ್ವದಲ್ಲಿ ಆಗುತ್ತಿರುವ ಈ ಉದಯವು ಪಶ್ಚಿಮದ ಪರಿಭ್ರಮಣದ ಕೊನೆ. ಪಶ್ಚಿಮದ ಪರಾಕ್ರಮದೊಂದಿಗೆ ಪೂರ್ವದ ಅಧ್ಯಾತ್ಮವೈಭವದ ಸಮನ್ವಯ ಮಾಡುವುದೇ ಅವರ ಉದಯದಿಂದ ಉದಿಸಿದ ಪ್ರಕಾಶಮಯ ನವಜೀವನ. ಅಂತೆಯೇ ಅವರದು ಪೂರ್ಣಯೋಗ.

ನಮ್ಮ ದೇಹದಲ್ಲಿ ಸೂಕ್ಷ್ಮವಾದ ಅನೇಕ ಚಕ್ರಗಳಿರುವವು. ಯೋಗಸಾಧನೆಯಿಂದ ಅವುಗಳನ್ನು ಉದ್ದೀಪನಗೊಳಿಸಿ ಅವುಗಳಲ್ಲಿ ಅಧ್ಯಾತ್ಮಶಕ್ತಿಯ ಅಧಿಷ್ಠಾನವನ್ನು ಮಾಡಿದರೆ ಅಲೌಕಿಕ ಕಾರ್ಯವನ್ನು ಸಾಧಿಸುವುದು ಸುಲಭಸಾಧ್ಯವಾಗುವುದು. ವಿಜ್ಞಾನಿಗಳು (scientists) ವಿವಿಧ ಸಂಶೋಧನೆಗಳ ಮೂಲಕ ಭೌತಿಕ ಜಗತ್ತಿನಲ್ಲಿ ಸಾಧಿಸುವ ಪರಿಣಾಮಗಳಿಗಿಂತ ಲಕ್ಷಾವಧಿ ಪಾಲು ಶ್ರೇಷ್ಠವಾದ ಸಿದ್ಧಿಗಳನ್ನು ಯೋಗಿಗಳು ಸಾಧಿಸಬಲ್ಲರು. ಉದಾಹರಣೆಗಾಗಿ, ಒಬ್ಬ ಯೋಗಿಯು ತನ್ನ ಆಶ್ರಮದಲ್ಲಿ ಕುಳಿತು, ಜಗತ್ತಿನಲ್ಲಿ ಬೇರೆ ಬೇರೆ ದೇಶಗಳಲ್ಲಿರುವ ತನ್ನ ಸಾವಿರಾರು ಜನ ಶಿಷ್ಯರೊಂದಿಗೆ ಏಕಕಾಲಕ್ಕೆ ಮಾತನಾಡಬಲ್ಲನು. ಯೋಗಮಾರ್ಗದ ಯೋಗ್ಯತೆಯನ್ನು ಅರಿತವರು ಅದು ಸರಿಯೆಂದು ಮನ್ನಿಸಬಹುದು. ಆದರೆ ಬುದ್ಧಿವಾದಿಗಳಿಗೆ ಇದು ರುಚಿಸದು. ಒಂದು ಮೈಕ್ರೊಫೋನಿನ ಮುಂದೆ ನಿಂತು ಒಂದು ಆಕಾಶವಾಣಿಯ ಕೇಂದ್ರದಿಂದ ಮಾತನಾಡಿದರೆ ಜಗತ್ತಿನಲ್ಲಿಯ ಎಲ್ಲ ರೇಡಿಯೋಗಳ ಮೂಲಕವಾಗಿಯೂ ಅದು ಕೇಳಬರುವುದು ಸತ್ಯವಾಗಿರುವಂತೆ ಆಧ್ಯಾತ್ಮಿಕಸಿದ್ಧಿಯೂ ಸತ್ಯವಾದುದು. ಇಷ್ಟೇ ಅಲ್ಲ, ಆಧ್ಯಾತ್ಮಿಕ ಸಿದ್ಧಿಯಿಂದ ಪ್ರಕಟವಾದ ಶಕ್ತಿಯಿಂದಲೇ ಭೌತಿಕ ಸಂಶೋಧನೆಗಳು ಸಾಧ್ಯವಾಗುವವು ಎಂಬುದು ಯೋಗಶಾಸ್ತ್ರದ ಸಿದ್ಧಾಂತ. ಆಧ್ಯಾತ್ಮಿಕ ಅಣುವನ್ನು ಸಾಕ್ಷಾತ್ಕರಿಸಿದ ಹೊರತು ಭೌತಿಕ ಅಣುವಿನ ಶೋಧವು ಯಥಾರ್ಥವಾಗಲಾರದು. ಅಹಂಕಾರವೆಂಬ ಅಣುವನ್ನು ಆಧ್ಯಾತ್ಮಿಕ ಸಾಧನೆಯಿಂದ ವಿಚ್ಛೇದಿಸಿದ ವಿನಾ ಭೌತಿಕ ಅಣುವಿನ ಭೇದವೂ (splitting of the atom) ಪೂರ್ಣತಯಾ ಶಕ್ಯವಾಗಲಾರದು—ಎಂಬೀ ಯೋಗಶಾಸ್ತ್ರದ ಸಿದ್ಧಾಂತದ ಮರ್ಮವನ್ನು ನಾವು ಶ್ರೀ ಅರವಿಂದರ ಚರಿತ್ರೆಯಿಂದ ಮನಗಾಣಬಹುದಾಗಿದೆ.

ಆಧ್ಯಾತ್ಮಿಕ ಶಕ್ತಿಯನ್ನೂ ಚೈತನ್ಯವನ್ನೂ ಪ್ರಚೋದನಗೊಳಿಸಲು ಸೂಕ್ಷ್ಮವಾದ ಚಕ್ರಗಳನ್ನು ಕಾರ್ಯಪ್ರವೃತ್ತವನ್ನಾಗಿ ಮಾಡಬೇಕಾಗುವುದೆಂದು ಮೇಲೆ ಹೇಳಲಾಗಿದೆಯಷ್ಟೇ.

ಹಾಗೆ ಆ ಧೀಶಕ್ತಿಯು ಪ್ರಚೋದಿತವಾದಾಗ ಮೇರುದಂಡದ ಗುಂಟ ಪ್ರವಹಿಸತೊಡಗುವುದು. ನಮ್ಮ ದೇಹದೊಳಗಿನ ಮುಖ್ಯವಾದ ಅಂಥ ಆರು ಸೂಕ್ಷ್ಮ ಚಕ್ರಗಳನ್ನು ನಿರ್ದೇಶಿಸಬಹುದು :

೧. ಸ್ವಾಧಿಷ್ಠಾನ ಚಕ್ರ .... ಕೆಳಹೊಟ್ಟೆಯಲ್ಲಿ
೨. ಮಣಿಪುರ ಚಕ್ರ .... ನಾಭಿಯಲ್ಲಿ
೩. ಅನಾಹತ ಚಕ್ರ .... ಹೃದಯದಲ್ಲಿ
೪. ವಿಶುದ್ಧ ಚಕ್ರ .... ಕಂಠದಲ್ಲಿ
೫. ಆಜ್ಞಾ ಚಕ್ರ ... ಭ್ರೂಮಧ್ಯದಲ್ಲಿ
೬. ಸಹಸ್ರದಳ ಚಕ್ರ .... ತಾಲುಸ್ಥಾನದಲ್ಲಿ

ಆರನೆಯ ಚಕ್ರವನ್ನು ಬ್ರಹ್ಮರಂಧ್ರವೆಂದೂ ಕರೆಯುವರು. ಅಷ್ಟಾಂಗ ಯೋಗ ಸಾಧನೆಯ ಕ್ರಮುವಂತೆ ಯೋಗಿಯು ತನ್ನ ಆತ್ಮವನ್ನು ಬ್ರಹ್ಮರಂಧ್ರವಲ್ಲಿ ನೆಲಿಸುವಂತೆ ಮಾಡಿ ಪರಮಾತ್ಮ ಸಂಧಾನವನ್ನು ಮಾಡುತ್ತ ಬ್ರಹ್ಮಾನಂದವನ್ನು ಅನುಭವಿಸುವನೆಂದು ವರ್ಣಿಸುವರು. ಹಾಗೆ ಮಾಡಬೇಕಾದರೆ ಸ್ವಾಧಿಷ್ಠಾನ ಚಕ್ರದಿಂದ ಪ್ರತಿಯೊಂದು ಚಕ್ರವನ್ನೂ ಉದ್ದೀಪನಗೊಳಿಸುತ್ತ ಅವುಗಳಲ್ಲಿ ಆತ್ಮಪ್ರತಿಷ್ಠೆಯನ್ನು ಮಾಡುತ್ತ ಮಾಡುತ್ತ ಕೊನೆಯದಾದ ಬ್ರಹ್ಮರಂಧ್ರವನ್ನು ಏರಬೇಕಾಗುವದು. ಇವೆಲ್ಲ ಪಾರ್ಥಿವ ದೇಹದೊಳಗಿನ ಚಕ್ರಗಳಾದುವು. ಅವೆಲ್ಲವುಗಳ ಮೇಲೆ ಅಂತರಿಕ್ಷದಲ್ಲಿರುವುದೇ **ಪರಮಾತ್ಮ ಚಕ್ರವು**. ಅದರ ವ್ಯಾಪ್ತಿ ಅಖಿಲಾಂಡ ಕೋಟಿ ಬ್ರಹ್ಮಾಂಡಗಳಷ್ಟು. ಅದರ ಒಂದು ಸ್ಪರ್ಶವೂ ಬ್ರಹ್ಮಾನಂದವನ್ನು ಉಂಟು ಮಾಡುವುದು. ಯೋಗಸಾಧನೆಯಲ್ಲಿ ನಿರತರಾದ ಯೋಗಿಗಳೆಲ್ಲರು ಆ ಆನಂದವನ್ನು ಪಡೆಯುವರು. ಆದರೆ ಶ್ರೀ ಅರವಿಂದರ ಯೋಗಸಾಧನೆಯು ಈ ಸ್ಪರ್ಶದ ಮಟ್ಟಿಗಷ್ಟೇ ನಿಂತಿಲ್ಲ. ಅದಕ್ಕಿಂತಲೂ ಮೇಲೇರಿ ಆ ಪರಮಾತ್ಮ ಚಕ್ರವನ್ನೇ ಏಳನೆಯ ಚಕ್ರವನ್ನಾಗಿ ಮಾಡಿ, ತಮ್ಮ ಆತ್ಮವನ್ನು ಅದರಷ್ಟು ಮೇಲೆ ಎತ್ತರಿಸಿ, ಆ ಪರಮಾತ್ಮ ಚಕ್ರದೊಳಗಿನ ಅಣುವಿನ ಶೋಧವನ್ನು ಮಾಡಿದೆ. ಹಾಗು ಅಲ್ಲಿಯೇ ನಿಂತು ಆ ಅಣುವನ್ನು ವಿಚ್ಛೇದ ಮಾಡುವುದರಿಂದ ಉಂಟಾಗಬಹುದಾದ ಅನಂತಶಕ್ತಿಯಿಂದ ಜಗತ್ತಿನ ಉದ್ಧಾರ ಮಾಡುವ ಸಾಧನೆಯಲ್ಲಿ ಅವರೀಗ ನಿರತರಾಗಿರುವರು. ಅದು ಸಾಧಿಸಿದಾಗ ಮಾನವಲೋಕದ ತಿಳುವಳಿಕೆ ಬೆಳೆಯುವುದಲ್ಲದೆ, ವಿಶಾಲವೂ ಉನ್ನತವೂ ಆದ ಒಂದು ಚೇತನವು (consciousness) ಉಂಟಾಗಿ ಜಗತ್ತು ಒಂದು ಹೊಸ ಯುಗದಲ್ಲಿ ಕಾಲಿಡಲಿರುವುದು.

ಹೀಗಾಗುವುದರಿಂದ ನಿಜವಾಗಿಯೇ ಏನು ಸಂಭವಿಸಲಿರುವುದೆಂಬುದನ್ನು ಈಗಲೇ ಕಲ್ಪಿಸುವುದು ಅಸಾಧ್ಯವು. ಆದರೆ ಮಾನವರ ಪ್ರಗತಿಯ ಪಥದಲ್ಲಿ ಇಂದಿನ ವರೆಗೂ ಸಂಭವಿಸದೆ ಇದ್ದಂಥ ಯಾವುದೋ ಒಂದು ಅಘಟಿತ ಘಟನೆ ಸಂಘಟಿಸಲಿರುವುದೆಂಬುದು ಖಂಡಿತ. ಆ ಆಧ್ಯಾತ್ಮ ಅಣುವಿನ ಸಾಕ್ಷಾತ್ಕಾರ, ಅದರ ವಿಚ್ಛೇದ, ಆ ಅಮೋಘವಾದ ಪರಾಶಕ್ತಿಯ ವಿಕಿರಣ ಹಾಗು ಅದರಿಂದ ನಿರ್ಮಿತವಾಗಲಿರುವ ಪರಮೋಚ್ಚ ಚೇತನ—ಇವುಗಳನ್ನು ಮೈಗೂಡಿಸಿಕೊಳ್ಳಲು ನೂರಾರು ವರುಷಗಳು ಹಿಡಿಯಬಹುದು. ಪ್ರತಿಯೊಬ್ಬ ಮಾನವನೂ ಆ ನವಚೇತನದಲ್ಲಿ ಜಾಗೃತನಾಗಿ ಜಗತ್ತಿನಲ್ಲಿ ಎಲ್ಲೆಲ್ಲಿಯೂ ಆ ಚೈತನ್ಯವು ಸ್ಥಾಯಿಯಾಗಿ ನಿಲ್ಲಬೇಕಾದರೆ ಶತಮಾನಗಳು ಹಿಡಿಯಬಹುದು. ಆದರೆ ಅಂಥ ಪರಮ ಚೇತನವನ್ನು

ಪಡೆಯುವುದು ಸಾಧ್ಯವಿದೆಯೆಂಬುದನ್ನು ಪ್ರಯೋಗಪೂರ್ವಕವಾಗಿ ತೋರಿಸುವುದೇ ಶ್ರೀ ಅರವಿಂದರ ಪೂರ್ಣಯೋಗದ ಸಂಕಲ್ಪವು. ಈ ಸಂಕಲ್ಪಬಲವೇ ಅದರ ಪ್ರತಿಫಲವು.

ಈ ಹೊಸ ಚೇತನದ ದಿಗ್ದರ್ಶನವನ್ನು ಕೊಂಚಮಟ್ಟಿಗೆ ಮಾಡಿ ಈ ಲೇಖನವನ್ನು ಮುಗಿಸಬಹುದು. ದೇಹ, ಆತ್ಮ ಹಾಗು ಪರಮಾತ್ಮ ಇವುಗಳ ಒಂದು ತ್ರಿಕೋನವನ್ನು ಕಲ್ಪಿಸಿದರೆ, ದೇಹ–ಆತ್ಮಗಳು ಆ ತ್ರಿಕೋನದ ತಳರೇಖೆಯ ತುದಿಬಿಂದುಗಳಾಗಬಹುದು; ಪರಮಾತ್ಮನು ಶಿರೋಬಿಂದುವಾಗಬಹುದು. ಇದು ನಮ್ಮ ಇಂದಿನ ಇರವಿನ ರೀತಿ. ತಳ ರೇಖೆಯ ಮಧ್ಯಬಿಂದುವಿನಿಂದ ಒಂದು ಲಂಬವನ್ನು ತೆಗೆದರೆ, ಆ ಲಂಬದ ಒಂದು ತುದಿಗೆ ಶಿರೋಬಿಂದು (ಅದೇ ಪರಮಾತ್ಮನ ಸ್ಥಾನ), ಇನ್ನೊಂದು ಬಿಂದುವಿನಲ್ಲಿ ಅಂದರೆ ತಳರೇಖೆಯ ಮಧ್ಯಬಿಂದುವಿನಲ್ಲಿ ದೇಹ–ಆತ್ಮಗಳ ಸಂಗಮಸ್ಥಾನವೆಂದು ಕಲ್ಪಿಸಬಹುದು. ತಳರೇಖೆಯ ಮಧ್ಯಬಿಂದುವೆನ್ನುವುದೇ ಬ್ರಹ್ಮರಂಧ್ರ. ಆತ್ಮವು ಆ ಲಂಬದಗುಂಟ ಮೇಲಕ್ಕೆ ಸಾಗಿ, ಅಲ್ಲಿಯ ಆಧ್ಯಾತ್ಮಿಕ ಅಣುಗಳನ್ನು ವಿಚ್ಛೇದಿಸತೊಡಗಿದಂತೆ, ಮಾನವಲೋಕದೊಳಗಿನ ದೇಹಾತ್ಮಜನ್ಯ ಬಿಂದುವು ಒಡೆದು, ಲಂಬವು ಎರಡುಭಾಗವಾಗಿ ಸೀಳತೊಡಗುವುದು. ಮೇಲಿನ ಅಣುವಿಚ್ಛೇದನ-ಶಕ್ತಿಯು ಹೆಚ್ಚಾದಂತೆ, ಆ ಶಿರೋಬಿಂದುವಿನತ್ತ ಲಂಬದ ಹೋಳುಗಳು ಹೆಚ್ಚು ಹೆಚ್ಚು ಅಂಶಗಳ ಕೋನಗಳನ್ನು ಮಾಡುತ್ತ, ಕೊನೆಗೆ ಅವೆರಡೂ ಒಂದು ಸರಳರೇಖೆಯಾಗಿ ನಿಲ್ಲುವುವು. ಮೊದಲಿನ ಶಿರೋಬಿಂದುವೇ ಈ ಹೊಸ ಸರಳರೇಖೆಯ ಮಧ್ಯಬಿಂದುವಾಗುವುದು. ಹಾಗು ಆ ಲಂಬವನ್ನೇ ಒಂದು ತ್ರಿಜ್ಯವನ್ನಾಗಿ ಕಲ್ಪಿಸಿದರೆ ಅದೊಂದು ಅರ್ಧ ವರ್ತುಲವಾಗುವುದು. ಹಾಗು ಆ ಹೊಸ ಅರ್ಧವರ್ತುಲವು ಹೊಸ ಮನಸ್ಸಿನ ವಿಸ್ತಾರವನ್ನು ತೋರಿಸುವುದು. ಅದರ ಈ ಮೂರು ತ್ರಿಜ್ಯಗಳು ಮನಸ್ಸಿನ ಮೂರು ಅಂಗಗಳು: ಇಚ್ಛಾಂಗ (Conation), ಅನುಭವಾಂಗ (Cognition) ಮತ್ತು ಸಂವೇದನಾಂಗ (Affection); ಅವು ಸಮಾನವಾಗಿರುವವು. ಅವುಗಳ ವಿಸ್ತಾರವು ಮಾನವನ ಅತ್ಯುಚ್ಚ ಮನೋಭೂಮಿಕೆಗಿಂತಲೂ ಉನ್ನತವಾದ ಕ್ಷೇತ್ರದಲ್ಲಿ ಅರ್ಧವರ್ತುಲವನ್ನು ವ್ಯಾಪಿಸಿದೆ. ಅದರ ಮಧ್ಯಬಿಂದುವಿನಲ್ಲಿ ಪರಮಾತ್ಮಚಕ್ರದ ಅಧಿಷ್ಠಾನವಿದೆ. ಮತ್ತು ಆ ಚಕ್ರದ ಚೈತನ್ಯದಿಂದಲೇ ಆ ಅರ್ಧ ವರ್ತುಲವು ತುಂಬಿತುಳುಕುತ್ತಿರುವುದು. ಅದಕ್ಕೆಯೇ ಶ್ರೀ ಅರವಿಂದರು ತಮ್ಮ "The Life Divine" ದಲ್ಲಿ ಅರ್ಧವರ್ತುಲ ಗೋಲಾರ್ಧ (Global Hemisphere) ಎಂದು ಹೆಸರಿಸಿರುವರು. ಅದಕ್ಕಾಗಿ ಅವರು ಆ ಗೋಲಾರ್ಧದ ಮಧ್ಯಬಿಂದುವಿನಲ್ಲಿ ಸ್ಥಿತಪ್ರಜ್ಞರಾಗಿ ನಿಂತಿರುವರು. ಅಲ್ಲಿಂದ ಹೊಸಶಕ್ತಿಯನ್ನು ನಿರ್ಮಿಸುತ್ತ ಈ ಹೊಸದಾದ ಮನಶ್ಚೇತನದ ಗೋಲಾರ್ಧವನ್ನು ನಿರ್ಮಿಸುವುದರಲ್ಲಿ ತೊಡಗಿರುವರು. ಹಾಗೆ ಮಾಡುವಾಗ ಮೇಲಿನ ಗೋಲಾರ್ಧದ ಅರಿವನ್ನೂ ಮಾಡಿಕೊಳ್ಳುತ್ತಲಿರುವರು. ಆ ಮೇಲಿನ ಗೋಲಾರ್ಧವೆಂಬುದು ನಮಗೆಲ್ಲರಿಗೂ ಇಂದು ಅಚಿಂತ್ಯ, ಅಗಮ್ಯ, ಅಜ್ಞೇಯ. ಅದರ ಹೊಸ್ತಿಲಲ್ಲಿ ಭಗವಾನ್ ಅರವಿಂದರು ನಿಂತಿರುವುದಷ್ಟೇ ನಮಗಿಂದು ವೇದ್ಯ.

ಶ್ರೀ ಮಾತೆಯವರ ಮುಂದಿನ ಪ್ರಾರ್ಥನೆಯಲ್ಲಿ ಮೇಲೆ ಮಾಡಲು ಪ್ರಯತ್ನಿಸಿದ ವಿವೇಚನೆಯ ಧ್ವನಿಯನ್ನು ಕಂಡುಕೊಳ್ಳಬಹುದು:

## ಸಮರ್ಪಣ

*" And Thou, O Lord, who art all this made one and yet much more, O Sovereign Master, extreme limit of our thought, who standest for us at the threshold of the Unknown, make rise from that Unthinkable some new splendour, some possibility of a loftier and more integral realisation, that Thy work may be accomplished and the Universe take one step further towards the sublime identity, the supreme manifestation.*

*And now my pen becomes mute and I adore Thee in silence. "*

**" Prayers and Meditations " : The Mother, pages 196–197.**

— ಅಯ್ಯಾ ಹೇ ಪ್ರಭುವೆ, ಇದೆಲ್ಲವೂ ನೀನಾಗಿ ಇವೆಲ್ಲವುಗಳಿಗಿಂತ ಮಿಗಿಲಾಗಿರುವವನೇ, ಹೇ ಪರಮ ಪ್ರಭುವೇ, ಅಜ್ಞಾತದ ಹೊಸತಿಲಿನಲ್ಲಿ ನಮಗಾಗಿ ನೆಲಸಿದ್ದು ನಮ್ಮ ಚಿಂತನೆಯ ಸೀಮಾಂತನಾಗಿರುವವನೇ, ಆ ಅಚಿಂತ್ಯದಿಂದ ನವಕಾಂತಿಯನ್ನು ಹೊರಹೊಮ್ಮಿಸು; ಉನ್ನತತರವಾದ ಹಾಗು ಸಮಗ್ರತರವಾದ ಸಾಕ್ಷಾತ್ಕಾರದ ಶಕ್ಯತೆಯು ಉದಯಿಸುವಂತೆ ಮಾಡು. ಎಂದರೆಯೆ ನಿನ್ನ ಕಾರ್ಯ ಕೈಗೂಡೀತು; ಹಾಗು ಆ ಮಹೋನ್ನತ ತನ್ಮಯತೆಯತ್ತ, ಆ ಪರಮ ಆವಿಷ್ಕರಣದತ್ತ ವಿಶ್ವವು ಒಂದು ಹೆಜ್ಜೆ ಮುಂದಡಿಯಿಟ್ಟೀತು.

ನನ್ನ ಲೆಕ್ಕಣಿಕೆಯೀಗ ನಿಂತುಬಿಟ್ಟಿತು; ನಾನೀಗ ಮೌನವಾಗಿಯೇ ನಿನ್ನನ್ನು ಪೂಜಿಸುವೆನು.*

* [ ಶ್ರೀ ದ. ರಾ. ಬೇಂದ್ರೆಯವರೊಡನೆ ನಡಿಸಿದ ಒಂದು ಚರ್ಚೆಯು ಈ ಲೇಖನಕ್ಕೆ ಸಾಮಗ್ರಿಯನ್ನೊದಗಿಸಿದೆ.— ಲೇಖಕ. ]

**— ಸದಾನಂದ ನಾಯಕ**

---

ತನ್ನ ಆಧ್ಯಾತ್ಮಿಕ ಉನ್ನತಿ-ಅನುಭವಗಳ ಕಡೆಗೇ ತನ್ನೆಲ್ಲ ಲಕ್ಷ್ಯವನ್ನು ಕೇಂದ್ರೀಕರಿಸುವುದು ಸಾಧಕನ ಆದ್ಯಕರ್ತವ್ಯವಾಗಿದೆ; ಹೆರವರಿಗೆ ನೆರವಾಗಲು ಹಾತೊರೆಯುವುದರಿಂದ ಒಳಗಿನ ಸಿದ್ಧತೆಗೆ ವಿಮುಖನಾಗಬೇಕಾಗುತ್ತದೆ. ಆತ್ಮಾನುಭವವನ್ನು ಬೆಳೆಯಿಸಿಕೊಳ್ಳುವುದರಿಂದ ಹೆರರಿಗೆ ಹೆಚ್ಚಿನ ಸಾಹಾಯ್ಯವನ್ನು ಮಾಡಿದಂತೆಯೆ ಇದೆ; ಏಕೆಂದರೆ ಆಗ ತನ್ನೊಳಗಿನಿಂದ ಅಂತಃಶಕ್ತಿಯೊಂದು ಸ್ವಾಭಾವಿಕವಾಗಿ ಪ್ರವಹಿಸಿ, ಸುತ್ತಲಿನವರಿಗೆ ಅಗತ್ಯವಾದ ನೆರವನ್ನೀಯುವುದು.

— ಶ್ರೀ ಅರವಿಂದರು

# ಶ್ರೀ ಅರವಿಂದ-ಸಿರಿಗಂಧ

೧

ಓಂ ಶ್ರೀಗುರು ಅರವಿಂದಾ
ನಮಿಸುವೆನೊಲವಿಂದಾ
ಕಾಪಾಡೈ ದಯೆಯಿಂದಾ -ಗುರುವೇ
ನಾ ತಿಳಿಯದ ಕಂದಾ

೨

ಸೀಡುತ ಕೊಳ್ಳುತಲೀಽಽ
ನೆರೆಹೊರೆಯಲಿ ನೆರವನ್ನಾ
ಸಿರುತಧಿ ಹರುಷದಲೀ- -ಸೀಕವು
ಕಾಯಲಿ ಬರವನ್ನಾ

೩

ಜೀಕವ ತೂಕದಲೀಽಽ
ದಿನದಿನ ಜೀಕಲಿ ಜೀವನವು
ನೆನವಿನ ಪಾಕದಲೀ- -ರಸ-
ವೇರುತ ಪಾವನವು

೪

ತನುವೇ ಮಣ್ಣಾಗೀಽಽ
ಕರಗಲಿ ಜೀವನದಲಿ ಮುಳುಗಿ
ಹೃದಯವೆ ಕಣ್ಣಾಗೀ—ಕಾಣಲಿ
ಚಿಜ್ಜ್ಯೋತಿಯು ಬೆಳಗಿ

೫

ಮೂಕ ಮಾತಿಸಿಂದಾಽಽ
ಅರಳಿತು ಹೃದಯದ **ಅರವಿಂದಾ**
ಅರಳಿದ ಮನದಿಂದಾ—ಗಮಗಮ
ಸೂಸಲಿ **ಸಿರಿಗಂಧಾ**

— **ದೇಸಾಯಿ ದತ್ತಮೂರ್ತಿ**

# ಸಚ್ಚಿದಾನಂದ

ಈ ವಿಶ್ವವನ್ನು ನೋಡಿದಷ್ಟು ಸಲ ಒಂದು ಪ್ರಶ್ನೆ ಎದುರುನಿಲ್ಲುತ್ತದೆ: ಇದು ಏನು? ಇನ್ನೊಂದು ಪ್ರಶ್ನೆ ಬಂದು ಕೆಣಕುತ್ತದೆ: ಇದು ಹೇಗೆ ನಿರ್ಮಿತವಾಯಿತು? ಮತ್ತೊಂದು ಬಂದು ನಮ್ಮ ಎದೆಮುಗುಳನ್ನು ಚಿವುಟಲು ಹವಣಿಸುತ್ತದೆ: ಇದರ ಆಗುಹೋಗುಗಳೇನು? ಚಿರಂತನ ಪ್ರಶ್ನೆಗಳಿವು. ಆದರೆ ನಶ್ವರ ಮಾನವನು ಯುಗಯುಗಗಳಿಂದ ಇವುಗಳನ್ನು ಕೇಳುತ್ತ ಬಂದಿದ್ದಾನೆ. 'ಸಪ್ತರ್ಷಿಮಂಡಲ'ದಂತೆ ಈ ಪ್ರಶ್ನೆಗಳು ವ್ಯೋಮದಲ್ಲಿ ಭ್ರಮಿಸುತ್ತವೆ; ಮಾನವನ ಮನಸ್ಸನ್ನು ಆಕರ್ಷಿಸುತ್ತವೆ. ತನ್ನಲ್ಲಿದ್ದ ಚಿರಂತನಾಂಶವನ್ನು ಕಂಡುಕೊಂಡಾಗ ಈ ಪ್ರಶ್ನೆಗಳ ಉತ್ತರವೂ ಸೂರ್ಯಚಂದ್ರರಂತೆ ಉಜ್ಜ್ವಲವೆಂಬುದನ್ನು ಮಾನವನು ಅನುಭವಿಸುತ್ತಾನೆ.

ಒಮ್ಮೊಮ್ಮೆ ಮಾನವನಿಗೆನಿಸುತ್ತದೆ: ಅಪರಿಚಿತ ವಿಶ್ವದಲ್ಲಿ ಸ್ತಂಭಿತನಾದ ವ್ಯಕ್ತಿ ತಾನೆಂದು. ವಿಜ್ಞಾನಿಯು ತೋರಿಸಿದಂತೆ, ವಿಶ್ವವು ಜಡತೆಯ ಆಗರ. ಸೃಷ್ಟಿಯ ವಿವಿಧತೆಯೆಲ್ಲ ಪಂಚಮಹಾಭೂತಗಳಲ್ಲಿ ಲೀನವಾಗುತ್ತದೆ. ಈ ಐದರ ಕೂಟವು ಸಹ ಕೋಟ್ಯನುಕೋಟಿ ಅಣುಗಳ ಸಮುದಾಯ, ತನ್ಮಾತ್ರೆಗಳ ಸಂಚಯ. ಈ ಅಣುಗಳ ಸಂಚಲನ ಅನಿಶ್ಚಿತ, ಆದರೆ ಅಬಾಧಿತ. ಹೀಗಾಗಿ ವಿಶ್ವವೆಂದರೆ ಪ್ರಕೃತಿ, ಅಣುಸಮುದ್ರ. ಇದಕ್ಕೂ ಮಾನವನಿಗೂ ಸಂಬಂಧವೇನಿರಬಲ್ಲುದು? ಜಡತೆಯ ವ್ಯೂಹದಲ್ಲಿ ಮಾನವನು ಸಿಕ್ಕು ಜರ್ಜರನಾಗಬಾರದು; ಈ ಜಡತೆಯನ್ನು ಜಯಿಸಬೇಕು; ಪ್ರಕೃತಿಯ ದೊರೆಯಾಗಬೇಕು. ಹೀಗೆ ವಿಚಾರಪರನಾದ ಮಾನವ ಇಂದು ಭೌತಿಕಶಕ್ತಿಗಳ ಗತಿಯನ್ನು ಸೂಕ್ಷ್ಮವಾಗಿ ಗ್ರಹಿಸಿ ತನ್ನ ಉಪಯೋಗಕ್ಕಾಗಿ ವ್ಯಯಿಸಿಕೊಂಡು ಪೌರುಷವಾದವನ್ನು ಮೆರೆಯಿಸುತ್ತಿದ್ದಾನೆ.

ಆದರೆ ವಿಶ್ವವು ಬರಿ ಜಡ ಪ್ರಕೃತಿಯೆಂದರೆ ಒಪ್ಪಬಹುದೇ! ನೋಗೆ ಹರಹಿ ಕೇಕೆ ಹಾಕುವ ನವಿಲು, ಆಯಾಲದ ಅಹಮಹಮಿಕೆಯಲ್ಲಿರುವ ಸಿಂಹ, ಕರಗಸದಂತಹ ಬಾಲವನ್ನು ಪಡೆದಿದ್ದ ಮೀನು, ಮಂಡಲಾಕಾರವಾಗಿ ಮುಗಿಲಲ್ಲಿ ಸುಳಿಯುವ ಗರುಡ, ಸ್ವತಃ ತಾನು ವಿಶ್ವಚಕ್ರದ ಚಕ್ರವರ್ತಿಯೆಂದು ತಿಳಿದಿದ್ದ ಮಾನವ,—ಈ ವಿವಿಧ ಪ್ರಾಣಿಗಳಿಗೆ ಜನ್ಮ ಕೊಡಬೇಕಾದಾಗ ಆ ಜಡತೆ ಎಷ್ಟು ಸೂಕ್ಷ್ಮವಾಗಿರಬೇಕು? ಈ ಪ್ರಕೃತಿ ಬರಿ **ಸತ್** ಇಲ್ಲವೆ ಇರುವಿಕೆಯಲ್ಲ. ಅದರಲ್ಲಿ **ಚಿತ್** ಇಲ್ಲವೆ ಚಿನ್ಮಯಾಂಶವೂ ಇದೆ. ಮೂಲಶಕ್ತಿ ಬರಿ ಭೌತಿಕಶಕ್ತಿಯಲ್ಲ, ಅದು ಪ್ರಜ್ಞಾಯುತವಾಗಿದೆ.

ಇದನ್ನು ಒಪ್ಪಿದ ವಿಚಾರಶೀಲನು ಮತ್ತೆ ವಿಚಾರಪದ್ಧತಿಯಲ್ಲಿ ತನ್ನ ದುಃಖದಿಂದ ಜನಿಸಿದ ವಿಷವನ್ನು ಬೆರಸುತ್ತಾನೆ....' ವಿಶ್ವದಲ್ಲಿ ಹೃದಯಶೂನ್ಯ, ನಿಷ್ಕರುಣ ನಿಯತಿ-ನಿಯಮ

ವೊಂದನ್ನುಳಿದು ಬೇರೆ ದೈವತವಿಲ್ಲ. ಬೇರೆ ಇದ್ದುದಾದರೆ—ಆ ಮೂಲಶಕ್ತಿಗೆ ಪ್ರಜ್ಞೆಯಿದ್ದರೆ—ಅದು ಪೌರುಷಹೀನ ಪ್ರಜ್ಞೆ. ಒಂದು ಷಂಢ ದೈವತ ಈ ವಿಶ್ವವನ್ನಾಳುತ್ತಿದೆ. ನ್ಯಾಯಬುದ್ಧಿ ಹಿಂದಕ್ಕೆ ಇದ್ದಿರಬಹುದಾದರೆ ಅದನ್ನೂ ಈಗ ಆ ದೈವತವು ಕಳೆದುಕೊಂಡಿದೆ. ಅಂತೇ ಜಗತ್ತಿನಲ್ಲಿ ಇಷ್ಟೊಂದು ಅನ್ಯಾಯಗಳು ಸಂಭವಿಸುತ್ತವೆ. ಈ ಅನ್ಯಾಯಗಳನ್ನು ನೋಡುವ ಕಣ್ಣನ್ನು ಸಹ ದೈವತವು ಕಳೆದುಕೊಂಡಿದೆ. ಹೀಗಾಗಿ ಮೊದಲು ಮೆದುಳನ್ನು ಕಳೆದುಕೊಂಡ ದೈವತವು ಈಗ ದೃಷ್ಟಿಹೀನವಾಗಿದೆ. ಹೀಗೆ ಕ್ರಮಶಃ ಸಾವು ಅದರ ಅಂಗಾಂಗಗಳನ್ನು ವ್ಯಾಪಿಸತೊಡಗಿದೆ.'— ಹಾರ್ಡಿ ಕವಿಯಂತೆ ರೋಷ-ರೋದನಗಳಿಂದ ಪ್ರೇರಿತನಾಗಿ ಮಾನವನು ಹೀಗೆ ಆ ಶಕ್ತಿಯನ್ನು ಶಪಿಸುತ್ತಾನೆ.

ಆದರೆ **ಇದೇನು** ಷಂಢದೈವತವಲ್ಲವೆಂಬುದನ್ನು ವಿಶ್ವದ **ಅದ್ಭುತರವ್ಯವಸ್ಥೆ**ಯಿಂದ ಸಹ ನಾವು ತಿಳಿದುಕೊಳ್ಳಬಹುದು. ವಿಶ್ವದ ಅದ್ಭುತ ಚಮತ್ಕಾರಗಳ ಹಿಂದೆ ಎಂತಹ ಶಕ್ತಿಸಂಚಯ ವಿದ್ದಿರಬೇಕು! ಪ್ರಳಯದಂತೆ ಅಸಂಬದ್ಧವಾಗಿ ಕಾಣುವ ಈ ವಿಶ್ವದ ಇತಿಹಾಸ ಹೇಗೆ ಕ್ರಮವಾಗಿ ಸೂಕ್ಷ್ಮವಿಕಾಸವನ್ನು ಪಡೆಯುತ್ತಿದೆ! ಅದರ ಹಿಂದೆ ಯಾವ ಶಕ್ತಿಯಿದ್ದಿರಬೇಕು! ರಾಷ್ಟ್ರರಾಷ್ಟ್ರಗಳ ಹಣೆಬರಹವನ್ನು ಈ ಶಕ್ತಿಯೇ ಬರೆಯಿಸುತ್ತಿದೆ. ಮಹಾದುರ್ಗೆಯಾಗಿ ಸಂಹರಿಸುವಂತೆ ಮಹಾಲಕ್ಷ್ಮಿಯಾಗಿ ಸಲಹುತ್ತಿದೆ. ಅತಿವೃಷ್ಟಿ-ಅನಾವೃಷ್ಟಿಯಾಗಿ ಕೆಣಕುವಂತೆ, ಹವಣಿನ ಮಳೆಯಾಗಿ ಕಾಯುತ್ತಿದೆ. 'ಚಿತ್' ಎಂದರೆ ಬರಿ ಪ್ರಜ್ಞೆಯಲ್ಲ. ಅದರಲ್ಲಿ ಶಕ್ತಿಯ ಒಂದು ಪರಿಯೂ ಇದೆ. ಪ್ರಜ್ಞೆಯೇ ಶಕ್ತಿ. ಶಕ್ತಿಯೇ ಪ್ರಜ್ಞೆ. ಈ ಮೂಲದೈವತಕ್ಕೆ ಅಸ್ತಿತ್ವ-ಶಕ್ತಿ-ಪ್ರಜ್ಞೆಗಳೆಂಬ ಮೂರು ಮುಖಗಳಿವೆ.

ಮಾನವನು ಇಲ್ಲಿಯೂ ತನ್ನ ಇತ್ತಂಡವಾದವನ್ನು ಹರಿಬಿಡುತ್ತಾನೆ. ಇಂಥ ಅಪಾರ ಶಕ್ತಿ-ಪ್ರಜ್ಞೆಗಳನ್ನೊಳಗೊಂಡ ಅನಂತ ಚಿರಂತನ ದೈವತವನ್ನು ನೆನೆದು ಅವನಿಗೆ ಭಯವಾಗುತ್ತದೆ. ಅವನೆದೆ ಕಂಪಿಸುತ್ತದೆ. ಮಹತ್ತಿನೆದುರಿಗೆ ಅಣುವಾಗಿ ನಿಂತು ಅವನು ಸಾಷ್ಟಾಂಗ ಹಾಕುತ್ತಾನೆ.

ಆದರೆ ವಿಶ್ವದ ಹೃದಯದಿಂದ ಸಂತತವಾಗಿ ಆನಂದವೂ ಚಿಮ್ಮುತ್ತಿರುತ್ತದೆ. ಬಣ್ಣಬಣ್ಣವಾಗಿ ಸಿಂಗರಿಸಿಕೊಂಡು ತರತರದ ಬೆಳಕಾಗಿ ಆಟವಾಡುತ್ತದೆ. ಅನಿಮಿತ್ತ, ಅನಿರ್ಬಂಧ ಆನಂದವು ಅವ್ಯಾಹತವಾಗಿ ಮೇರೆವರಿಯುತ್ತಿರುತ್ತದೆ. ಇದರ ರಹಸ್ಯವೇನು? ಆನಂದವೂ ಈ ದೈವತದ ಲಕ್ಷಣಗಳಲ್ಲಿ ಒಂದೆಂದೋ? ಈ ಮೂಲದೈವತ—ಈ Reality ಚತುರ್ಮುಖ ಬ್ರಹ್ಮ. ಅಸ್ತಿತ್ವ, ಶಕ್ತಿ, ಪ್ರಜ್ಞೆ, ಆನಂದಗಳೇ ಆ ಚತುರ್ಮುಖಗಳು. ಆ ದೈವತವೇ ಸಚ್ಚಿದಾನಂದ. ಎಲ್ಲವೂ ಸಚ್ಚಿದಾನಂದ. ಅದನ್ನುಳಿದು ಬೇರೆ ಇಲ್ಲ. ಜೀವನದ ಹಾಗೂ ಕಲೆಯ ಉಗಮ ಈ ಸಚ್ಚಿದಾನಂದದಲ್ಲಿ.

ಸಚ್ಚಿದಾನಂದದ ಆವಿರ್ಭಾವವೇ ಈ ವಿಶ್ವ. ಚರಾಚರವೆಲ್ಲ ಅದರ ಬುರುಗಿದ್ದಂತೆ. ವಿಜ್ಞಾನಿಯು ಸಚ್ಚಿದಾನಂದವನ್ನು ಒಂದೇ ಒಂದು ಕಿಂಡಿಯೊಳಗಿಂದ ನೋಡಿ ಅದು ಬರಿ 'ಸತ್' ಎಂದು ನಿರ್ಧರಿಸಿದ್ದಾನೆ. ಆದರೆ ಪ್ರಜ್ಞೆಯ ಇನ್ನೊಂದು ಮುಖ ಈಗ ಅವನಿಗೆ ಕಾಣಿಸತೊಡಗಿದೆ. ಸಚ್ಚಿದಾನಂದದ ಆನಂದಮುಖವನ್ನು ಕಲೋಪಾಸಕನು ಅದೆಂದೋ ಕಂಡುಕೊಂಡಿದ್ದಾನೆ. ಅದರ ಚತುರ್ಮುಖಗಳನ್ನು ಋಷಿಗಳು ಮೊದಲಿನಿಂದ ಗುರುತಿಸಿದ್ದಾರೆ.

## ಸಮರ್ಪಣ

**ಸಚ್ಚಿದಾನಂದ!** ಈ ಒಂದು ಶಬ್ದದಲ್ಲಿ ಒಂದು ಯುಗದ ಇತಿಹಾಸವರಳಿದೆ; ಮಾನವೀಯ ವಿಚಾರಪದ್ಧತಿಯೊಂದರ ಸಿದ್ಧಿಯಿದೆ.

ಒಮ್ಮೆ ತಿರುಗಾಡಲು ಹೋದಾಗ ಹಾದಿಯಲ್ಲಿ ಹಕ್ಕಿಯೊಂದರ ಪುಚ್ಛ ಬಿದ್ದಿತ್ತು. ಅದನ್ನೆತ್ತಿ ನೋಡಿದೆ. ಈ ಪುಚ್ಛ ಇದೆ; ಇದೂ ಒಂದು ವಸ್ತು: '**ಇದು ಇದೆ**' ಎಂದುಕೊಂಡೆ. ಅದರ ಮೇಲೆ ಒಂದು ಓರಣ ಹಿಡಿದು ಎಳೆಯ ಚಂದ್ರನಂತಹ ಗೆರೆಗಳು ಮೂಡಿದ್ದವು. ಗೆರೆಯ ಜೊತೆಗೆ ಗೆರೆಯನ್ನು ಬರೆದ ಕ್ರಮದಲ್ಲಿ ಒಂದು ಅದ್ಭುತ ಅಚ್ಚುಕಟ್ಟುತನವಿತ್ತು. ಎಳೆಯ ಚಂದ್ರನ ಮೇಲಿರುವ ಚಿಕ್ಕೆಯಂತೆ ಒಂದೊಂದು ಡೊಂಕು ಗೆರೆಯ ಮೇಲೆ ಒಂದೊಂದು ಚಿಕ್ಕೆಯಿತ್ತು. ಈ ಪುಚ್ಛವನ್ನು ಸೃಷ್ಟಿಸಿದ ಶಕ್ತಿಗೆ ಪ್ರಜ್ಞೆಯಿದೆ, ಪ್ರಜ್ಞೆಯನ್ನು ಕುಸುರಾಗಿಸಬಲ್ಲ ಶಕ್ತಿಯಿದೆಯೆಂದುಕೊಂಡೆ. ಆದರೆ ಹೀಗೆ ಪ್ರಜ್ಞೆಯನ್ನು ಕುದುರಿಸುವದರಿಂದ ಏನು ಬಂತು? ಅದರ ಸಾರ್ಥಕತೆ ಏನು?

ಆಗ ಉತ್ತರ ಬಂದಿತು: ಅದರಲ್ಲಿ ಒಂದು ನಿಃಸೀಮ ಆನಂದವಿದೆ! ಇಂಥ ಅನಂತ ಗರಿಗಳನ್ನು ಆಕಾಶದಲ್ಲಿ ತೇಲಬಿಡುವ ಲೀಲೆಯು ಅಕ್ಷಯ ಆನಂದದ ಆಗರಕ್ಕೆ ಮಾತ್ರ ಸಾಧ್ಯ. ಆ ಸಚ್ಚಿದಾನಂದಕ್ಕೆ ನಮೋ ಎಂದೆ.*

* [ ಕಲೆಯನ್ನು ಕುರಿತ ಲೇಖಮಾಲೆಯಲ್ಲಿ ಇದು ಮೊದಲನೆಯ ಲೇಖನವಾಗಿದೆ. ]

—**ವಿ. ಕೃ. ಗೋಕಾಕ**

ಅದೊಂದು ಶ್ರಮದ-ಭಾರದ ಕೆಲಸವೆನ್ನುವಂತೆ ಕಾವ್ಯವನ್ನು ನಿರ್ಮಿಸುವ ರೀತಿಯೊಂದಿದೆ; ಮಿದುಳು ಬಿರಿಯುತ್ತದೆಯೊ ಎಂದೆನಿಸುವುದು—ಬಳಲಿಕೆಯೆನಿಸುವಷ್ಟರ ಮಟ್ಟಿಗೆ ಮನಸ್ಸಿಗೆ ದುಡಿತ ಬೀಳುವುದು—ಇಷ್ಟಾದರೂ ಸ್ಫೂರ್ತಿಝರಿ ಹರಿಗಡಿದಂತಾಗಿ ನಿಷ್ಪನ್ನವೇನೂ ಇಲ್ಲವೆನಿಸುವುದು, ಅಥವಾ ಅದೊಂದು ಬಗೆಯ ಬೌದ್ಧಿಕ ತಪಸ್ಯೆಗೆ ಪ್ರತಿಫಲವೆನ್ನುವಂತೆ ಏನೋ ತುಸು ಕೈಗೆ ಬರುವುದು ಇನ್ನೊಂದು ರೀತಿಯಿದೆ: ಕವಿಯು ಸುಮ್ಮನಿದ್ದುಬಿಡಬೇಕಾಗುವುದು; ಹಿಂದೆ ನಿಂತುಕೊಂಡಿರುವ ಶಕ್ತಿಗೆ ತನ್ನ ಅಂತಃಕರಣವನ್ನು ತೆರೆದಿಟ್ಟು, ಸ್ಫೂರ್ತಿಗಾಗಿ ಆತ ಕಾಯುವನು. ಆ ಶಕ್ತಿ ವರ್ಷಿಸುವುದು,—ಅದರೊಡನೆ ಸ್ಫೂರ್ತಿ-ದೀಪ್ತಿ-ಆನಂದಗಳು ಬರುವವು; ಇದೆಲ್ಲವೂ ಆ ಒಳಗಿನ ಶಕ್ತಿಯಿಂದ ನಡೆಯುವುದು. ಬಂದ ನೆರೆ ಇಳಿದುಹೋದರೂ ಕವಿಯು ಸ್ವಸ್ಥಮನಸ್ಕನಾಗಿ ಇನ್ನೊಂದು ನೆರೆಯ ದಾರಿ ಕಾಯುವನು; ಆ ನೆರೆ ತನ್ನ ಸಮಯಕ್ಕೆ ಬಂದೇಬರುವುದು. .

**ಶ್ರೀ ಅರವಿಂದರು**

# ಮೌನ

ನೀಲಾಂಬರದಲ್ಲಿ ಹೆಣೆದ ಕಸೂತಿಯೋ ಎಂಬಂತೆ ಅಸಂಖ್ಯ ಚಿಕ್ಕೆಗಳು ಮೌನದಿಂದಲೇ ಮಿನುಮಿನುಗುತ್ತಿವೆ. ಒಂದು ಪಕ್ಷ ನವೆಯುತ್ತ ಒಂದು ಪಕ್ಷ ಬೆಳೆಯುತ್ತ ಏರಿಳಿತಗಳಿಗೆ ಒಳಗಾಗಿದ್ದರೂ, ಪರಪ್ರಕಾಶಿತನೆಂದಿದ್ದರೂ, ಶೀತಲ ಸೋಮ ಶಾಂತವಾಗಿ ಮೌನದಿಂದಲೇ ಬೆಳಬೆಳಗುತ್ತಾನೆ. ವಿಶ್ವದ ಕಣ್ಣಾದ ರವಿ, ಪ್ರಪಂಚವನ್ನೇ ಬೆಳಗುತ್ತಿದ್ದರೂ, ಮಹಾಮೌನದಿಂದಲೇ ತನ್ನ ಪಥದಲ್ಲಿ ತಾನು ನಡೆದಿದ್ದಾನೆ.

ಮೌನವೆಂದರೆ ಸ್ತಬ್ಧತೆಯಲ್ಲ; ತನ್ನ ನಿತ್ಯನೈಮಿತ್ತಿಕ ಕರ್ತವ್ಯ-ಕರ್ಮಗಳೆಲ್ಲವನ್ನೂ ಸ್ವಲ್ಪವೂ ಲೋಪ ಬರದಂತೆ ನೆರವೇರಿಸಲು ಪ್ರಯತ್ನಿಸುತ್ತಲಿರುವಾಗಲೂ ನಿಸರ್ಗವು ಮೌನವಾಗಿಯೇ ಇರುವುದು. ಆಕಾಶದಲ್ಲಿಯ ಸೂರ್ಯ–ಚಂದ್ರ–ತಾರೆಗಳು ನಮಗೆ ಮೌನದ ಸಂದೇಶವನ್ನು ಈ ರೀತಿಯಾಗಿ ಬೀರುತ್ತವೆ.

ಸೃಷ್ಟಿಯಲ್ಲಿ ಗಿಡಬಳ್ಳಿಗಳು ಚಿಗಿತು, ಹೂತು, ಕಾತು, ಫಲ ನೀಡುತ್ತವೆ: ಅದೆಲ್ಲವೂ ಮೌನದಿಂದಲೇ ! ಮೊಗ್ಗು ಅರಳುವುದೂ ಮೌನದಿಂದ, ಹೂ ಕಂಪು ಬೀರುವುದೂ ಮೌನದಿಂದ; ಕಾಯಿ ಹಣ್ಣಾಗುವುದೂ ಮೌನದಿಂದಲೇ !

ಮನೆಯಲ್ಲಿ ದೀಪ ಬೆಳಗುವುದೂ ಮೌನದಿಂದ. ನಾವು ಬೆಳೆಯುವುದೂ ಮೌನದಿಂದ. ಅಂತಃಕರಣ ತುಂಬಿ ಬಂದಾಗ, ಭಾವೋತ್ಕಟತೆ ಉಕ್ಕೇರಿದಾಗ, ಪ್ರೀತಿ-ಭಕ್ತಿಗಳು ಮೈದುಂಬಿದಾಗ ಮಾತು ಸೋತು ಹೋಗಿ ಮೌನಕ್ಕೇ ಮೊರೆಹೊಗಬೇಕಾಗುವುದು.

ತನ್ನ ತಾನರಿಯುವುದಕ್ಕೆ ಈ ಮೌನವು ಒಂದು ಮಹಾಸಾಧನೆಯಾಗಿರುವುದೆಂದು ಹೊಳೆಯುವುದು. ಹೊರಗಿನ ಜಗತ್ತಿನೊಡನೆ ತಾನು ನಡೆದುಕೊಳ್ಳುತ್ತಿರುವ ರೀತಿ–ನೀತಿಗಳನ್ನೂ ತನ್ನೊಳಗೇ ನಡೆಯುತ್ತಿರುವ ಆಲೋಚನೆಗಳ ಪರಂಪರೆಗಳನ್ನೂ ಅವಲೋಕಿಸುತ್ತ, ಜೊಳ್ಳನ್ನು ತೂರಿ, ಗಟ್ಟಿಯನ್ನು ಉಳಿಸಿಕೊಳ್ಳುವುದಕ್ಕೆ ಮೌನವೇ ಮಹಾಸಾಧನೆಯಾಗಿದೆ.

ಮಾತು-ಮಾತುಗಳ ಮಥನದಿಂದ "ತತ್ತ್ವ"ದ ತಿರುಳು ತೇಲಿ ಬರುವುದೆಂಬ ಸಂಗತಿ ನಿಜವಾಗಿದ್ದರೂ, ತೇಲಿಬಂದಂತೆ ತೇಲಿಹೋಗುವ ಭಯವೂ ಅದಕ್ಕುಂಟು. ಆದರೆ ಮೌನಮಥನದಿಂದ ಸ್ಫುಟಗೊಂಡ "ತತ್ತ್ವ"ದ ತಿರುಳು ಜೀವನಕ್ರಮದಲ್ಲಿ ಪಥಿಕ ಜೀವನಿಗೆ ಕೈದೀಪದಂತೆ, ಕೈಗೋಲಿನಂತೆ ನೆರವು ನೀಡುತ್ತದೆ. ಬಾಳಿನ ಒಗಟುಗಳೆಲ್ಲ ಬಿಡಿಸಿ ಬಿಚ್ಚಿಇಟ್ಟಂತಾಗಿ ಪಥಕ್ರಮವು ಸುಸೂತ್ರವಾಗಿ ಸಾಗುತ್ತದೆ.

## ಸಮರ್ಪಣ

ಜೀವ-ಜಡಗಳ, ಹೃದಯ-ಬುದ್ಧಿಗಳ, ಒಳಗು-ಹೊರಗುಗಳ ಕದನ ಕೋಲಾಹಲದಲ್ಲಿ ಮೌನ-ಮಥನದಿಂದ "ದೇವ"ನೆಂಬ ನವನೀತವು ತೇಲಿಬರುವುದೆಂಬುದು ಅರಿತವರ ಮಾತಾಗಿರುತ್ತದೆ. ಯಾವುದನ್ನು ತಿಳಿದರೆ ಎಲ್ಲವೂ ತಿಳಿಯುವುದೋ ಅಂತಹ ತಿಳಿಗೊಳದಲ್ಲಿ ಪ್ರಶಾಂತವಾಗಿ ಜೀವವು ಈಸಾಡಬೇಕಾದರೆ, ಈ ಮೌನವೊಂದು ಈಸುಗುಂಬಳಕಾಯಿ. ಮೌನದ ಮಹಾಮಾತ್ರೆಯು ಆತ್ಮದ ಆರೋಗ್ಯಕ್ಕೆ ಹಿತಕಾರಿ, ಜೀವನಸಾರ್ಥಕ್ಯಕ್ಕೆ ದಾರಿ! ಮಾನವನು ದಾನವತೆಯಿಂದ ದಾಟಿ, ದೇವತ್ವದ ದಾರಿಯಲ್ಲಿ ಮುನ್ನಡೆದು ಗುರಿಯ ಸಿರಿಯನ್ನು ಸದಾಕಾಲ ಕಣ್ಣಮುಂದಿರಿಸಿ ಸಿದ್ಧಿಯ ಕಡೆಗೆ ನಡೆಯಲು ಈ ಮೌನವೇ ರಾಜಮಾರ್ಗವಾಗಿದೆ.

ಒಳಗೊಳಗೇ ನಡೆಯುತ್ತಿರುವ "ದ್ವಂದ್ವ" (ಜೀವ-ಜಡ, ಒಳಗು-ಹೊರಗು ಇತ್ಯಾದಿ) ಗಳ ತಾಕಲಾಟವು ಒಂದು ಸ್ತಿಮಿತಕ್ಕೆ ಬಂದು ತನ್ಮಯತೆಯ ಶಾಂತಿಸುಖಾನುಭವವನ್ನು ಆಸ್ವಾದಿಸಲು ಈ ಮೌನ ನೆರವಾಗುವುದು. ಹೊರಗಿನ ಅಶಾಂತಿಸಾಗರದ ಕದನಕೋಲಾಹಲದಲ್ಲಿಯೂ ಪ್ರಶಾಂತ ಜೀವನವನ್ನು ನಡೆಯಿಸುತ್ತ, ಜೀವನದ ಅಂತಿಮ ಗುರಿಯಾದ ಚಿರಶಾಂತಿಯನ್ನು ಚಿರಸ್ಥಾಯಿಯಾಗಿ ಅನುಭವಿಸಲು ಈ ಮೌನವೊಂದು ಮಹಾಸಾಧನ.

ಈ ಪಥಕ್ರಮವು ಜೀವನಿಗೊಮ್ಮೆ ಪರಿಚಿತವಾಯಿತೆಂದರೆ ಮಹಾಮೌನದಿಂದಲೇ ಅವನು ಮುನ್ನಡೆಯುತ್ತ, ದ್ವಂದ್ವಾತೀತನಾಗಿ, ಜೀವನದ ಏರಿಳಿವುಗಳ ಪೆರ್ದೆರೆಗಳಲ್ಲಿಯೂ ಪ್ರಶಾಂತವಾಗಿ ನಗೆಮೊಗದಿಂದ ಆಡಬಲ್ಲನು, ಚಿರಶಾಂತಿಯ ಅನುಭವವನ್ನು ಪಡೆಯಬಲ್ಲನು. ಸರ್ವದಾ ಜೀವನ್ಮುಕ್ತ ಸ್ಥಿತಿಯಲ್ಲಿ ಇರಬಲ್ಲನು.

ನನ್ನ ಯೋಚನೆ ತನ್ನ ತಾನದಿ
ತನನ ತನನನನವೆನುತಿರೆ
ಕುಸ್ನಿ ಮಾನವನೆನ್ನುವುದ ನಾ
ಮರೆತು ಮೌನದಿ ಬೆರೆತಿರೆ ೧

ಗೋಲಿಗುಂಡಾಗಿತ್ತು ವಿಶ್ವವು—
ನಾನು ಏರಿದ ಎತ್ತರ!
ಗೋಲಗ್ರಹಗಳು ಕೈಗೆಟಕುತಿವೆ—
ನಾನು ಹರಡಿದ ಬಿತ್ತರ! ೨

ಪೂರ್ವ-ಪಶ್ಚಿಮ ದಕ್ಷಿಣೋತ್ತರ
ದಿಕ್ಕೆ ದಿಕ್ಕೆಟ್ಟೋಡಿವೆ
ನೀಲದಾಕಾಶದಲಿ ನಲಿಯುತ
ಗಾಳಿಬೆಳಕುಗಳಾಡಿವೆ. ೩

## ಮೌನ

ನಾನು ಎಂಬುದು ಇರುವ ವರೆಗೂ
“ ನೀಲ ” ಕಣ್ಣಿಗೆ ತೋರ್ಪುದು.
ನಾನೆ “ ಅವ ”ನಲಿ ಬೆರೆತು ಕರಗಲು
ನೀಲ ಪ್ರಭೆಯೊಳು ಸೇರ್ಪುದು. ೪

ಆಹ ! ಆಹಾ ! ಮೌನಗೀತವೆ
ಏನು ಮಿಡಿತವು ನಿನ್ನದು !
ಎಲ್ಲಿಗೇರಿಸಿ ಏನ ತೋರುವೆ
ನಿನಗೆ ಶರಣೋ ನನ್ನದು ! ೫

—ದೇಸಾಯಿ ದತ್ತಮೂರ್ತಿ

---

ಹೃದಯದಲ್ಲಿ ಏಕಾಗ್ರತೆಯನ್ನು ಸಾಧಿಸಿರಿ. ಅದರೊಳಗೆ ಪ್ರವೇಶಿಸಿರಿ. ಆಳವಾಗಿ, ದೂರವಾಗಿ ಒಳಗೆ ಹೋಗಿರಿ. ಸುತ್ತೂಕಡೆಗೆ ಚದರಿದ ನಿಮ್ಮ ಪ್ರಜ್ಞೆಯ ಎಳೆಗಳನ್ನೆಲ್ಲ ಒಂದುಗೂಡಿಸಿರಿ. ಅವುಗಳನ್ನೆಲ್ಲ ಸುತ್ತಿ ಒಳಗೆ ಧುಮುಕಿರಿ. ತಳದ ವರೆಗೆ ಮುಳುಗಿರಿ.

ಅಲ್ಲಿ ಹೃದಯದ ಗಂಭೀರ ಮೌನದಲ್ಲಿ ಒಂದು ಅಗ್ನಿ ಪ್ರಜ್ವಲಿಸುತ್ತಿರುವುದು. ಅದು ನಿಮ್ಮೊಳಗಿನ ದೇವತ್ವ; ನಿಮ್ಮ ನಿಜವಾದ ಜೀವಸತ್ತ್ವೆ. ಅದರ ವಾಣಿಯನ್ನು ಆಲಿಸಿರಿ. ಅದರ ನಿರ್ದೇಶನವನ್ನು ಅನುಸರಿಸಿರಿ.

—ಶ್ರೀ ತಾಯಿಯವರು

# ಅಗಲಿದ ಗೆಳೆಯರಿಗೆ

ಹಾಡಿದರೆ ಹಾಡುವದು ತುಂಬುಗೊರಲಿನ ಹಾಡು,
ನಿಲಿಸಿದರೆ ನಿಲಿಸುವದು ನಲಿಯುತೊಂದಿಹ ನಾಡು,
ತಪಿಸಿದರೆ ತಪಿಸುವದು ಪೂರ್ಣಯೋಗದ ತಪವ,
ಜಪಿಸಿದರೆ, – ಯುಗ ಸ್ವರ್ಣಯುಗವಾಗಿಸುವ ಜಪವ !

ನೋಂಪಿಯಿಂ ನೋಂತು, ಓ ಅಣ್ಣ ! ನೀ ನಲಿದೆ !
ಮಾ-ತಾಯ ಚರಣಾರವಿಂದಗಳಿಗೊಲಿದೆ,
ಬಾಳು ಬಾಳುವೆಯ ಪರಮಾಗಮವಿದೆಂದೆ.
ತಾಯ ಸನ್ನಿಧಿ ಔಪನಿಷದುಗುಮುವೆಂದೆ.

ತಾಯ ಕೈಯಲಿ ನೀನು ಚಿನ್ಮಯದ ತಿಳಲು,
ತಂದೆಯಾ ಕೈಯಲ್ಲಿ ಇಂಬಾದ ಕೊಳಲು,
ಕೊಳಲಾಯ್ತು ಬರಿ ಸ್ವರವು,— ಆ ಕೊರಲ ಸೇರಿ.
ತಿಳಲಾಯ್ತು ಬರಿ ಜ್ಯೋತಿ ದೃಷ್ಟಿಯನು ಮೀರಿ.

ರಾಗಭೋಗದ ಹುಯಿಲು ಗಾಳಿಗಳು ಬೀಸಿ
ರೊಂಯ್ಗುಡಲು- ಅವಕೆ ಕಿವಿಗೊಡದಿಹುದೆ ವಾಸಿ !
ಅವಕೆ ಮಾನವಹೃದಯವಾಯ್ತೊಂದು ಕಹಳೆ,
ಮನುಕುಲವು—ಆನುವಂಶಿಕದ ಬಿದಿರುಮೆಳೆ !

ನೀನಾದೆ ಯೋಗೀಶ್ವರನ ಕೈಗೆ ಮುರಲಿ :
ನೀನೆಂದೆ : ಇದೆ ಚಿನ್ನು, ಬಾಳಿದೆನಗಿರಲಿ ;
ಸಪ್ತಸ್ವರಗಳ ಗಾನ ಹೊಳೆಯಾಗಿ ಹರಿದು
ತರಲಿ ಸಂತೃಪ್ತಿಯನು, ಶೂನ್ಯತೆಯು ಸರಿದು.

ಹೊಸತಾಗಿ ಹುಟ್ಟಿಂದು ಮಾತಾಯಿ ತಾನು
ಮರುಗನಿತ್ತುದ ನೋಡಿ ನಸುನಗುತ ನೀನು
ತಾಯ ಹರಕೆಯ ಹೊತ್ತು ಶಾಂತಮಾನಸನು, -
ಮುನ್ನಡೆದೆ ಹಿಂಡಗಲಿ,— ನಚ್ಚಿನೌರಸನು.

ಅಗಲಿದ ಗೆಳೆಯನಿಗೆ

ಎಲ್ಲಿ ಆ ಉತ್ಸಾಹ, ಆ ಅಮೃತ ಹಾಸ!
ಈಗೆಲ್ಲಿ! ಓ ಗೆಳೆಯ! ತವ ಮಧುರವಾಸ!
ಮಾತಾಯಿ ಸಲುಹಿರುವ ವಟವೃಕ್ಷದಲ್ಲಿ:
ಜೀವರಾಶಿಯ ಕಾಯ್ವ ವಕ್ಷದಲ್ಲಿ!

ವಿನಾಯಕ

ನಡೆದುಹೋದುದನ್ನು ಶಾಂತಿಯಿಂದ ಸ್ವೀಕರಿಸತಕ್ಕದ್ದು. ಅದು ಆಗಲೇಬೇಕಾಗಿತ್ತು; ಅದು ಆ ಜೀವಾತ್ಮನು ಜನ್ಮಜನ್ಮಗಳಲ್ಲಿ ಪಡೆಯುವ ಪ್ರಗತಿಗೆ ಅವಶ್ಯಕವೇ ಇತ್ತು. ಬರಿ ವರ್ತಮಾನಕಾಲದ ಕಡೆಗೆ, ಹೊರಗಿನ ತೋರಿಕೆಯ ಕಡೆಗೆ ನೋಡುವ ಸಾಮಾನ್ಯದೃಷ್ಟಿಗೆ ಅದು ಹಾಗೆ ತೋರದಿರಬಹುದಾಗಿದೆ. ಅಧ್ಯಾತ್ಮಸಾಧಕನಿಗೆ ಮರಣವು ಜೀವನದ ಒಂದು ಅಭಿವ್ಯಕ್ತಿಯಿಂದ ಇನ್ನೊಂದರ ಕಡೆಗೆ ಒಯ್ಯುವ ಮಾರ್ಗವಾಗಿದೆ. ಯಾರೂ ಸಾಯುವುದಿಲ್ಲ, ಬರಿ ಸ್ಥಾನಪಲ್ಲಟ ಮಾಡುವರು. ಸಾವನ್ನು ಈ ದೃಷ್ಟಿಯಿಂದ ನೋಡು. ಪ್ರಾಣಪ್ರೇರಿತ ಶೋಕದ ಪ್ರತಿಕ್ರಿಯೆಗಳನ್ನು ನಿನ್ನೊಳಗಿನಿಂದ ತಳ್ಳಿಬಿಡು— ಅವು ಅಗಲಿದ ಜೀವಾತ್ಮನ ಪ್ರಯಾಣದಲ್ಲಿ ನೆರವಾಗಲಾರವು. ನಿನ್ನ ದಿವ್ಯಧ್ಯೇಯದತ್ತ ಸ್ಥಿರಮನಸ್ಕನಾಗಿ ಸಾಗು.

—ಶ್ರೀ ಅರವಿಂದರು

# ನಿವೇದನ

ಶ್ರೀ ಮಾತೆಯವರ ದಿವ್ಯಾಶೀರ್ವಾದಗಳೊಂದಿಗೆ ಹುಬ್ಬಳ್ಳಿಯಲ್ಲಿ ಶ್ರೀ ಅರವಿಂದ ಮಂಡಲವು ಮೇ ದಿನಾಂಕ ೨೨ ರಲ್ಲಿ ಪ್ರಾರಂಭವಾಯಿತು. ಪ್ರತಿ ರವಿವಾರ ಸಾಯಂಕಾಲದಲ್ಲಿ ಧ್ಯಾನ-ಪ್ರಾರ್ಥನೆಗಳನ್ನು ಅದು ನಡೆಯಿಸಿಕೊಂಡು ಬಂದಿದೆ. ಇಂಗ್ಲಿಷಿನಲ್ಲಿಯೂ ಭಾರತದ ಹಲವು ದೇಶ ಭಾಷೆಗಳಲ್ಲಿಯೂ ಶ್ರೀ ಅರವಿಂದ ಸಾಂವತ್ಸರಿಕ ಸಂಪುಟಗಳು ಪ್ರಕಟವಾಗುತ್ತಿರುವಂತೆ ಕನ್ನಡದಲ್ಲಿಯೂ ಆಗಬೇಕೆಂದು ಮಂಡಲಕ್ಕೆ ತೋಚಿದ ಮೇರೆಗೆ, ಶ್ರೀ ಮಾತೆಯವರ ಆಶೀರ್ವಾದಗಳನ್ನು ಪಡೆದು, ಪ್ರಸ್ತುತ ಸಂಪುಟದ ಮಾತೃಕೆಯನ್ನು ಸಿದ್ಧಗೊಳಿಸಿ, ಕಳೆದ ಆಗಸ್ಟ್ ೧೫ ನೆಯ ದಿನಾಂಕ, ಶ್ರೀ ಅರವಿಂದರ ಹಾಗೂ ಶ್ರೀ ಮಾತೆಯವರ ಅಡಿದಾವರೆಗಳಲ್ಲಿ ಅರ್ಪಿಸಲಾಯಿತು. ಅದನ್ನು ಮುದ್ರಿತರೂಪದಲ್ಲಿ ಈ ನವಂಬರ ೨೪ ರ "ದರ್ಶನ" ಸಮಯದಲ್ಲಿ ಸಮರ್ಪಿಸಲು ಸಾಧ್ಯವಾಗಿದೆ. ಮುಂದಿನ "ಸಮರ್ಪಣ" ದ ಸಂಪುಟಗಳನ್ನು ಪ್ರತಿವರ್ಷ ಆಗಸ್ಟ್ ೧೫ ನೆಯ ದಿನವೇ ಒದಗಿಸಬೇಕೆಂದು ಮಂಡಲದ ಅಭಿಲಾಷೆಯಿದೆ.

ಹುಬ್ಬಳ್ಳಿಯ ಶ್ರೀ ಅರವಿಂದ ಮಂಡಲವು ಪ್ರಾರಂಭವಾಗುವಾಗ ಅಗತ್ಯವಿದ್ದ ಸಲಹೆ-ಸೂಚನೆಗಳನ್ನು ಶ್ರೀ ಮಾತೆಯವರಿಂದ ಪಡೆದು ಒದಗಿಸಿದ ಶ್ರೀ ಅರವಿಂದಾಶ್ರಮವಾಸಿಗಳಾಗಿದ್ದ, ಕನ್ನಡ ನಾಡಿಗೆ ಸುಪರಿಚಿತರಾಗಿದ್ದ ದಿವಂಗತ ಶ್ರೀ. ಶಂಕರಗೌಡರನ್ನು ನೆನೆಯುವುದು ಮಂಡಲದ ಕೇವಲ ಕೃತಜ್ಞತಾಸೂಚನೆಯಾಗಿದೆ. "ಅಗಲಿದ ಗೆಳೆಯರಿಗೆ" ಎಂಬ ಕವನವು ಅವರನ್ನೇ ಕುರಿತಾಗಿದೆ.

"ಸಮರ್ಪಣ" ಕ್ಕೆ ಒಪ್ಪುವ ರೀತಿಯಲ್ಲಿ ( ಹೊದಿಕೆಯ ಮೇಲ್ಪುಟದಲ್ಲಿ ಅಚ್ಚಾದ ) "ಮುದ್ರೆ" ಯ ( design ) ಚಿತ್ರವನ್ನು ಶ್ರೀ ಅರವಿಂದಾಶ್ರಮವಾಸಿಗಳಾದ ಕಲಾವಿದ ಶ್ರೀ. ಜಯಂತಿಲಾಲರು ಬರೆದುಕೊಟ್ಟಿರುವರು. ಅವರಿಗೆ ಮಂಡಲವು ಕೃತಜ್ಞವಾಗಿದೆ. ಅದರಂತೆಯೆ ಅಲ್ಲಲ್ಲಿ ಸೇರಿಸಲಾದ ಚಿತ್ರಗಳ ಮೂಲಪ್ರತಿಗಳನ್ನು ಒದಗಿಸಿದುದಕ್ಕೆ ಶ್ರೀ ಅರವಿಂದಾಶ್ರಮದ ಕಾರ್ಯವಾಹರಿಗೆ ಮಂಡಲವು ಋಣಿಯಾಗಿದೆ.

ಕೊನೆಗೆ ಈ ಕಾಣಿಕೆಯು ಇಷ್ಟು ಮನೋಹರವಾಗಿ ಸಕಾಲದಲ್ಲಿ ವಾಚಕರ ಕೈಸೇರಲು ಕಾರಣರಾದ ಸಂಯುಕ್ತ ಕರ್ನಾಟಕ ಮುದ್ರಣಾಲಯದವರಿಗೂ ಮಂಡಲವು ಕೃತಜ್ಞತೆಯನ್ನು ಸೂಚಿಸುತ್ತದೆ.

ನವಂಬರ ೨೪,
೧೯೫೦.

**ಶ್ರೀ ಅರವಿಂದ ಮಂಡಲ**
ಹುಬ್ಬಳ್ಳಿ